# ಕನ್ನಡಿ

['ಕನ್ನಾಡಿ' ಎಂಬ ಮಲಯಾಳ ಭಾಷೆಯ ಕಾದಂಬರಿಯ ಕನ್ನಡ ಅನುವಾದ]

ಪಿ. ಕೇಶವದೇವ್

ಅನುವಾದ:

ಎಂ. ರಾಮು



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಹೊಸ ದೆಹಲಿ

# ಮುನ್ನುಡಿ

ಮಲಯಾಳಮ್ ಕಾದಂಬರೀ ಸಾಹಿತ್ಯದಲ್ಲಿ ಅತಿ ಮುಖ್ಯರಲ್ಲೊಬ್ಬರಾದ ಪಿ. ಕೇಶವದೇವ್ ಅವರ 'ಕಣ್ಣಾಡಿ' (ಕನ್ನಡಿ) ಕಾದಂಬರಿಯ ಬಗ್ಗೆ ಮುನ್ನುಡಿ ಬರೆಯಲು ನನಗೆ ಅಭಿಮಾನವಿದೆ. ವಾಸ್ತವವಾಗಿ ಕೇಶವದೇವ್ ಅವರಿಗೆ ಮುನ್ನುಡಿಯಲ್ಲೂ ಮುನ್ನುಡಿಗಾರರಲ್ಲೂ ವಿಶ್ವಾಸವಿಲ್ಲ. ದೇವ್ ಅವರ ಪುಸ್ತಕಗಳಿಗೆ ಮುನ್ನುಡಿ ಬರೆಯಬೇಕಿದ್ದರೆ ಅವರೊಬ್ಬ ವಿಶಿಷ್ಟ ವ್ಯಕ್ತಿಯಾಗಿರಬೇಕೆಂದು ಅವರ ನಿರ್ಬಂಧವಿದೆ. ಆ ವಿಶಿಷ್ಟ ವ್ಯಕ್ತಿ ಕೇಶವದೇವ್ ಅವರೇ ! ವಿಮರ್ಶಕನನ್ನು ಕಡೆಗಣಿಸಿಯೂ ಸಾಹಿತ್ಯ ಸೃಷ್ಟಿ ಸಾಧ್ಯವೆಂಬ, ಹಾಗೂ ವಿಮರ್ಶಕ ಸಾಹಿತ್ಯ ಸೃಷ್ಟಿಗೆ ಎಂದೂ ಸಹಕಾರಿಯಲ್ಲವೆಂಬ ದೃಢ ವಿಶ್ವಾಸದಿಂದಿರುವ ಅವರ ಒಂದು ಕೃತಿಯನ್ನು ವ್ಯಾಖ್ಯಾನಿಸುವುದಕ್ಕೆ ನಿಜವಾದ ಸಂತೋಷವೂ ಅಭಿಮಾನವೂ ನನಗಿದೆ. ಎಂದರೆ ತಗಳಿಯವರ 'ಪಣಿಪ್ಪಡಿಗಳ್' (ಪಣಿಯ ಮೆಟ್ಟಲುಗಳು), ಎಂ. ಟಿ. ವಾಸುದೇವನ್ ನಾಯರ್ ಅವರ 'ನಾಲ್‌ಕೆಟ್ಟ್' (ನಾಲ್ಕು ಕಟ್ಟುಗಳು), ಪಾರಪ್ಪುರಂ ಅವರ 'ಅರನಾಳಿಗ ನೇರಂ' (ಅರೆಗಳಿಗೆ ಹೊತ್ತು) ಮೊದಲಾದವು ಇತರ ಭಾಷೆಗಳಿಗೆ ಭಾಷಾಂತರಗೊಳ್ಳುವವೇಳೆ ಅವುಗಳ ಸಾಲಿನಲ್ಲಿ ಸೇರಬೇಕಾದ ಕೇಶವದೇವ್ ಅವರ ಕಾದಂಬರಿ 'ಕನ್ನಡಿ'ಯಲ್ಲ ಎಂದು ನನ್ನ ಅಭಿಪ್ರಾಯ. ಅವರ 'ಅಯಲ್ಕಾರ್' (ನೆರೆಹೊರೆಯವರು) ಎಂಬ ಕಾದಂಬರಿಯು ಭಾಷಾಂತರಕ್ಕೆ ಬಹಳ ಅರ್ಹತೆಯನ್ನು ಪಡೆದುದಾಗಿದೆ. ಅದು ಬಿಟ್ಟರೆ 'ಓಡಯಿಲ್‌ನಿನ್ನ್' (ತೊರೆಯಿಂದ). ಇವೆರಡೂ ದೇವ್ ಅವರ ಕಾವ್ಯ ಪ್ರತಿಭೆಯ ವಿಕಾಸದ ಎರಡು ಘಟ್ಟಗಳನ್ನು ಪ್ರತಿನಿಧೀಕರಿಸುವ ಕೃತಿಗಳಾಗಿವೆ. 'ಕನ್ನಡಿ' ಯಾವರೊ ಕೇಶವದೇವ್ ಅವರ ಸಾಹಿತ್ಯೋಪಾಸನೆಯ ಒಂದು ನಿದರ್ಶನವನ್ನು ಎತ್ತಿ ತೋರಿಸುವ ಕೃತಿಯಾಗಿದೆ. ಅದರಲ್ಲಿ ಕೇಶವದೇವ್ ಇಲ್ಲವೆಂದಲ್ಲ ತೀರ್ಮಾನ. ಕೇಶವದೇವ್ ಎಂಬ ಕಾದಂಬರಿಕಾರನ ಬಹುಮುಖ ಸಿದ್ಧಿಗಳ ಪ್ರಯೋಗದಿಂದಲೂ ಪ್ರಕಟಣೆಯಿಂದಲೂ ಇತರ ಕಾದಂಬರಿಗಳಿಗಿಂತ ಮುಂದೆ ನಿಲ್ಲುವಂತಹದ್ದಲ್ಲ 'ಕನ್ನಡಿ' ಕಾದಂಬರಿ ಎಂದು ಮಾತ್ರ. ಸಾಂಕೇತಿಕವಾದ ಯಾವುದೋ ಕಾರಣಗಳಿಂದಲಾಗಿ ನ್ಯಾಶನಲ್ ಬುಕ್ ಟ್ರಸ್ಟಿಗೆ ಇತರ ಎರಡು ಕೃತಿಗಳನ್ನು ಭಾಷಾಂತರಕ್ಕೆ ಆರಿಸಲು ಸಾಧ್ಯವಾಗದೆ ಹೋಯಿತು ಎಂದು ನನ್ನ ಅಭಿಪ್ರಾಯ.

೧೯೦೪ ಆಗಸ್ಟ್ ತಿಂಗಳಲ್ಲಿ ಹುಟ್ಟಿದ (ಈ ರಹಸ್ಯವನ್ನು ಪ್ರಕಾಶಕ್ಕೆ ತಂದುದಕ್ಕೆ ಕೇಶವದೇವ್ ನನ್ನೊಡನೆ ಸಿಟ್ಟುಗೊಳ್ಳದಿರಲಿ !) ನೆಲ್ಲಡತ್ತು ಪದ್ಮನಾಭ ಪಿಳ್ಳೆ ಕೇಶವ ಪಿಳ್ಳೆ, 'ಕೇಶವದೇವ್' ಆದುದರಲ್ಲಿ ಒಂದು ಸುಂದರವಾದ ಕಥೆಯಿದೆ. ಹದಿನೆಂಟನೇ ವಯಸ್ಸಿನಲ್ಲಿ ಕೇಶವ ಪಿಳ್ಳೆ ಆರ್ಯಸಮಾಜಕ್ಕೆ ಸೇರಿದರು. ಸಮಾಜದ ಅನಾಚಾರ

ಅನೀತಿಗಳಿಗೆದುರಾಗಿ ಹೋರಾಟ ನಡೆಸಲು ಅವಶ್ಯವಾದ ಅಭಿವಾಂಛನೆಯಾಗಿರ ಬೇಕು, ನರಗಳಲ್ಲಿ ಸಮರ ವೀರ್ಯ ಹರಿಯುತ್ತಿದ್ದ ಆ ಯುವಕನನ್ನು ಅದಕ್ಕೆ ಪ್ರೇರೇಪಿ ಸಿದ್ದು. ಆರ್ಯಸಮಾಜದಲ್ಲಿ ಸದಸ್ಯನಾಗುವ ಸಂದರ್ಭದಲ್ಲಿ, ಹೊಸ ಹೆಸರಿಡುವ ಕ್ರಮವಿದೆ. ಆ ನಾಮಕರಣೋತ್ಸವದಲ್ಲಿ ಸಮಾಜದ ಕಾರ್ಯಕರ್ತ ಋಷಿರಾಮ್ ಕೇಳಿದರು:

"ನಿನಗೆ ದೇವನಾಗಬೇಕೊ ದಾಸನಾಗಬೇಕೊ?"

ಒಂದು ನಿಮಿಷವು ಕೂಡಾ ಆಲೋಚನೆ ಮಾಡದೆ, ಕೇಶವ ಪಿಳ್ಳೆ ಉತ್ತರಿಸಿದ್ದು:

"ನನಗೆ ದೇವನಾದರೆ ಸಾಕು, ದಾಸನಾಗುವುದು ಬೇಡ!"

ಈ ವಿಷಯವನ್ನು ಇಲ್ಲಿ ಉದ್ಧರಿಸಿದ್ದು ಕೇಶವದೇವ್ ಅವರ ಜೀವನಕ್ಕೂ ಸಾಹಿತ್ಯ ಸೃಷ್ಟಿಗೂ ಅದು ಪ್ರಕಾಶ ಬೀರುವುದು ಎಂದು ಗ್ರಹಿಸಿಕೊಂಡು. ಪ್ರತಿಭಟನಾ ಶಕ್ತಿಯ ನಾಯಕನಾಗಿದ್ದಾರೆ ಕೇಶವದೇವ್. 'ಪ್ರತಿಭಟಿಸು, ಎಲ್ಲವನ್ನೂ ಯಾವು ದನ್ನೂ ಪ್ರತಿಭಟಿಸು' ಅದಾಗಿದೆ ಅವರ ಸಿದ್ಧಾಂತ. ಕೇರಳದ ಕಮ್ಯೂನಿಸ್ಟ್ ಪಾರ್ಟಿಯ ಮೊದಲ ಪ್ರಚಾರಕರಲ್ಲಿ ಒಬ್ಬರಾಗಿದ್ದ ಕೇಶವದೇವ್, ಆಮೇಲೆ ಒಮ್ಮೆ, ಅದರ ಅತಿ ದೊಡ್ಡ ಎದುರಾಳಿಗಳಲ್ಲಿ ಒಬ್ಬರಾದರು. ಸಾಹಿತಿಗಳಿಗೆ 'ಅವಾರ್ಡು' ಕೊಡುವುದನ್ನು ಕಟುವಾಗಿ ಟೀಕಿಸಿರುವ ಅವರು ಕೇಂದ್ರ ಸಾಹಿತ್ಯ ಅಕಾದಮಿಯ 'ಅವಾರ್ಡು' ಸ್ವೀಕರಿಸಿದರು. ಒಂದುವೇಳೆ ಎದುರಿಸುವ ವಿಷಯದಲ್ಲಿ ದೇವ್ ಅವರು ಗಟ್ಟಿಯಾಗಿ ನಿಂತಿರುವ ಒಂದು ಸಂಗತಿಯೆಂದರೆ ಕೇವಲ ವಿಮರ್ಶೆಯ ಬಗ್ಗೆ ಮಾತ್ರವೆಂದು ತೋರುತ್ತದೆ. ವಿಮರ್ಶಕರೊಡನೆ ಅವರ ವ್ಯವಹಾರವೆಂದರೆ ಸಂಧಿಯಿಲ್ಲದ ಹೋರಾಟ ವಾಗಿದೆ—ಅಂದೂ, ಇಂದೂ, ಎಂದೆಂದೂ!

ಮಲಯಾಳಮ್ ಕಾದಂಬರೀ ಸಾಹಿತ್ಯದಲ್ಲಿ ಕೇಶವದೇವ್ ಅವರಿಗಿರುವ ಸ್ಥಾನ ವನ್ನು ಕುರಿತು ಆಲೋಚಿಸುವಾಗ, ಮಲಯಾಳಮ್ ಕಾದಂಬರೀ ಸಾಹಿತ್ಯವನ್ನಷ್ಟು ಪರಾಮರ್ಶಿಸುವುದು ಅಸಂಗತವಾಗದು ಎಂದು ತೋರುತ್ತದೆ. ಭಾರತದಲ್ಲಿ ಕಾದಂಬರೀ ಸಾಹಿತ್ಯವು ಪ್ರಚಾರಕ್ಕೆ ಬಂದು, ಹೆಚ್ಚೆಂದರೆ ನೂರ ಎಪ್ಪತ್ತೈದು ವರ್ಷ ಗಳಾಗಿವೆ. ಮಲಯಾಳಮ್‌ದಲ್ಲಾದರೆ ಅದರ ಸರೀ ಅರ್ಧ ಮಾತ್ರ! ೧೮೦೧ರಲ್ಲಿ ಬಂಗಾಳಿಯಲ್ಲಿ ಪ್ರಸಿದ್ಧೀಕರಿಸಲ್ಪಟ್ಟ 'ಪ್ರತಾಪಾದಿತ್ಯ ಚರಿತ್ರೆ' ಎಂಬುದೇ ಮೊಟ್ಟ ಮೊದಲಿನ ಭಾರತೀಯ ಕಾದಂಬರಿಯಾಗಿದೆ. ಬಂಗಾಳಿಯಲ್ಲಿ ಜನಿಸಿದ ಗದ್ಯ ಸಾಹಿತ್ಯ ಹಿಂದಿಯಲ್ಲೂ ಉರ್ದುವಿನಲ್ಲೂ ಮರಾಠಿಯಲ್ಲೂ ಬೆಳೆಯಿತು ಮತ್ತು ವಿಕಾಸಗೊಂಡಿತು. ಆದರೆ ಅದರ ತೆಂಕಣ ದಿಕ್ಕಿಗೆ ಪ್ರಯಾಣ ಮಂದಗತಿಯಲ್ಲಾಗಿತ್ತು. ೧೭೯೩ರಲ್ಲಿ ಬೈಬಲಿನ ಗದ್ಯ ತಮಿಳಿನಲ್ಲಿ ಭಾಷಾಂತರಿಸಲ್ಪಟ್ಟಿದ್ದರೂ, ಮೊದಲ ಕಾದಂಬರಿಯ ಜನನಕ್ಕೆ ೧೮೭೯ರ ವರೆಗೆ ಕಾದಿರಬೇಕಾಯಿತು. ತಮಿಳು ಕಾವ್ಯಗಳ ಶಕ್ತಿಯುತವೂ ಸಮಗ್ರವೂ ಆದ ಪ್ರಚಾರವೇ ಅದಕ್ಕೆ ಕಾರಣವೆಂದು ಹೇಳುತ್ತಾರೆ. ಕೇರಳದಲ್ಲಿ ಕಾದಂಬರೀ ಸಾಹಿತ್ಯ ರೂಪಗೊಳ್ಳಲು ಮತ್ತೂ ಸ್ವಲ್ಪ ಸಮಯ ಬೇಕಾಗಿ

ಬಂದರೂ ೧೮೮೯ರಲ್ಲಿ, ಒಯ್ಯಾರತ್ತು ಚೆಂದು ಮೆನನ್ ಅವರ 'ಇಂದುಲೇಖ' ಹೊರಗೆ ಬಂದುದರೊಂದಿಗೆ ಮಲಯಾಳಮ್ ಗದ್ಯಸಾಹಿತ್ಯದ ನವೋತ್ಥಾನ ಕಾಲ ಘಟ್ಟದ ಉದ್ಘಾಟನೆ ಮಾಡಲ್ಪಟ್ಟಿತು ಎಂದು ಹೇಳಬಹುದು. ಡಿಸ್ರೇಲಿಯ 'ಹಾನ್ ರಿಟೊ ಟೆಂಪ್ಲ್' ಕಾದಂಬರಿಯಿಂದ ಚೆಂದು ಮೆನನ್ 'ಇಂದುಲೇಖ'ದ ಪ್ರಚೋದನೆ ಗೊಂಡುದೆಂದೂ ಸಿ. ವಿ. ರಾಮನ್ ಪಿಳ್ಳೆ 'ಮಾರ್ತಾಂಡವರ್ಮ' ಎಂಬ ಕೃತಿಗೆ ಸರ್ ವಾಲ್ಟರ್ ಸ್ಕಾಟ್‌ನ 'ಐವಾನ್ ಹೋ'ದಿಂದ ಉತ್ತೇಜನಗೊಂಡುದೆಂದೂ ಹೇಳುವ ನುಡಿ ಅರ್ಥಪೂರ್ಣವಾಗಿದೆ. ಕಾರಣ, ಆಂಗ್ಲ ಸಾಹಿತ್ಯದ ಹೆಜ್ಜೆಯನ್ನನುಸರಿಸಿ ಮಲಯಾಳಮ್‌ದಲ್ಲಿ ಬೇರೂರಿದ ಸಾಹಿತ್ಯ ಶಾಖೆಯಾಗಿದೆ, ಕಾದಂಬರಿ. ಕಾದಂಬರಿ, ಕಿರುಗತೆ, ನಾಟಕ, ಉಪನ್ಯಾಸ, ವಿಮರ್ಶೆ, ಜೀವನ ಚರಿತ್ರೆ, ಚರಿತ್ರೆ, ಯಾತ್ರಾನುಭವ ಸಾಹಿತ್ಯ ಎಂಬಿತ್ಯಾದಿ ಮಲಯಾಳಮ್‌ದಲ್ಲಿ ಏನೆಲ್ಲಾ ಆಧುನಿಕ ಸಾಹಿತ್ಯ ವಿಭಾಗಗಳಿವೆ, ಅವಕ್ಕೆಲ್ಲಾ ಮೌಲಿಕವಾಗಿ ಇಂಗ್ಲಿಷಿನಲ್ಲಿ ಸಮಾನ ರೂಪಗಳನ್ನು ಕಾಣಬಹುದು. ಆದರೆ ಕಾದಂಬರಿಯ ವಿಷಯದಲ್ಲಿ ಬೇರೊಂದು ವ್ಯತ್ಯಾಸ ಕಾಣಬಹುದು. ಸಾಹಿತ್ಯದ ಬೇರೆಲ್ಲಾ ವಿಭಾಗಗಳಿಗೆ ಮಲಯಾಳಮ್ ಭಾಷೆಯಲ್ಲಿ ಸ್ವಂತ ಹೆಸರುಗಳಿವೆ. ಆದರೆ ಕಾದಂಬರಿಗೆ ಮಾತ್ರ ಅದಿಲ್ಲ. ಮಲಯಾಳಮ್‌ದಲ್ಲಿ ಕಾದಂಬರಿಗೆ 'ನಾವಲ್' ಎಂದೇ ಹೆಸರು. ಭಾಷೆಯ ಹಿಡಿತಕ್ಕನುಸರಿಸಿ ಇರುವ 'ಆಖ್ಯಾಯಿಕೆ' ಎಂಬ ಪರ್ಯಾಯ ನಾಮವು ಪ್ರಚಾರಲುಪ್ತವಾಗಿದೆ.

ಹತ್ತೊಂಬತ್ತನೇ ಶತಮಾನದ ಕೊನೆಯ ದಶಕದಲ್ಲಿ ಚೆಂದು ಮೆನನ್ ಮತ್ತು ಸಿ. ವಿ. ರಾಮನ್ ಪಿಳ್ಳೆಯವರು ರಂಗಪ್ರವೇಶ ಮಾಡಿದ ತರುವಾಯದ ಮೂವತ್ತು ವರ್ಷಗಳ ಕಾಲದಲ್ಲಿ ಮಲಯಾಳಮ್ ಕಾದಂಬರಿ ಸಾಹಿತ್ಯರಂಗದಲ್ಲಿ ಬರಗಾಲದ ಕಾಲಘಟ್ಟವಾಗಿತ್ತು. ಇಂಗ್ಲಿಷ್ ಸಾಹಿತ್ಯದ ಪ್ರಚೋದನೆಯ ಸರಣಿಯಲ್ಲಷ್ಟೇ ತಲ್ಲೀನರಾಗಿ ಕಂಡಿದ್ದ ಮಲಯಾಳಮ್ ಸಾಹಿತ್ಯಗಾರರನ್ನು ವಿಶ್ವಸಾಹಿತ್ಯದ ಹಸಿರು ಭೂಮಿಯತ್ತ ಒಯ್ದುದು 'ಕೇಸರಿ' ಎ. ಬಾಲಕೃಷ್ಣ ಪಿಳ್ಳೆಯವರೆಂಬುದು ಸರ್ವವಿದಿತ. ಯೂರೋಪಿಯನ್ ಸಾಹಿತ್ಯದಲ್ಲಿ ಪಾಂಡಿತ್ಯ ಗಳಿಸಿದ ಅವರು ಯುವ ಬರಹಗಾರರ ಗುರುವೂ ಸ್ನೇಹಿತರೂ ಮಾರ್ಗದರ್ಶಿಯೂ ಆಗಿದ್ದರು. ಪಾಶ್ಚಾತ್ಯ ಸಾಹಿತ್ಯದ ಉತ್ತಮ ಕೃತಿಗಳನ್ನು ಮಲಯಾಳಿಗಳಿಗೆ ಪರಿಚಯ ಮಾಡಿಸಿದ್ದು, ಅವುಗಳಿಂದ ಪ್ರಚೋದನೆಗೊಂಡು ಸಾಹಿತ್ಯರಚನೆಯಲ್ಲಿ ಹೊಸ ದಾಖಲೆಯನ್ನು ರೂಪಿಸಲು ಬರಹಗಾರರಿಗೆ ಸಹಾಯ ಮಾಡಿದ್ದು 'ಕೇಸರಿ'.

ಮಲಯಾಳಮ್ ಸಾಹಿತ್ಯವು ಪರಿವರ್ತನಾಪರವಾಗಲು ಮತ್ತೊಂದು ಕಾರಣವು ಕೂಡಾ ಇದೆ. ೧೯೩೦ರ ವೇಳೆಗೆ ಇಂಡಿಯದ ದೇಶೀಯ ಪ್ರಸ್ಥಾನವು ರಾಷ್ಟ್ರೀಯ ಮುಂದಾಳುಗಳ ಕೈಯಲ್ಲಿ ಸುರಕ್ಷಿತವಾಗಿತ್ತು. ಎಳೆಯ ಬರಹಗಾರರನ್ನು ವಾಮ ಪಕ್ಷದ ಧೋರಣೆಗಳು—ಪ್ರತ್ಯೇಕವಾಗಿ ಮಾರ್ಕಿಸಂ ಮತ್ತು ಕಮ್ಯೂನಿಸಂ—ಆಕರ್ಷಿಸಲು ತೊಡಗಿದವು. ಅವರ ಹಿಂದಿನ ಸಮೀಪದ ತಲೆಮಾರು ಮಾಡಿದ ಮುಖ್ಯ

ಕಾರ್ಯವೆಂದರೆ ಪಾಶ್ಚಾತ್ಯ ಮತ್ತು ಪೌರಾತ್ಯ ಸಂಘಟನೆಗಳಾಗಿದ್ದುವು—ನೂರು ವರ್ಷಗಳಲ್ಲಿ ಬೆಳೆದುಬಂದ ಆಚಾರ ಸಂಹಿತೆಗಳ ಮತ್ತು ಹೊಸ ಪಾಶ್ಚಾತ್ಯ ಸಂಪ್ರದಾಯಗಳ ಸಂಘಟನೆ. ಸಾಮಾನ್ಯ ಸುಖಸೌಕರ್ಯಗಳಲ್ಲಿ ಜೀವಿಸಿದ್ದ ಮೇಲ್–ಮಧ್ಯಮ ವರ್ಗದ ಜನರ ಸ್ವಪ್ನ ಸಮ್ಮಿಳಿತವಾದ ವೀಕ್ಷಣವೂ ಆದರ್ಶತೆಯೂ ಆಗಿತ್ತು ಅವರಿಗೆ ದಾರಿ ತೋರಿಸಿದ್ದು. ಹೊಸ ಬರಹಗಾರರಾದರೊ ಅವರು ಸ್ವತಃ ಕರೆದುಕೊಂಡುದು ಮತ್ತು ಇತರರಿಂದ ಕರೆಸಿಕೊಂಡುದು 'ನಮ್ಮ ಸಾಹಿತಿ'ಗಳೆಂದು. ಆ ಹೆಸರಿನಲ್ಲಿ ಅವರು ಸುತ್ತುಮುತ್ತಲಿರುವ ದಾರಿದ್ರ್ಯ, ಕಷ್ಟ, ಶೋಷಣೆ, ಮಾರ್ದವಗಳನ್ನು ಕಂಡು ಅವುಗಳಿಂದ ಪ್ರಚೋದನೆಗೊಂಡು ಸಾಹಿತ್ಯ ನಿರ್ಮಾಣಕ್ಕೆ ತೊಡಗಿದರು. ಈ ಪರಿವರ್ತನೆಗೆ ಮುಂದಾಳುತ್ವ ವಹಿಸಿದವರಲ್ಲಿ ಮುಖ್ಯ ವ್ಯಕ್ತಿ ಕೇಶವದೇವ್.

ಧನಿಕರ ಮತ್ತು ಮೇಲ್ತರಗತಿಯ ಮಧ್ಯಮ ವರ್ಗದವರ ಸ್ವಾಗತಕೋಣೆಗಳಿಂದ ಸಾಹಿತ್ಯವನ್ನು ಬಡವನ ಮಡಲಿನ ಗುಡಿಸಲಿನೆಡೆಗೆ ಎಳೆದೊಯ್ಯುವ ಪ್ರಕ್ರಿಯೆಗೆ ಮುಂದಾಳುತ್ವ ವಹಿಸಿದ್ದು ತಾನೆಂಬುದರಲ್ಲಿ ಕೇಶವದೇವ್ ಅವರಿಗೆ ಅಭಿಮಾನವಿದೆ. ಮಲಯಾಳಮ್ ಸಾಹಿತ್ಯಕ್ಕೆ ಮೊದಲಾಗಿ ಸಾಮೂಹಿಕ ಘನತೆಯನ್ನುಂಟುಮಾಡಿದ್ದು ಮತ್ತು ಸಾಂಪತ್ತಿಕ ಬಂಧಗಳನ್ನು ಚಿತ್ರೀಕರಿಸಿದ್ದು ತಾನೆಂದು ಅವರು ವಿಶ್ವಾಸಿಸಿದ್ದಾರೆ. ಜೀವನದ ಇಷ್ಟೆಲ್ಲಾ ಮಂಡಳಗಳನ್ನು ಸಮಗ್ರವಾಗಿ ಸ್ಪರ್ಶಿಸುವ ರೀತಿಯಲ್ಲಿ ಮತ್ತಾರೂ ಬರೆಯಲಿಲ್ಲವೆಂದು ಅವರೇ ಭರವಸೆ ಕೊಡುತ್ತಾರೆ. ಅದು ಸತ್ಯವೂ ಹೌದು. ಸಾಮಾನ್ಯ ಇಪ್ಪತ್ತೈದು ಕಾದಂಬರಿಗಳು, ಹದಿನೈದು ಕಿರುಗತೆಗಳು, ಹನ್ನೊಂದು ನಾಟಕಗಳು, ಏಳು ಏಕಾಂಕ ನಾಟಕಗಳು, ನಾಲ್ಕು ಆತ್ಮಕಥೆಗಳು, ಒಂದು ಗದ್ಯ ಕಾವ್ಯ ಸಂಗ್ರಹ, ಒಂದು ನಿರೂಪಣಗ್ರಂಥ—ಇಷ್ಟು ಅಧಿಕ ಬಹುಮುಖ ಸಾಹಿತ್ಯ ನಿರ್ಮಾಣ ಮಾಡಿದವರು ಮಲಯಾಳಮ್‌ನಲ್ಲೇಕೆ ಇತರ ಭಾಷೆಗಳಲ್ಲೂ ಅಪರೂಪವಾಗಿರಬಹುದು. ಬಹುಶಃ ಕೇಶವದೇವ್ ಮುಟ್ಟದಿರುವ ಸಾಹಿತ್ಯಶಾಖೆಯೊಂದೇ—ಕಾವ್ಯ !

ಮಲಯಾಳಮ್ ಭಾಷೆಯ ಮೊದಲಿನ ಗಣನೀಯರಾದ 'ಪ್ರೊಲಿಟೇರಿಯನ್' ಸಾಹಿತ್ಯಕಾರ, ಕೇಶವದೇವ್ ಎಂದು ಹೇಳಬಹುದು. ಒಬ್ಬ ಕಲಾವಿದ ಎಂಬ ನೆಲೆಯಲ್ಲಿ ಒಂದುವೇಳೆ ಹೆಚ್ಚು ಗಣನೀಯರಾದ ತಗಳಿ ಶಿವಶಂಕರ ಪಿಳ್ಳೆಯವರನ್ನು ಅವಗಣಿಸಿಕೊಂಡಲ್ಲ ಇದನ್ನು ಹೇಳಿದ್ದು. ಆದರೆ ಸೋಷಿಯಲಿಸ್ಟ್ ಪ್ರಸ್ಥಾನಗಳನ್ನು ಒಟ್ಟುಮಾಡುವುದು ಮತ್ತು ದಾರಿ ತೋರುವುದು, ಅವುಗಳಿಂದ ಪ್ರಚೋದನೆಗೊಂಡು ಬರವಣಿಗೆಯಲ್ಲಿ ತೊಡಗಿದ್ದು, ಇದ್ದವನು ಇಲ್ಲದವನು ಎಂಬ ಭೇದಭಾವ ತೊರೆದು ತಮ್ಮೊಳಗಿನ ಸಾಮೂಹಿಕ ಬಂಧಗಳು ಮತ್ತು ಅವುಗಳ ಅನಿವಾರ್ಯ ಸಂಘಟನೆಗಳು, ಚರಿತ್ರಾಪರ ಹಿನ್ನೆಲೆಯಲ್ಲಿ ಅತೀವ ಪ್ರಜ್ಞಾಪೂರ್ವಕ ಚಿತ್ರೀಕರಣ ಮಾಡಿದ್ದು ಕೇಶವದೇವ್. ಕೇರಳದ ಟ್ರೇಡ್ ಯೂನಿಯನಿನ ಆದಿಯ ಮುಂದಾಳುಗಳಲ್ಲಿ

ಒಬ್ಬರಾದ ಕೇಶವದೇವ್ ಅವರಿಗೆ ಕೊಚ್ಚಿಯ ಮತ್ತು ಆಲಪ್ಪಿಯ ಕಾರ್ಮಿಕ ವರ್ಗವನ್ನು ಒಂದಾಗಿಸಲು ಮತ್ತು ಅವರ ಮಧ್ಯೆ ಅವರಲ್ಲೊಬ್ಬನಾಗಿ ಬದುಕಿ ಅವರನ್ನು ಇತರ ಎಲ್ಲರಿಗಿಂತಲೂ ಹೆಚ್ಚಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು. ಪರಿಸರದ ನೈಜತೆಯ ಸಂಯೋಜನೆಯನ್ನು ತಗಳಿಯವರ ಕಲಾಸೃಷ್ಟಿಯಲ್ಲಿ ನಾವು ಕಾಣುವ ವಾದರೆ, ಅವುಗಳ ಸಾಮೂಹಿಕ ಪ್ರತಿಫಲನವಾಗಿದೆ ನಾವು ಕೇಶವದೇವ್ ಅವರ ಕೃತಿಗಳಲ್ಲಿ ಕಾಣುವುದು. ತಗಳಿಯವರು ತಮ್ಮ ಅನುಭವಗಳಿಗೂ ನಿರೀಕ್ಷೆಗಳಿಗೂ ಕಲಾ ಪರವಾದ ರೂಪ ಕೊಡಲು ಶ್ರಮಿಸಿದರೆ ಕೇಶವದೇವ್ ಅವುಗಳಲ್ಲಿ ಸಾಮೂಹಿಕ ಭಾವನಿರ್ಮಾಣಕ್ಕೆ ಶ್ರಮಿಸಿದರು.

ಸಾಹಿತ್ಯವಲ್ಲ. ಜೀವನ ತನ್ನ ಮುಖ್ಯ ಲಕ್ಷ್ಯ ಎಂಬ ಸಿದ್ಧಾಂತವನ್ನು ಕೇಶವದೇವ್ ವ್ಯಕ್ತಪಡಿಸಲು ಎಂದೂ ಮರೆಯುವಂತಿಲ್ಲ. ಮಾತ್ರವಲ್ಲ ಅವಕಾಶ ಸಿಕ್ಕಿದಾಗಲೆಲ್ಲಾ ಅದನ್ನವರು ಗಟ್ಟಿಯಾಗಿ ಕೂಗಿ ಹೇಳಿದರು. 'ಕನ್ನಡಿ'ಯ ಮುನ್ನುಡಿಯಲ್ಲಿ ಅವರು ಹೇಳಿದ ಮಾತುಗಳನ್ನು ನೋಡಬಹುದು. "ನಾನು ಬರೆಯುವುದು ಸಾಹಿತ್ಯಸೃಷ್ಟಿ ಮಾಡಬೇಕೆಂಬ ಉದ್ದೇಶದಿಂದಲ್ಲ; ಸಾಹಿತಿಯಾಗಬೇಕೆಂಬ ಉದ್ದೇಶದಿಂದಲೂ ಅಲ್ಲ. ಸಾಹಿತ್ಯವು ಒಮ್ಮೆಯೂ ನನ್ನ ಮುಂದೆ ಒಂದು ಪ್ರಶ್ನೆಯಾಗಿ ನಿಂತಿಲ್ಲ. ಜೀವನ ವಾಗಿದೆ ನನ್ನ ಮುಂದಿರುವ ಪ್ರಶ್ನೆ. ಜೀವನ ವಿಮರ್ಶಕನೂ ವ್ಯಾಖ್ಯಾನಕಾರನೂ ಆದ ನಾನು ನನ್ನ ನಿರೂಪಣೆ ಮತ್ತು ವ್ಯಾಖ್ಯಾನವನ್ನು ಪ್ರದರ್ಶಿಸುವಾಗ ಅದು ಸಾಹಿತ್ಯವಾಗಿ ಪರಿವರ್ತಿತವಾಗುವುದು ಎಂದಷ್ಟೆ." ಈ ಲೇಖಕರೊಡನೆ ನಡೆಸಿದ ಒಂದು ಅಭಿಮುಖ ಸಂಭಾಷಣೆಯಲ್ಲಿ ಅವರು ಈ ಮಾತುಗಳನ್ನು ಆವರ್ತಿಸಿದರು: "ಸಾಹಿತ್ಯವು ನನ್ನ ಪ್ರಶ್ನೆಯಲ್ಲ: ಜೀವನವಾಗಿದೆ ನನ್ನ ಪ್ರಶ್ನೆ. ಜೀವನದ ಸುಖವನ್ನು ವರ್ಧಿಸುವುದು; ದುಃಖವನ್ನು ಕಡಿಮೆ ಮಾಡುವುದು—ಇದಾಗಿದೆ ನನ್ನ ಅಂತಿಮ ಲಕ್ಷ್ಯ. ಇವಕ್ಕಾಗಿ ನಾನು ಬರೆಯುವುದಷ್ಟೆ ಅಲ್ಲ, ಭಾಷಣ ಮಾಡುವುದೂ ಇದೆ. ಈ ರೀತಿಯಲ್ಲಿ ಒಂದು ಸದುದ್ದೇಶ ಸಾಹಿತಿಯಾಗಿದ್ದೇನೆ ನಾನು. ಈ ಸಮುದಾಯ ಬಂಧವಾಗಿದೆ ನನ್ನನ್ನು ಬರವಣಿಗೆಗೆ ಪ್ರೇರೇಪಿಸುತ್ತಿರುವುದು."

ಕೇಶವದೇವ್ ಒಬ್ಬ ಸಂಪೂರ್ಣ ಸದುದ್ದೇಶ ಸಾಹಿತಿಯಾಗಿದ್ದಾರೆ. ಸಾಮಾಜಿಕ ಪರಿವರ್ತನೆಯನ್ನು ಉದ್ದೇಶವಾಗಿಟ್ಟುಕೊಂಡಲ್ಲದೆ ಬೇರೆ ಒಂದಕ್ಷರವನ್ನೂ ಅವರು ಬರೆಯುವ ಪದ್ಧತಿಯಿಲ್ಲ. ಬರವಣಿಗೆಯು ತಮ್ಮ ಲಕ್ಷ್ಯ ಪ್ರಾಪ್ತಿಗೆ ಬೇಕಾಗಿ ಅವರು ಅವಲಂಬಿಸಿರುವ ಹಲವು ಮಾರ್ಗಗಳಲ್ಲಿ ಒಂದು ಮಾತ್ರವಾಗಿದೆ. ಅವರು ಉಪನ್ಯಾಸ ಮಾಡುವುದು, ಬರೆಯುವುದು, ಸಾಮಾಜಿಕ ಪ್ರವೃತ್ತಕನಾಗುವುದು ಕೊನೆಗೆ ಬದುಕು ವುದು ಕೂಡಾ, ಜೀವನ ಎಂಬ ಪ್ರಶ್ನೆಗೆ ಪರಿಹಾರ ಕಾಣುವುದಕ್ಕಾಗಿ. ಸಾಹಿತ್ಯದಲ್ಲಿ ಯಾವುದಾದರೊಂದು ಪ್ರತ್ಯೇಕ ಸಂಕೇತದಿಂದೊಡಗೂಡಿಯೋ ರೂಪದಿಂದೊಡ ಗೂಡಿಯೋ ಬರೆಯಲು ಅವರಿಗೆ ಸಾಧ್ಯವಿದೆಯೆಂದು ಅನಿಸುವುದಿಲ್ಲ. ಆಶಯ ವನ್ನು ಪ್ರಕಟಿಸುವುದಕ್ಕೆ ಬಹಳಷ್ಟು ಹಿಡಿಸಿದ ರೂಪ ಯಾವುದೇ ಆದರೂ ಅದನ್ನು

ಅವರು ಸ್ವೀಕರಿಸುತ್ತಾರೆ. ನಾಟಕದಲ್ಲೂ ಕಾದಂಬರಿಯಲ್ಲೂ ಕಿರುಗತೆಯಲ್ಲೂ ಏಕಾಂತದಲ್ಲೂ ಉಪನ್ಯಾಸದಲ್ಲೂ ಸರಿಸಮಾನವಾದ ಸಿದ್ಧಹಸ್ತರಾಗಿ ಬರೆಯುವವರಾಗಿದ್ದಾರೆ ಅವರು. ತಮ್ಮ ಧ್ಯೇಯವನ್ನು ಕುರಿತು ಸದಾ ಪ್ರಜ್ಞೆಯಿರುವುದರಿಂದಾಗಿರಬೇಕು, ತಮ್ಮ ಪಕ್ಷಪಾತ ಮನೋಭಾವನೆಯನ್ನು ಅವರು ಒಮ್ಮೆಯೂ ಎಲ್ಲಿಯೂ ಮರೆಪಡಿಸುವಂತಿರಲಿಲ್ಲ. ಲಕ್ಷ್ಯ ಪ್ರಾಪ್ತಿಗೆ ಬೇಕಾಗಿ ಕಲಾಪರವಾದ ನಿಗ್ರಹವು ಅಗತ್ಯವೆಂದು ಕಂಡುಬಂದಲ್ಲಿ ಪ್ರಕೋಪ ಪ್ರಕಟಣೆಗೂ ಕೇಶವದೇವ್ ಅವರು ಹಿಂಜರಿಯುವಂತಿರಲಿಲ್ಲ. ಜೀವನದ ಬಗ್ಗೆ ನಿತ್ಯಪ್ರಿಯನಾದ ಕೇಶವದೇವ್ ಯಾವುದೇ ಕಾಲದಲ್ಲಿ ಅವರ ಬಗ್ಗೆ ಬಳಲಿಕೆ ತೋರದ ಪ್ರೇಮ ಮತ್ತು ಪ್ರಕಟನಾವೇಶವನ್ನು ಪ್ರದರ್ಶಿಸಿಕೊಂಡು ಜೀವಿಸಿರುವರೆಂಬುದು ಗಮನಾರ್ಹ ಸಂಗತಿಯಾಗಿದೆ.

ಸೇವಾ ಮನೋವೃತ್ತಿಯಿಲ್ಲದವರ ಮತ್ತು ಸತ್ಯವಾದಿಗಳ ಭಾಗದಲ್ಲಿ ನಿಂತು ಸಾಹಿತ್ಯ ರಚನೆಗೆ ತೊಡಗಿದ ಕೇಶವದೇವ್ ಅದಕ್ಕೆ ಉಪಯೋಗಿಸಿದ ಸಂಕೇತ 'ರಿಯಲಿಸಂ' ಆಗಿತ್ತು. ಮಲಯಾಳಮ್‌ದ ವಾಸ್ತವಿಕತಾ ಪ್ರಸ್ಥಾನದ ನಿರ್ಮಾಪಕರಲ್ಲಿ ಪ್ರಮುಖರಾಗಿದ್ದಾರೆ ದೇವ್. ಶಂಕರ ಪಿಳ್ಳೆ ಮತ್ತು ಕೇಶವ ದೇವ್‌ರವರನ್ನು, ನವ್ಯ ಸಾಹಿತ್ಯ ಎಂದು ಕರೆಯಲ್ಪಡುವ ಸಾಹಿತ್ಯ ವಿಭಾಗದ ಸ್ಥಾಪಕ ಮುಂದಾಳುಗಳು ಎಂದು ಹೇಳಬಹುದು. ಪೊನ್‌ಕುನ್ನ್‌ವರ್ಕಿ, ವೈಕಂ ಮುಹಮ್ಮದ್ ಬಷೀರ್, ಎಂ. ಪಿ. ಪೋಳ್ ಮೊದಲಾದವರನ್ನು ಮರೆತುಕೊಂಡಲ್ಲ ಈ ಮಾತನ್ನು ಹೇಳಿದ್ದು. ಸಮಾಜದ ಅನೀತಿಗಳಿಗೆದುರಾಗಿ ಜನರನ್ನು ಸುಸಜ್ಜಿತರಾಗಿಸುವ ಸಾಂಸ್ಕಾರಿಕ ವಿಜಯ ಯಾತ್ರೆಯಲ್ಲಿ ಮುಂದಾಗಿ ಪತಾಕೆಯನ್ನೆತ್ತಿ ಹಿಡಿದುದು ಕೇಶವದೇವ್ ಆಗಿದ್ದಾರೆ.

ಕೇಶವದೇವ್ ಶುದ್ಧ ವಾಸ್ತವವಾದಿ ಮತ್ತು ಪುರೋಗಮನವಾದಿಯೆಂದು ಹೇಳಿದ್ದೇವಷ್ಟೆ. ಅದರೊಂದಿಗೆ ಅವರು ಒಬ್ಬ ತುಂಬು 'ರೊಮೆಂಟಿಸ್ಟ್' ಆಗಿದ್ದಾರೆ ಎನ್ನುವುದು ಅರ್ಥಪೂರ್ಣ ಸತ್ಯನುಡಿ. ಉದಾಹರಣೆಗೆ ದೇವ್ ಅವರ ಪ್ರಶಸ್ತ ಕೃತಿ 'ಓಡಯಿಲ್‌ನಿನ್ನ್' ತೆಗೆಯುವ. ೧೯೪೨ರಲ್ಲಿ ರಚಿಸಲ್ಪಟ್ಟ ಈ ಕೃತಿಯಲ್ಲಿ 'ಪಪ್ಪು' ಎಂಬ ರಿಕ್ಷಾವಾಲನ ತ್ಯಾಗಮನೋಭಾವನೆಯ ಮತ್ತು ಮನುಷ್ಯತ್ವದ ಇತಿಹಾಸವಾಗಿದೆ. ಕಾಣುವುದು, ಕಷ್ಟ ಮತ್ತು ಯಾತನೆಗಳ ಅಗಾಧ ಹೊಂಡಕ್ಕಿಳಿದು ಅಲೆಯುತ್ತಿರುವ ಮನುಷ್ಯಜೀವಿಗಳು ಕೂಡಾ ಬಹಳ ಉದಾತ್ತ ಮಾನವಗುಣಗಳಿಂದ ಕೂಡಿರಲು ಶಕ್ತರು ಎಂದು ದೇವ್ ಈ ಕೃತಿಯಲ್ಲಿ ಹೇಳುತ್ತಿರುವ ಸಂದೇಶ. ಆ ಸಂದೇಶವನ್ನು ಶಕ್ತಿಯುತವಾಗಿ ವರ್ಣಿಸುವುದರಲ್ಲಿ ಅವರು ಜಯವನ್ನು ಗಳಿಸಿರುವರು. ಇಲ್ಲಿ ದೇವ್ ಅವರ 'ರೊಮೆಂಟಿಸಂ' ತಲೆಯೆತ್ತುವುದಿಲ್ಲ. ತೊರೆಯಿಂದ ಪಪ್ಪು ಮೇಲೆತ್ತಿ ತೆಗೆದ ಬಡ ಹುಡುಗಿಯೊಬ್ಬಾಕೆ, ಧನಿಕನಾದ ಒಬ್ಬ ಜೀವಸಖನನ್ನು ಪಡೆಯುವುದರಲ್ಲಿ, ಹಳೆಯ 'ಸಿಂಡೆರಲ ಕಥೆ'ಯ ನೆರಳು ಬಿದ್ದಂತಿಲ್ಲವೇ? ಅಂತೆಯೇ ಪಾತ್ರಸೃಷ್ಟಿಯಲ್ಲೂ ಅತಿ ಭಾವುಕತ್ವದ ಕಡು ಛಾಯೆಯನ್ನು ಯಥೇಷ್ಟ ಬಾಚಿ ಹಚ್ಚಿದ್ದು ಕಾಣಬಹುದು. ಶುದ್ಧ ಆತ್ಮಾಭಿಮಾನದ ಪ್ರತೀಕ ಪಪ್ಪು, ಆದರ್ಶಲಾಲಿತ್ವದ ಸೃಷ್ಟಿಯಾಗಿದ್ದಾನೆ.

ಮಾರ್ಗದ ಬದಿಗಳಲ್ಲಿ ನಾವು ಕಾಣುತ್ತಿರುವ ಸಾಮಾನ್ಯ ರಿಕ್ಷಾವಾಲರಂತಲ್ಲ ಅವನು. ಯಥಾರ್ಥ ಜೀವನದ ದುರ್ಗಂಧಪೂರಿತ ತೊರೆಯಿಂದ, ಆದರ್ಶ ಪ್ರಜ್ಞೆಯ ಔನ್ನತ್ಯದೆಡೆಗೆ ಪಪ್ಪುವನ್ನು ಕೇಶವದೇವ್ ನಿಜವಾಗಿಯೂ ಎತ್ತಿರುವರು. 'ಓಡಯಿಲ್‌ನಿನ್ನ್' ಎಂಬ ಕಾದಂಬರಿ ಮಾತ್ರವಲ್ಲ 'ಒರು ಸುಂದರಿಯುಡೆ ಕಥ' (ಒಬ್ಬಳು ಸುಂದರಿಯ ಕಥೆ), 'ಸ್ವಪ್ನಂ' (ಕನಸು) ಮೊದಲಾದ ಕೃತಿಗಳಲ್ಲೂ ಅತಿಭಾವುಕತನದ ಪ್ರಸಾರ ಕಾಣಬಹುದು. ಒಂದುವೇಳೆ ದೇವ್ ಅವರ ಕುತೂಹಲಕರ ಚಿಂತನೆಯ ಫಲವೋ 'ಜೀವಿಕ್ಕಾತ್ತ ಜೀವಿದ' (ಬದುಕದ ಜೀವನ)ದ ಆವಿಷ್ಕಾರವೋ ಆಗಿರಬಹುದು. ಇದು ಯಾವುದೇ ಆದರೂ ದೇವ್ ಅವರ ಶಕ್ತಿಯುತ ಸಹಜ ವಿವೇಚನಾಶಕ್ತಿಯ ಮೇಲೆ ದಟ್ಟವಾದ ನೆರಳು ಬೀಳುವುದಾಗಿದೆ. ಅವರ ಕೃತಿಗಳಲ್ಲಿ ಹುದುಗಿರುವ ಅತಿಭಾವುಕತೆ ಎಂದು ಹೇಳಬಹುದು.

ಯಥಾಸ್ಥಿತಿಗೆದುರಾಗಿ ಅವಿಶ್ರಾಂತ ಹೋರಾಡುವ ಒಬ್ಬ ವೀರ ಯೋಧ ತಾನು ಎಂದು ಹಕ್ಕು ವ್ಯಕ್ತಪಡಿಸುವುದಿದೆ ದೇವ್. ಅದು ಸರಿ. ಅದೇ ಸಮಯ ಅವರು ಯಥಾಸ್ಥಿತಿ ಶೈಲಿಯಲ್ಲಿರುವ ಒಬ್ಬ ಧಾರ್ಮಿಕವಾದಿಯಾಗಿದ್ದಾರೆ. ತನ್ನ ಪ್ರೀತಿಯ ಕಥಾಪಾತ್ರಗಳು ಉತ್ತಮ ಸನ್ಮಾರ್ಗಿಗಳಾಗಿರಬೇಕೆಂದು ಅವರಿಗೆ ನಿರ್ಬಂಧವಿದೆ. ಪಪ್ಪುವಿನ ಸನ್ಮಾರ್ಗ ನಿಷ್ಠೆ ಅವನ ಜೀವನದಲ್ಲಿ ಎದ್ದುಕಾಣಬಹುದು. ಅದರಂತೆ 'ಒರು ಸುಂದರಿಯುಡೆ ಕಥ'ದಲ್ಲಿ ಭವಾನಿಯು ತನ್ನ ಚಾರಿತ್ರ್ಯಕ್ಕೆ ಒಂದು ಬರೆಯು ಕೂಡ ಬೀಳದ ರೀತಿಯಲ್ಲಾಗಿತ್ತು. ಅವಳು ಸಮಾಜದಲ್ಲಿ ಉನ್ನತ ಸ್ಥಾನಕ್ಕೇರಿದ್ದು. ದೇವ್ ಅವರ ಉನ್ನತ ಕೃತಿಗಳಲ್ಲಿ ಒಂದಾದ 'ರೌಡಿ'ಯ ನಾಯಕನು ಕೂಡ ರೌಡಿಗಳ ಮಧ್ಯೆ ಒಬ್ಬ ರಾಜಕುಮಾರನಂತೆ ತೋರುತ್ತಾನೆ. ಆಕ್ರಮಣದ ಚಿಹ್ನೆಯಾದ ಕತ್ತಿಯನ್ನು ಬೀಸಾಕುವುದರೊಂದಿಗೆ ಜೀವನ ಮತ್ತು ಧಾರ್ಮಿಕ ಪ್ರಜ್ಞೆಗಳೊಳಗಿನ ಒಪ್ಪಂದಕ್ಕೆ ಅವನು ಸನ್ನದ್ಧನಾದ.

ಸಹಜ ಚಿಂತನಾ ಪ್ರಜ್ಞೆ ಮತ್ತು ಧಾರ್ಮಿಕ ಪ್ರಜ್ಞೆಗಳೊಳಗಿನ ಒಮ್ಮತವು ದೇವ್ ಅವರ ಕೆಲವು ಕೃತಿಗಳಲ್ಲಿ ಕಲಾಪರವಾದ ಘನತೆಯನ್ನು ಕೆಳಗಿಳಿಸುವುದು ಎಂದು ಒಪ್ಪಲೇಬೇಕಾದ ಸಂಗತಿ. ದೇವ್ ಮತ್ತು ತಗಳಿಯವರಲ್ಲಿ ತಮ್ಮೊಳಗಿನ ವ್ಯತ್ಯಾಸ ಅದಾಗಿದೆ. 'ಚೆಮ್ಮೀನ್' (ಕೆಂಪು ಮೀನು) ಎಂಬ ಕೃತಿಯಲ್ಲಿ ಮಾತ್ರವೇ ತಗಳಿಯವರು 'ರೊಮೆಂಟಿಸಂ'ನ ಒಂದು ಕವಚ ಹೆಣೆಯುವುದು. ಇತರ ಎಲ್ಲಾ ಕೃತಿಗಳಲ್ಲೂ ಅವರು ದೇವ್ ಅವರಿಗಿಂತ ದೊಡ್ಡ ಯಥಾರ್ಥವಾದಿ ಎಂದು ಹೇಳಬಹುದು. 'ಓಡಯಿಲ್‌ನಿನ್ನ್' ಎಂಬ ಕೃತಿಯನ್ನು ಕೇಶವದೇವ್‌ರವರ ಬದಲಾಗಿ ತಗಳಿಯವರು ಬರೆದಿದ್ದರೆ ಎಂಬ ದೃಷ್ಟಿಕೋನದಿಂದ ನೋಡಿದರೆ ಈ ಸತ್ಯ ಬಯಲಾಗುವುದು. ತಗಳಿಯವರ ಭಾವನಾಪುತ್ರ ಪಪ್ಪುವಾಗಿ ಅವನು ಜೀವನದ ಕಠಿಣ ನೀತಿಗೆ ವಶನಾಗಿ ತನ್ನ ಸಾಕುಮಗಳ ಆಶ್ರಿತನಾಗಿ ಘನತೆ ಇಳಿದು ಹೋದವನಾಗಿಯೋ ಅಥವಾ ಒಬ್ಬ ತಿರುಕನಂತೆ ಮಾರ್ಗದ ಬದಿಗಳಲ್ಲಿ ಅಲೆಯುವವನಾಗಿಯೋ ರೂಪು

ಗೊಳ್ಳುತ್ತಿದ್ದ. "ಧರ್ಮನೀತಿಯೊ ಅಥವಾ ಜೀವನವೊ?" ಎಂದು ತಗಳಿಯವರು ಅದಕ್ಕೆ ಸಮಾಧಾನವನ್ನೂ ಹೇಳಬಹುದು. ಒಂದುವೇಳೆ ತಗಳಿಯವರ ಕೈಯಲ್ಲಿ 'ಓಡಯಿಲ್‌ನಿನ್ನ್' ಕಲಾಪರವಾಗಿ ಹೆಚ್ಚು ಒಳ್ಳೆಯ ಶಿಲ್ಪವಾಗುತ್ತಿತ್ತು. ಆದರೆ ದೇವ್ ಅವರ 'ಓಡಯಿಲ್‌ನಿನ್ನ್' ಕಾದಂಬರಿಯ ಸಾಮಾಜಿಕ ಭಾವ ಅವರಲ್ಲಿ ಬರಲಾರದು. ಸಾಮಾನ್ಯ ಮನುಷ್ಯನ ಜೀವನ ಸುಖ ಸೌಕರ್ಯಗಳನ್ನು ಹೆಚ್ಚಿಸುವುದಕ್ಕೂ ದುಃಖ ದೂರ ಮಾಡುವುದಕ್ಕೂ ಯೋಗ್ಯವಾದ ವಿಧಾನದಲ್ಲಿ ಅವನಲ್ಲಿ ಆತ್ಮವಿಶ್ವಾಸ ಉಂಟುಮಾಡುವುದಕ್ಕೂ ಅದು ಸಮರ್ಥವಾದ ರಚನೆಯಾಗಲಾರದು. ದೇವ್ ಅವರ ಲಕ್ಷ್ಯ ಪ್ರಜ್ಞೆ ಮತ್ತು ತಗಳಿಯವರ ಕಲಾಪ್ರಜ್ಞೆ ಇವುಗಳೊಳಗಿನ ಅಂತರ ಇಲ್ಲಿ ವ್ಯಕ್ತವಾಗುವುದು.

ಕೇಶವದೇವ್ ಅವರ ಕಾದಂಬರಿಗಳನ್ನು ಮುಖ್ಯವಾಗಿ ಎರಡು ಗುಂಪುಗಳಾಗಿಸಬಹುದು—'ರೊಮೆಂಟಿಕ್' ಕಾದಂಬರಿ ಮತ್ತು 'ರಿಯಲಿಸ್ಟಿಕ್' ಕಾದಂಬರಿಗಳು. ಆದರೆ ಆ ತರದ ಒಂದು ವಿಭಜನೆ ಅನಾವಶ್ಯವೆಂದು ತೋರುವ ರೀತಿಯಲ್ಲಿ ಎರಡು ಸಂಕೇತಗಳ ವ್ಯತ್ಯಾಸಗಳು ದರ್ಶನೀಯ ಸಂಕಲನಗಳಾಗಿ ತೋರುವುದು. ಮೊದಲಿನ ಗುಂಪಿನಲ್ಲಿ ಸೇರುವವುಗಳು 'ಓಡಯಿಲ್‌ನಿನ್ನ್', 'ಒರು ಸುಂದರಿಯುಡೆ ಕಥ', 'ಸ್ವಪ್ನಂ', 'ಪ್ರೇಮ ಐಡ್ಡಿ' ಮೊದಲಾದವು. ಎರಡನೆ ಗುಂಪಿಗೆ ಸೇರಿದವುಗಳು, 'ಅಯಲ್‌ಕಾರ್', 'ಕಣ್ಣಾಡಿ', 'ಅಧಿಕಾರಂ', 'ಆರ್‌ಕ್ ವೇಂಡಿ', 'ಎಜಿಶೋಟ್' ಇತ್ಯಾದಿ. ಪ್ರಕ್ಷೋಭಕಾರಿಯೂ ಲಘು ಲೇಖಕನೂ ಆಗಿ ಜೀವನ ಆರಂಭಿಸಿದ ಕೇಶವದೇವ್ ವಾಚಕರೊಂದಿಗೆ ನೇರವಾಗಿ ಆತನ ಸಂವೇದನೆಯನ್ನು ಮುಂದುವರಿಸಲು ಬಯಸುವರು. 'ಆರ್‌ಕ್ಕ್ ವೇಂಡಿ', 'ಎಜಿಶೋಟ್' ಎಂಬೀ ಕೃತಿಗಳ 'ಸಿಂಬೋಲಿಸಂ' ಉಪಯೋಗಿಸುವಾಗಲೂ ವಾಚಕರಿಗೆ ಅದನ್ನು ಎತ್ತಿ ತೋರಿಸುವ ಪ್ರತಿಕ್ರಿಯೆಯು ಅವುಗಳಲ್ಲಿ ಶಕ್ತಿಯುತವಾಗಿ ಬಂದಿದೆ. ಸುಲಭಸಾಧ್ಯವಾದ ಲಲಿತಪದಗಳನ್ನು ಉಪಯೋಗಿಸಿಕೊಂಡು ಮನುಷ್ಯ ಹೃದಯದಲ್ಲಿ ಬಿರುಗಾಳಿಯೆಬ್ಬಿಸಿದ ಕೇಶವದೇವ್ ಅವರ ಶೈಲಿಯ ವಿಧಾನವು ಅನ್ಯರ ಹೃದಯದಲ್ಲಿ ಅಸೂಯೆ ಹುಟ್ಟಿಸುವಂತಹದು. ನಿತ್ಯಜೀವನದ ಸಾಧಾರಣ ರಂಗಗಳನ್ನು ಯಾವುದಾದರೊಂದು ಸಾಧಿತ ಚಿತ್ರೀಕರಣದ ಮೂಲಕ ಅವರು ಅನಾಯಾಸವಾಗಿ ಚಿತ್ರಿಸುವುದನ್ನು ಕಂಡಾಗ ನಮಗೆ ಅದ್ಭುತವಾಗಿ ತೋರುವುದು. ಅದೇ ವೇಳೆ ಜೀವನದ ಕಾವ್ಯಸೌಂದರ್ಯವನ್ನು ಆವಿಷ್ಕಾರಗೊಳಿಸುವುದರಲ್ಲಿಯೂ ಅವರು ಸಮರ್ಥ ವ್ಯಕ್ತಿಯಾಗಿದ್ದಾರೆ. ಅವರ ಜೀವನಕಾವ್ಯದಲ್ಲಿ ಪ್ರಣಯಗಾನಕ್ಕಿಂತ ರಣಗಾನಕ್ಕೆ ಹೆಚ್ಚಿನ ಮಹತ್ವ ಕಾಣುತ್ತದೆ.

ಬಹು ಉನ್ನತವಾದ ಸಾಮಾಜಿಕ ಪ್ರಜ್ಞೆಯಿಂದ ಅನುಗ್ರಹಿತನಾದ ಒಬ್ಬ ಬರಹಗಾರ ಕೇಶವದೇವ್. ತಮ್ಮ ಕಾಲಘಟ್ಟದ ಸಾಮಾಜಿಕ ಮತ್ತು ರಾಷ್ಟ್ರೀಯ ಸಂಭವಗಳನ್ನು ಚಿತ್ರೀಕರಿಸುವುದರೊಂದಿಗೆ, ಅವುಗಳಿಗೆ ಸಂಬಂಧಿಸಿದ ತಮ್ಮ ಅಭಿಪ್ರಾಯಗಳನ್ನು ಮುಕ್ತಕಂಠದಿಂದ ಹೇಳಲು ಒಮ್ಮೆಯೂ ಹಿಂಜರಿಯದ ವ್ಯಕ್ತಿ ಅವರು.

ದೇವ್ ತಾವೇ ಒಬ್ಬ ಸಾಮಾಜಿಕ–ರಾಷ್ಟ್ರೀಯ ಪ್ರಸ್ಥಾನಗಳ ಸೃಷ್ಟಿಯಾದುದರಿಂದ ಅದರಲ್ಲಿ ನಾವು ಆಶ್ಚರ್ಯಪಡುವುದಕ್ಕಿಲ್ಲ. ಇದು ಅವರ ಹಲವು ಶಕ್ತಿಗಳಲ್ಲಿ ಒಂದು ಎಂದು ಅವರು ನಂಬುತ್ತಾರೆ. ಸಾಮಾಜಿಕ ಆವಿಷ್ಕಾರವೆಂಬ ದೃಷ್ಟಿಯಿಂದ ಇದು ಅವರ ಒಂದು ಮಹಾಶಕ್ತಿಯೇ ಆಗಿದೆ. ಆದರೆ ಕಲೆಗಾರನೆಂಬ ದೃಷ್ಟಿಯಲ್ಲಿ ಇದು ಅವರ ದೌರ್ಬಲ್ಯವಾಗಿ ತೋರುವುದಿಲ್ಲವೇ? ಉದಾಹರಣೆಗೆ 'ಅಯಲ್‌ಕ್ಕಾರ್' ಕಾದಂಬರಿಯನ್ನು ಉದ್ಧರಿಸುವ. ೧೯೬೩ರಲ್ಲಿ ಬರೆಯಲ್ಪಟ್ಟ ಈ ಕಾದಂಬರಿ, ಕೇಂದ್ರ ಸಾಹಿತ್ಯ ಅಕಾದೆಮಿಯಿಂದ 'ಅವಾರ್ಡ್' ಪಡೆದ ಕೃತಿಯಾಗಿದೆ. ಕೇರಳದ ಸಾಮಾಜಿಕ ಪರಿವರ್ತನೆಯ ಚರಿತ್ರೆಯನ್ನು ಅದರಲ್ಲಿ ಆಳವಾಗಿಯೂ ವಿಸ್ತಾರ ವಾಗಿಯೂ ಹರಹಲು ಕೇಶವದೇವ್ ಪಟ್ಟ ಶ್ರಮದ ಫಲವಾಗಿಯಾಗಿರಬಹುದು 'ಅವಾರ್ಡ್' ದೊರೆತದ್ದು. ಸಾಮಾಜಿಕ ಮತ್ತು ಸಾಂಪತ್ತಿಕ ವಿಷಯಗಳನ್ನು ಮಾನವೀಯ ಸಂಘಟನೆಯೊಂದಿಗೆ ಹೃದಯಸ್ಪರ್ಶಿಯಾಗಿ ಕೇರಳವು ಬೆಳೆಸುವ ಸಾಧ್ಯತೆಯನ್ನು ನಾವು ಅದರಲ್ಲಿ ಕಾಣಬಹುದು. ನಿಷ್ಕಳಂಕ ಚರಿತ್ರಾಪ್ರಜ್ಞೆ, ಕೊರತೆ ಕಾಣದ ವಾಸ್ತವಿಕ ಪ್ರಜ್ಞೆ, ಸಮಗ್ರವಾದ ವೀಕ್ಷಣೆ, ಆದರ್ಶ ನೀತಿಗಳು ಈ ಕೃತಿಯ ರಚನೆಯಲ್ಲಿ ದೇವ್ ಅವರಿಗೆ ಕರಗತವಾಗಿರುವುದು. ಆದರೆ, ಅದರ ಪ್ರತಿಯೊಂದು ಕಥಾಪಾತ್ರವನ್ನು ನೋಡಿದರೆ ಅವರು ವ್ಯಕ್ತಿಗಳೆನ್ನುವುದಕ್ಕಿಂತ ಒಂದು ಸಮುದಾಯದ ಅಥವಾ ವಿಭಾಗದ ಆಶಯದ ಪ್ರತಿನಿಧಿಗಳೆಂದು ಹೇಳಬಹುದು. ರಕ್ತ ಮತ್ತು ನೀರು ಇವುಗಳ ಹೊಂದಾಣಿಕೆ, ವಿರೋಧಗಳ ಬೆಳವಣಿಗೆಯ ನೆಲವಾದ ಮನುಷ್ಯಜೀವಿ ಗಳವರು ಎನ್ನುವುದರ ಬದಲು, ಸಾಮುಷ್ಯ ಪ್ರಧಾನವಾದ ಕಥಾಪಾತ್ರಗಳೆಂದು ಹೇಳಬಹುದು. ಮಾನವಸಹಜವಾದ ಜೀವನ ಚಿತ್ರಣ ಎಂಬ ನೆಲೆಯಲ್ಲಿ ಈ ಕಥಾ ಪಾತ್ರಗಳ ಆಳ ಕಡಿಮೆಯಾಗಿ ತೋರುವುದು. ಜೀವನದಿಂದಲೇ ಕೇಶವದೇವ್ ಪಾತ್ರಗಳನ್ನು ಅಗೆದು ತೆಗೆಯುವುದಾದರೂ ಅವರ ಸಂಕೀರ್ಣತೆ ಬದಲಾಗಿ ಸಮಾನ ಸ್ವಭಾವದ ಕೆಲವು ಪಾತ್ರಗಳನ್ನು ಒಂದಾಗಿಸಲು ಅವರು ಪಾತ್ರ ಸೃಷ್ಟಿ ಮಾಡುವು ದಾಗಿದೆ. ಅವರ ಪಾತ್ರಗಳು ಅವರ ಸಂಪೂರ್ಣ ಆಶಯಗಳ ಪ್ರತಿನಿಧಿಗಳು: ಪ್ರತೀಕ ಗಳು. ಆದರೆ ಪಾತ್ರಗಳನ್ನು ಸಹಜ ಜೀವನದ ಪ್ರತಿನಿಧಿಗಳನ್ನಾಗಿಯೂ ಪ್ರತೀಕ ಗಳನ್ನಾಗಿಯೂ ಮಾಡಲು ಅವರು ಎಷ್ಟರ ಮಟ್ಟಿಗೆ ಶ್ರಮ ವಹಿಸಿದರೋ ಅಷ್ಟೂ ಅವು ಅಲ್ಲವಾಗಿ ಬಿಡುತ್ತವೆ.

ಕೇಶವದೇವ್‌ರವರ 'ರೊಮೆಂಟಿಸಂ' ಮತ್ತು 'ರಿಯಲಿಸಂ'ಗಳು ಸಹ ವಿಹಾರಿ ರಂಗಗಳಾಗಿವೆ, ಅವರ ಕೃತಿಗಳಲ್ಲಿ. ಪ್ರಾಯಶಃ ಈ ಸಂಘಟನೆಯನ್ನು ಅವರ ಕೃತಿ ಗಳಲ್ಲಿ ನಾವು ಕಾಣಬಹುದು. ಪ್ರಾಯ ಎಪ್ಪತ್ತಕ್ಕೆ ಹತ್ತಿರವಾದ ಈ ನಿತ್ಯ ಪ್ರಕ್ಷೋಭಣ ಕಾರಿ ಬರಹಗಾರ ಒಮ್ಮೆಯೂ ಸುಮ್ಮನಿರಲು ಮನಸ್ಸು ಮಾಡುವುದಿಲ್ಲ. ಶಬ್ದ ವೀಚಿಗಳ ಸಮ್ಯಕ್ ಮನೋರಂಜನೆಗಳೊಂದಿಗೆ ಮೃದು ಮಧುರವಾದ ಸಂಗೀತಧಾರೆ ಹೊರಡಿಸಲು ಸಾಧ್ಯವಿರುವ ಸಂದರ್ಭದಲ್ಲಿ ವೀರ ಆವೇಶಪೂರಿತ ಉಗ್ರ ಶಬ್ದ

ನಿಬಂಧಗಳಿಂದೊಡಗೂಡಿದ ರಣಗೀತೆಗಳನ್ನು ಹಾಡಲು ದೇವ್ ಅವರಿಗೆ ಪ್ರೀತಿ. ತೀಕ್ಷ್ಣವಾದ ಲಕ್ಷ್ಯಪ್ರಜ್ಞೆ ಇರುವುದರಿಂದ ತೆರೆಯ ಮರೆಯಲ್ಲಿ ಕುಳಿತು ತನ್ನ ಪಾತ್ರಗಳನ್ನು ನಿಯಂತ್ರಿಸುವುದರ ಬದಲು ಅವರೊಂದಿಗೆ ರಂಗಪ್ರವೇಶ ಮಾಡಿ, ಆ ಪಾತ್ರಗಳೊಂದಿಗೆ ನೇರ ಸಂಭಾಷಣೆ ಮಾಡುವುದಕ್ಕೆ ಯಾವಾಗಲೂ ಅವರಿಗೆ ಹುಮ್ಮಸ್ಸು. ಯಾವುದೇ ಕಥಾಪಾತ್ರಗಳೂ ಕೇಶವದೇವ್ ಅವರನ್ನು ನೇರವಾಗಿ ಪ್ರತಿನಿಧೀಕರಿಸುವುದಿಲ್ಲವಾದರೂ ಪ್ರತಿ ಪಾತ್ರದಲ್ಲೂ ಅವರಿದ್ದಾರೆ. 'ಅಧಿಕಾರಂ'ನಲ್ಲಿ ರಾಮು; 'ಉಲಕ್ಕ'ನಲ್ಲಿ ಕೊಚ್ಚಪ್ಪಚ್ಚನ್; 'ಕಣ್ಣಾಡಿ'ಯಲ್ಲಿ ಗಾಳಿ; 'ಓಡಯಿಲ್‌ನಿನ್ನ್'ದಲ್ಲಿ ಪಪ್ಪು—ಈ ಪಾತ್ರಗಳಲ್ಲೆಲ್ಲಾ ಕೇಶವದೇವ್ ಇದ್ದೇ ಇದ್ದಾರೆ. ಉನ್ನತ ಕಲೆಗಾರರಲ್ಲಿ ಹೆಚ್ಚಿನವರಿಗೆ ತಾವು ನಿರ್ಮಿಸಿದ ಪಾತ್ರಗಳು ಕಥಾ ಬೆಳವಣಿಗೆಯಲ್ಲಿ ಬರಹಗಾರರಿಗೆ ಮುಂದೆ ದಾರಿತೋರುವುದಿದೆ; ಆದರೆ ಕೇಶವದೇವ್‌ರವರಾದರೊ ಎಲ್ಲಾ ಸಮಯದಲ್ಲೂ ಕಥಾಪಾತ್ರಗಳ ಮೇಲೆ ತಮ್ಮ ನಿಯಂತ್ರಣವನ್ನಿಟ್ಟುಕೊಂಡಿದ್ದಾರೆ.

ಸಾಮಾಜಿಕ ಪರಿವರ್ತನೆಗಿಂತ ರಾಷ್ಟ್ರೀಯ ವಿಮರ್ಶೆಗೆ ಹೆಚ್ಚಿನ ಮಹತ್ವವನ್ನು ಕೊಟ್ಟು ದೇವ್ ರಚಿಸಿದ ಒಂದು ಮಹತ್ವದ ಕೃತಿಯೆಂದರೆ 'ಆರ್‌ಕ್ಕುವೇಂಡಿ?' ೧೯೫೦ರಲ್ಲಿ ರಚಿಸಲ್ಪಟ್ಟ ಈ ಕಾದಂಬರಿಯಲ್ಲಿ ಸಹಜವಾಗಿ ಎರಡು ಭಾಗಗಳುಂಟು—ಅದರ ಮುನ್ನುಡಿ ಮತ್ತು ಕಥಾಭಾಗ. ಕೃಷ್ಣ ಚೈತನ್ಯರಂತಹ ಮುನ್ನುಡಿಕಾರರು ಹೇಳುವುದೇನೆಂದರೆ, ಉತ್ತಮ ಗದ್ಯಶಿಲ್ಪಿಯ ಮುನ್ನುಡಿಯು ಫಲ ಅವರೊಂದಿಗೆ ಸೇರಿದ್ದು ಕಾದಂಬರಿಯ ಓಟಕ್ಕೆ ದಾರಿಯಿಲ್ಲದಾಗಿದೆಯೆಂದು. ಕಾರಣವೆಂದರೆ ಈ ಕಾದಂಬರಿಯು ಮುನ್ನುಡಿಯ ವಾದಗತಿಗೆ ವಸ್ತುವಾಗಿದೆಯಷ್ಟೆ. ಕಥೆಯಲ್ಲಿ ಮುಖ್ಯ ಪಾತ್ರಗಳು ಕಮ್ಯೂನಿಸ್ಟ್ ಸಂಘಗಳು. ತನ್ನ ಮೇಲ್ಮೆಗೆ ಬೇಕಾಗಿ ಪಾರ್ಟಿಯನ್ನು ಪಯೋಗಿಸಿಕೊಳ್ಳುವುದು ಅದನ್ನು ನಾಶಮಾಡುವುದು ಇತ್ಯಾದಿ ಅಭಿಪ್ರಾಯಗಳಿದ್ದ ಅಧಿಕಾರದಾಹಿಗಳಾದ ಮುಂದಾಳುಗಳನ್ನು ದೇವ್, ಆ ಕಾದಂಬರಿಯಲ್ಲಿ ಚಿತ್ರೀಕರಿಸಿದ್ದು. ರಷ್ಯದಲ್ಲಿ ಸ್ಟಾಲಿನನ ಕಾಲಘಟ್ಟದಲ್ಲಿ ಸಂಭವಿಸಿದ 'ಶುದ್ಧೀಕರಣ' ಕ್ರಿಯೆಯಿಂದಾಗಿ ಅವರು ಈ ಕಾದಂಬರಿ ಬರೆಯಲು ಪ್ರಚೋದಿಸಲ್ಪಟ್ಟುದಾಗಿದೆ. ಇದರಲ್ಲಿ ಹುದುಗಿರುವ ನಾಟಕೀಯ ಸಾಧ್ಯತೆಗಳನ್ನೊಳಗೊಂಡು ಬರೆಯುವುದಾಗಿತ್ತು, ದೇವ್ ಅವರು ವಹಿಸಿದ ಶ್ರಮವೆಂದು ವ್ಯಕ್ತವಾಗುವುದು. ಆದರೆ ಅಮಿತವಾದ ಆತ್ಮಸಂಯಮನವನ್ನು ಕಳಕೊಂಡ ಅವರು ಈ ಕೃತಿ ನಿರ್ಮಿಸಿದ ಕಾಲಘಟ್ಟದಲ್ಲಿ, ಇದರಲ್ಲಿ ಕಲಾಪರವಾದ ಸಾಧ್ಯತೆಗಳಿಗಿಂತ ರಾಷ್ಟ್ರೀಯ ಪ್ರಯೋಜನಕ್ಕಾಗಿರಬಹುದು, ಅದರಲ್ಲಿ ಮೋಹವಿದ್ದುದು. ತನ್ನ ಸಾಕು ಪ್ರಾಣಿಗಳೊಂದಿಗೆ ರಂಗಪ್ರವೇಶ ಮಾಡುವ ಸರ್ಕಸ್ಸಿನ ಒಬ್ಬ ಮೃಗಪಾಲಕನು ತನ್ನ ಅಭ್ಯಾಸಿತ ವಿದ್ಯೆಯನ್ನು ಪ್ರದರ್ಶಿಸುವಂತೆ ಮಾತ್ರವಲ್ಲ, ಮೊದಲು ಅದರ ಕುರಿತು ಘನವಾದ ಭಾಷಣ ಮಾಡುವಂತೆಯೂ ತೋರುತ್ತದೆ, 'ಆರ್‌ಕ್ಕುವೇಂಡಿ?' ಓದುವಾಗ.

'ಆರ್‌ಕ್ಕುವೇಂಡಿ?' ಎಂಬ ಕೃತಿಯ ಕುರಿತು ಇಷ್ಟು ಹೇಳಬೇಕಾಗಿ ಬಂದುದು, ಇಲ್ಲಿ ವಿಮರ್ಶಿಸಲ್ಪಡುತ್ತಿರುವ 'ಕನ್ನಡಿ' ಕೇಶವದೇವ್ ಅವರ ರಾಷ್ಟ್ರೀಯ ಪ್ರಜ್ಞೆಯ

ಕೃತಿಗಳಲ್ಲೊಂದು ಎಂಬುದರಿಂದ. 'ಎಲ್ಲಾ ರಾಜ್ಯದ ಶ್ರಮಿಕರೆ ಒಂದಾಗಿರಿ! ನಿಮಗೆ ನಷ್ಟವಾಗುವುದಕ್ಕೆ ಏನೂ ಇಲ್ಲ, ನಿಮ್ಮನ್ನು ಬಂಧಿಸಿದ ಸಂಕಲೆಯಲ್ಲಿದೆ!' ಎಂಬ ಕಾರ್ಲ್ ಮಾರ್ಕ್ಸ್‌ನ ಸಂದೇಶವನ್ನು ಉದ್ಘೋಷಿಸಿಕೊಂಡು—ಮರಣವನ್ನು ಧಿಕ್ಕರಿಸಿ—ಭವಿಷ್ಯದಲ್ಲಿ ಸಮತ್ವ ಸುಂದರವಾದ ಸಾಮಾಜಿಕ ಘಟನೆಗಳ ಕನಸು ಕಾಣುತ್ತ—ಮೃತ್ಯುವಿನ ಬಾಯಿಯತ್ತ ಸಾಗಿದ ಆ ಕಾಲದ. ಅನುಭವಗಳ ಸವಿನೆನಪುಗಳನ್ನಲ್ಲವೇ ಈ ಕೃತಿಯಲ್ಲಿ ಚಿತ್ರಿಸಿದ್ದು. ಇಪ್ಪತ್ತನೇ ಶತಮಾನದ ನಾಲ್ಕನೇ ದಶಕದಲ್ಲಾಗಿತ್ತು ಕಾದಂಬರಿಯಲ್ಲಿ ಚಿತ್ರಿಸಲ್ಪಟ್ಟ ಕಾಲಘಟ್ಟ. ಆ ಕಾಲದಲ್ಲೋ ಅದರ ತರುವಾಯದ ಹತ್ತಿರದ ದಿನಗಳಲ್ಲೋ ಬರೆಯಲ್ಪಟ್ಟಿದ್ದರೆ ಅತ್ಯಂತ ವಿಪ್ಲವಕಾರಿಯಾಗಿಯೂ ಒಂದೊಮ್ಮೆ 'ದೇಶದ್ರೋಹಪರ'ವಾಗಿಯೂ ಆಗಬಹುದಾಗಿದ್ದ ಈ ಕೃತಿಯು ನಿರ್ಮಾಣಗೊಂಡುದು ೧೯೬೧ರಲ್ಲಿ ಆಗಿದೆ. ಆದುದರಿಂದ ಅದಕ್ಕೆ ಬರಬಹುದಾದ ಚಾರಿತ್ರಿಕ ಪ್ರಾಧಾನ್ಯತೆ ಕೈತಪ್ಪಿ ಹೋಗಿದೆ. ಚರಿತ್ರೆಯ ಬೇರೆಬೇರೆ ಕಾಲಘಟ್ಟಗಳ ಕಥಾಪರವಾದ ಪುನರಾವಿಷ್ಕಾರಗಳು ಭೂತಕಾಲದ ಸಂಭವಗಳಿಂದ ಪ್ರೇರಿತಗೊಂಡು ವರ್ತಮಾನಕಾಲದಲ್ಲಿ ಕ್ರಿಯಾತ್ಮಕವಾಗಿ ರೂಪುಗೊಳ್ಳಲು ಸಹಾಯ ಮಾಡುವುದಿದೆ. ೧೯೩೮ರಲ್ಲಿ ಆಲಪ್ಪಿಯಲ್ಲಿ ನಡೆದ ಕ್ರೂರ ನರಹತ್ಯೆಯವರೆಗೆ ಮುಟ್ಟಿದ ಸಂಭವಗಳಾಗಿವೆ ಕೇಶವದೇವ್ 'ಕನ್ನಡಿ'ಯಲ್ಲಿ ಚಿತ್ರಿಸಿದ್ದು. ಎದ್ದುತೋರುವ ಆ ಸಂಭವಗಳನ್ನು ಚಿತ್ರೀಕರಿಸಿದಾಗ ಅವರಿಗಿದ್ದ ಆವೇಶ ವಾಚಕರಲ್ಲಿ ಎದ್ದುಕಾಣದಿರಲು ಮುಖ್ಯ ಕಾರಣ ಕಾಲದ ಬದಲಾವಣೆಯೆಂದು ತೋರುತ್ತದೆ. ೧೯೩೦–೪೦ರ ಕಾಲಘಟ್ಟದಲ್ಲಿ ಬರೆಯಲ್ಪಟ್ಟಿದ್ದರೆ ಚರಿತ್ರಾಪರವಾದ ಒಂದು ಕರ್ತವ್ಯವೂ ನೆರವೇರಿದಂತಾಗುತ್ತಿತ್ತು. ಮಾತ್ರವಲ್ಲ ಸಮಕಾಲೀನ ಜೀವನ ಮತ್ತು ಭಾವೀ ಜೀವನಗಳನ್ನು ಹೊಂದಿಸಲು ಸಾಧ್ಯವಾಗಿದ್ದರೆ ಈ ಕೃತಿ ಮತ್ತೂ ಆಸ್ವಾದನೀಯವಾಗುತ್ತಿತ್ತು. ಆದರೆ ದೇವ್‌ರವರು ತಮ್ಮ ಚಿತ್ರೀಕರಣದಲ್ಲಿ ೧೯೩೮ರ ವರೆಗೆ ಮಾತ್ರ ತಲುಪಿರುವುದು. ಆದುದರಿಂದ 'ಕನ್ನಡಿ'ಯನ್ನು 'ಕಾಲತಪ್ಪಿ ಬರೆದ ಕೃತಿ'ಯೆಂದು ಹೇಳಬಹುದು.

'ಕನ್ನಡಿ' ಒಂದು ಅನುಸ್ಮರಣೆಯ ಕೃತಿಯೆಂದು ದೇವ್ ಹೇಳುತ್ತಾರೆ. ಪ್ರಧಾನ ಕಥಾಪಾತ್ರಗಳಲ್ಲಿ ಒಬ್ಬನಾದ 'ಗಾಳಿ' ಗ್ರಂಥಕರ್ತೃವನ್ನೇ ಪ್ರತಿನಿಧೀಕರಿಸುವ ಪಾತ್ರ. ದೇವ್ ಅವರ ಯಥಾರ್ಥವಾದದ ಒಂದಂಶಕ್ಕೆ ಸಾಕ್ಷ್ಯ ನೀಡುವುದು ಈ ಕಾದಂಬರಿ. ಸಾಮಾನ್ಯ ಜನರ ನಿತ್ಯ ಜೀವನದ ಹತ್ತಿರ ಹೋಗಿ ಅವರೊಂದಿಗೆ ಕೂಡಿಯಾಡಿದ ದೇವ್ ಅವರಿಗೆ ಆ ಜೀವನದ ಆವಿಷ್ಕಾರ ಸಿದ್ಧಿಸಿದೆ. ಆದರೆ ಇದನ್ನು ಬರೆಯಲು ಹದಿನಾಲ್ಕು ತಿಂಗಳುಗಳು ಹಿಡಿದರೂ 'ಕನ್ನಡಿ'ಗೆ ಬೇಕಷ್ಟು ಆಳ ಮತ್ತು ವಿಸ್ತಾರ ಬರಲಿಲ್ಲ: ಸಾಮಾನ್ಯ ಜೀವನವನ್ನಾವಿಷ್ಕರಿಸಲು ದೇವ್ ಅವರಿಗಿರುವ ಸಾಧ್ಯತೆಯು, ಕೇವಲ ಒಂದು ಮಿಂಚು ಮಾತ್ರ ಕಾಣಬಹುದಾದರೂ ಅದಕ್ಕೂ ಪ್ರಕಾಶ ಸಾಲದು. ಮನುಷ್ಯರೆಂಬ ನೆಲೆಯಲ್ಲಿ ಕೊಚ್ಚುರಾಮನ್ ಮತ್ತು ಬಿಳಿ ನೀಲಿಯರ ಚಿತ್ರೀಕರಣದಲ್ಲಿ ಬಂದಿರುವ ಸಹಜತೆ ಅವರ ಮುಂದಿನ ಜನಾಂಗದಲ್ಲಿ ಸಾಕಷ್ಟು ಬಂದಂತಿಲ್ಲ.

ಅದಕ್ಕೆ ಕಾರಣವೂ ಇದೆ. ಕೊಚ್ಚುರಾಮನ್ ಮತ್ತು ನೀಲಿಯರು ಮಾನವರು. ಅವರ ಮಕ್ಕಳಾದ ಅಂತೋಣಿ ಮತ್ತು ರೋಕಿಯರು ಉದ್ದೇಶಪೂರಿತ ಆಶಯ ಪರಿವರ್ತನೆಯ ಮತ್ತು ಸಾಹಸಪೂರ್ಣ ಪ್ರವಾಹದ ಪ್ರತಿನಿಧಿಗಳು. 'ಗಾಳಿ' ಬಗ್ಗೆ ಹೇಳುವುದಾದರೆ ದೇವ್ ಅವರ ಮೇರೆ ಮೀರಿದ 'ರೊಮೆಂಟಿಸಂ' ಆ ಕಥಾಪಾತ್ರದಲ್ಲಿ ಅವಿಶ್ವಾಸದ ಕಿರೀಟ ಹೆಣೆಯುತ್ತದೆ. ಊರು ಹೆಸರುಗಳಿಲ್ಲದ (ಅನಾಮಧೇಯ) ಎಲ್ಲೆಡೆಗಳಲ್ಲೂ ಎಲ್ಲಾ ಸಮಯದಲ್ಲೂ ಕಾಣಸಿಕೊಳ್ಳುವ (ಭಾಗ್ಯಕ್ಕೆ ಅಣುವಿನಲ್ಲೂ ಮಹತ್ತಿನಲ್ಲೂ ಎಂದು ಹೇಳಲಿಲ್ಲ.) ವ್ಯಕ್ತಿ 'ಗಾಳಿ'. ಮಕ್ಕಳನ್ನು ಸಂತೋಷಪಡಿಸ ಬಹುದಾದ ಹೆಸರದು. ಆ ಹೆಸರಿನಲ್ಲೇ ಕಾಣಬಹುದಲ್ಲ ಒಂದು ಹಾಸ್ಯಭಾವ. ಬೆವರು, ರಕ್ತಗಳನ್ನು ಉಜ್ಜಿ ತೆಗೆಯುತ್ತಿರುವ; ಮರ್ದನ ಮತ್ತು ಯಾತನೆಗಳನ್ನು ಅನುಭವಿಸುತ್ತಿರುವ ಹಸಿ ಮನುಷ್ಯರಲ್ಲಿ ಇಂಥ ಒಂದು ವಿಚಿತ್ರ ಕಥಾಪಾತ್ರವನ್ನು ತುರುಕಿಸಿದ್ದು; ಕಾದಂಬರಿಯ ಅಂತರಾಳವನ್ನು, ವಿಶ್ವಾಸವನ್ನು, ಮಿಡಿಯುವಿಕೆಯನ್ನು ಅಧಿಕವಾಗಿ ಬಾಧಿಸಿರುವುದು. ಅದರ ಬದಲಾಗಿ ಮಣ್ಣಿನಲ್ಲಿ ಕಾಲೂರಿ ನಿಲ್ಲುವ ಒಬ್ಬ ಸಾಮಾನ್ಯ ಶ್ರಮಜೀವಿಯನ್ನು ಮುಂದಾಳಾಗಿ ದೇವ್ ಚಿತ್ರಿಸುತ್ತಿದ್ದರೆ, 'ಕನ್ನಡಿ' ಯು ಒಂದು ಕಾಲಘಟ್ಟದ ಕೈಗನ್ನಡಿಯಾಗುತ್ತಿತ್ತು. ಪ್ರಸ್ತುತದ ಸ್ಥಿತಿಯಲ್ಲಿ ನೋಡುವು ದಾದರೆ 'ಗಾಳಿ' ಒಬ್ಬ 'ಕ್ಯಾರಿಕೇಚರ್' ಆಗಿದ್ದಾನೆ. ಸಜೀವ ಕಥಾಪಾತ್ರಗಳ ಮಧ್ಯೆ ಪ್ರವೇಶಿಸಿ ಸಿಕ್ಕಿಕೊಂಡ ಒಂದು 'ಕಾರ್‌ಟೂನ್' ಕಥಾಪಾತ್ರವಾಗಿದೆ ಅದು. ಆದುದ ರಿಂದ 'ಕನ್ನಡಿ'ಯು ಒಂದು ಧೂಳು ಮುಸುಕಿದ ಕನ್ನಡಿಯಾಗಿದೆ.

ಹೀಗಿದ್ದರೂ ಕೇರಳದ ಶ್ರಮಿಕರ ಮೊಟ್ಟಮೊದಲಿನ ಪ್ರಶ್ನೆಗಳನ್ನು ಸಣ್ಣಮಟ್ಟಿ ಗಾದರೂ ಸ್ಪಷ್ಟವಾಗಿ ರೂಪಿಸಲು ಕೇಶವದೇವ್ ಅವರಿಗೆ ಸಾಧ್ಯವಾಗಿದೆ. ಮಾಲಿಕ ರನ್ನು ದೇವರೆಂದು ನಂಬಿದ್ದ ಕೂಲಿಕಾರರು ಬುದ್ಧಿಪೂರ್ವಕ ಚೇತರಿಸಿಕೊಳ್ಳುವುದು, ಒಂದಾಗುವುದು, ಉತ್ತಮ ಭವಿಷ್ಯದ ಕನಸುಕಾಣುವುದು ಇತ್ಯಾದಿಗಳನ್ನು ಅನಾಯಾಸ ವಾಗಿಯೂ ಆಕರ್ಷಕವಾಗಿಯೂ ಅವರು ಚಿತ್ರಿಸಿರುವರು. ವಿಶೇಷವಾಗಿ ಹೇಳುವು ದಾದರೆ, ಕೇರಳೀಯರಲ್ಲದ ವಾಚಕರಿಗೆ ಕೇರಳದ ಒಂದು ಕಾಲಘಟ್ಟದ ಸಾಮಾಜಿಕ ಚರಿತ್ರೆಯ ಪರಿಚಯವಾಗಲು ಈ ಕೃತಿ ಖಂಡಿತವಾಗಿಯೂ ಸಹಕಾರಿಯಾಗುವುದು. ವರ್ಕಿ, ಪಲಿಯರಾಗಿ ಮತಾಂತರಗೊಂಡ ಕೊಚ್ಚುರಾಮನ್ ಮತ್ತು ಬಿಳಿ ನೀಲಿಯ ರಂತಹ ಸ್ನೇಹಸಂಪನ್ನರಾದ ಕೇರಳೀಯ ಶ್ರಮಜೀವಿಗಳ ಪ್ರತಿನಿಧಿಗಳನ್ನು ನಾವು ಎಲ್ಲೆಲ್ಲಿಯೂ ಕಾಣಬಹುದು. ಕೇರಳೀಯ ಪ್ರಭುತ್ವದಲ್ಲಿ ಒಡಕು ತಲೆಯೆತ್ತುವ ಮೊದಲಿನ ಮಾಲಿಕರ ಪ್ರತಿನಿಧಿಗಳಾಗಿ ಚಿತ್ರಿಸಲ್ಪಟ್ಟಿದ್ದಾರೆ ವಕ್ಕಚ್ಚನ್ ಮತ್ತು ಕುಂಜು ಶಂಕರನ್. ಶ್ರಮಜೀವಿಗಳಿಗೆ ಮುಂದಾಳುತ್ವ ಕೊಡಲು ಧನಿಕ ಕುಟುಂಬದಿಂದ ಇಳಿದುಬಂದ 'ಕಾಮ್ರೇಡ್' ನೀಲಕಂಠನಾದರೋ (ಅವನ ಕೈಯಲ್ಲಿ 'ಬೆಲೆಬಾಳುವ ರಿಸ್ಟ್ ವಾಚು' ಯೋಗ್ಯತೆಯ ಹಾಗೂ ಘನತೆಯ ಚಿತ್ರೀಕರಣಕ್ಕೆ ಕೇಶವದೇವ್ ಮರೆತಿಲ್ಲ) ಕೇರಳೀಯರಿಗೆ ಸುಪರಿಚಿತವಾದ ಕಥಾಪಾತ್ರ ಮಾತ್ರ.

ಕೇಶವದೇವ್ ವಿರೋಧಶಕ್ತಿಯ ನಾಯಕ. ಆತ್ಮ ಕಥಾಖ್ಯಾನ ಪರವಾದ ಮೂರು ಭಾಗಗಳಿರುವ ಅವರ ಸುಪ್ರಸಿದ್ಧ ಕೃತಿಯ ಶೀರ್ಷಿಕೆಯೂ 'ಎದಿರ್‌ಪ್ಪ್' (ವಿರೋಧ) ಎಂದಲ್ಲವೇ? ಎದುರಿಸುವುದು ಕೇರಳೀಯ ಸಾಮಾಜಿಕ ಜೀವನದ ಅವಿಭಾಜ್ಯ ಘಟಕವಷ್ಟೆ! ವಾದ–ಪ್ರತಿವಾದ ಕೇರಳೀಯ ಸ್ವಭಾವದ ಮುಖಮುದ್ರೆಯಾಗಿದೆ. ಅವರ ವಾದ–ಪ್ರತಿವಾದದ ಕುರಿತು. ಆರ್. ಇ. ಏಷರ್ ಹೇಳಿದ ಅಭಿಪ್ರಾಯ ಇಲ್ಲಿ ಉದ್ಧರಿಸದಿರಲು ಮನಸ್ಸು ಬರುವುದಿಲ್ಲ. "ಭಾರತದ ತೆಂಕಣ ದಿಕ್ಕಿನ ಮನೋಹರವಾದ ಭೂಭಾಗದಲ್ಲಿ ಜೀವಿಸಲು ಅವಕಾಶ ದೊರಕಿದ ಒಬ್ಬನಿಗೆ—ಮಲಯಾಳಿಗೆ, ಊಟವು ಹೇಗೆ ಪ್ರಾಧಾನ್ಯವೋ ಹಾಗೇ ವಾದ–ಪ್ರತಿವಾದವು ಪ್ರಾಮುಖ್ಯ ಸಂಗತಿಯಾಗಿದೆ, ಎಂಬುದನ್ನು ಬಹುಬೇಗನೆ ಅರಿತುಕೊಳ್ಳಬಹುದು. ಯಾವುದೇ ವಿಷಯವಾದರೂ—ಧಾರ್ಮಿಕವೊ, ಸಾಹಿತ್ಯಿಕವೊ. ರಾಷ್ಟ್ರೀಯವೊ—ವಾದ–ಪ್ರತಿವಾದಗಳಿಗೆ ವಸ್ತುವಾಗುವುದು. ಎಷ್ಟೇ ಮಹತ್ವದ ಗ್ರಂಥಕ್ಕೂ ಅಲ್ಲಿ ಸಾರ್ವತ್ರಿಕ ಅಂಗೀಕಾರ ದೊರಕಬೇಕಿದ್ದರೆ ಗ್ರಂಥಕರ್ತನು ನಿಜವಾಗಿಯೂ ಮರಣಗೊಂಡಿರಬೇಕು! ಒಣ ವಾದ–ಪ್ರತಿವಾದ ಹೆಚ್ಚಾಗಿ ಪಕ್ಷಪರವಾಗಿಯೋ ಅಸೂಯಾಪರವಾಗಿಯೋ ವಿರೋಧದಿಂದಲೋ ಕೂಡಿರುವುದಾಗಿದೆ. ಆದರೆ ಎಲ್ಲಾ ಸಮಯದಲ್ಲೂ ವಾದ–ಪ್ರತಿವಾದಗಳು ಹೆಚ್ಚು ಕಡಿಮೆ ಉತ್ತಮ ಸಾಹಿತ್ಯವೆಂದು ಹೇಳುವುದಿದೆ. ಅದರ ಕುರಿತು ಇರುವ ಆಶಯಗಳ ಆಧಾರದಿಂದಲೋ, ಸಾಹಿತಿಯು ಗಮನಿಸಬೇಕಾದ್ದು ಎಂಬುದರ ಆಧಾರದಿಂದಲೋ ಒಂದು ಕೃತಿಯ ಮೌಲ್ಯ ನಿರ್ಣಯಿಸಲಿರುವ ಶ್ರಮದ ಫಲವಾಗಿರಬಹುದಿದು."

ಎಲ್ಲಾ ಸಮಯದಲ್ಲೂ ವಾದ–ಪ್ರತಿವಾದಕ್ಕೆ ವಿಷಯವಾಗಿದ್ದರೂ ಈಗ ಇಲ್ಲಿ ವಾದ–ಪ್ರತಿವಾದಕ್ಕೆ ವಸ್ತುವಾಗಿದ್ದರೂ ಸಾಹಿತಿಯೆಂಬ ನೆಲೆಯಲ್ಲಿ ಸಾರ್ವತ್ರಿಕ ಅಂಗೀಕಾರ ಪಡೆಯಲು. ಜೀವಿಸಿರುವಾಗಲೇ ಅವರಿಗೆ ಸಾಧ್ಯವಾಯಿತು ಎಂಬುದರಲ್ಲಿ ಕೇಶವದೇವ್ ಅವರಿಗೂ ಕೇರಳೀಯರಿಗೂ ಅಭಿಮಾನದ ಸಂಗತಿಯಾಗಿದೆ.

ವಾದ–ಪ್ರತಿವಾದ ಕೇರಳೀಯರ ಜೀವನದ ಮುಖಮುದ್ರೆಯಾಗಿದ್ದರೆ, ಎದುರಿಸುವಿಕೆಯು ಕೇಶವದೇವ್ ಅವರ ಪ್ರಾಣವಾಯುವಾಗಿದೆ. ಕೆಲವೊಮ್ಮೆ ಅವರ ವಿರೋಧಿಸುವಿಕೆಯು ಕೇವಲ 'ವಿರೋಧಕ್ಕಾಗಿ ವಿರೋಧ' ಎಂದು ಕಾಣುವುದಿದ್ದರೂ ಈ ವಿರೋಧಿಸುವಿಕೆಯೇ ಅವರನ್ನೂ ಅವರ ಸಾಹಿತ್ಯಸೃಷ್ಟಿಯನ್ನೂ ಸಜೀವಗೊಳಿಸುತ್ತಿರುವುದೆಂದು ಹೇಳಬಹುದು. ಯುವಜನಾಂಗವನ್ನು ನಾಚಿಸುವಂತಹ ಉನ್ನತಿಕೆಯನ್ನೂ ಶೌರ್ಯವನ್ನೂ ಪ್ರಾಪ್ತಿಯನ್ನೂ ವಿಶ್ವಾಸವನ್ನೂ ಪ್ರದರ್ಶಿಸುವ ಕೇಶವದೇವ್ ಜೀವನದ ನಿತ್ಯ ಆಶಾವಾದಿಯೂ ನಿತ್ಯಯುವಕ ವಿದ್ಯಾರ್ಥಿಯೂ ಆಗಿರುವರು. ಬಿದ್ದು ನೆಲಸಮವಾದ ಅರಮನೆಗಳ ತಳಗಳಲ್ಲಿ ಹೊಸ ಅರಮನೆಗಳನ್ನು ನಿರ್ಮಿಸಲು, ತಾವೇ ಮುರಿದಿಕ್ಕಿದವುಗಳನ್ನು ಜೀರ್ಣೋದ್ಧಾರ ಮಾಡಲೂ ಅವರಿಗೆ ಆವೇಶ ದೊರಕುವುದು ಜೀವನದ ಅದಮ್ಯ ಕಾರ್ಯತತ್ಪರತೆಯಿಂದ ಮತ್ತು ವಿಶ್ವಾಸದಿಂದಾಗಿದೆ

ಎಂದು ಹೇಳಬಹುದು. ಈ ತರುಣದಲ್ಲಿ ನವೀನ ಬರಹಗಾರರಿಗೆ ಅವರು ನೀಡುತ್ತಿರುವ ಸಂದೇಶ ಗಮನೀಯವಾಗಿದೆ. "ಬರೆಯಿರಿ, ಎಂದೇ ನಾನು ಹೇಳಲಿರುವ ಮಾತು. ಬರೆಯಿರಿ ಮತ್ತೂ ಬರೆಯಿರಿ. ಬರೆಯಬೇಕಿದ್ದರೆ ಜೀವನ ಕಲಿಯಬೇಕು, ಆದುದರಿಂದ ಬದುಕಲು ಕಲಿಯುವುದು ಪ್ರಧಾನವಾಗಿದೆ."

ಪೂರ್ಣ ಕೇರಳೀಯನಾದ ಕೇಶವದೇವ್ ಕೇರಳೀಯವಲ್ಲದೆ ಬೇರೇನಾದರೂ ಬರೆದಿರುವರೋ ಎಂಬುದು ಸಂಶಯವಾಗಿದೆ. ಕೇರಳೀಯ ಸ್ವಭಾವ ವೈಚಿತ್ರ್ಯಗಳ ಮತ್ತು ಸ್ವಭಾವ ದಾರ್ಢ್ಯತೆಯ ಬಹು ಶ್ರೇಷ್ಠ ಆದರ್ಶ ಬರಹಗಾರ ಕೇಶವದೇವ್ ಅವರ ಕೃತಿಯಾದ 'ಕನ್ನಡಿ'ಯ ಬಗ್ಗೆ ಬರೆದ ಈ ಮಾತುಗಳನ್ನು ತುಸು ಅಸಮಾಧಾನ ವಿದ್ದರೂ, ಅಭಿಮಾನದಿಂದಲೂ ಆನಂದದಿಂದಲೂ ವಾಚಕರ ಮುಂದಿಡುತ್ತೇನೆ,

**—ಟಿ. ಎನ್. ಜಯಚಂದ್ರನ್.**

# (೧)

ಅಂತೋಣಿಯ ತಂದೆ ಕೊಚ್ಚುರಾಮನ್. ಅವನ ತಂದೆ ಕೊಚ್ಚಯ್ಯಪ್ಪನ್. ಕಳ್ಳು ತೆಗೆಯುವುದು ಅವನ ಕಸುಬಾಗಿತ್ತು.

ಹೊಲೆಯರ ಕಂಡನ್ ಬಿಳಿನೀಲಿಯ ತಂದೆ. ಅವನೊಬ್ಬ ಸೊಗಸಾದ ಗೆಯ್ಯಾಳು.

ಜಮೀನ್ದಾರ ಪಕ್ಕಚ್ಚನಿಗೆ ಒಂದು ದೊಡ್ಡ ತೆಂಗಿನ ತೋಟವಿತ್ತು. ಅದರಲ್ಲಿ ಕೂಲಿ ಒಕ್ಕಲಾಗಿದ್ದರು ಬಿಲ್ಲವರ ಕೊಚ್ಚಯ್ಯಪ್ಪನ್ ಮತ್ತು ಹೊಲೆಯರ ಕಂಡನ್. ಎರಡು ಜಾತಿಗಳೊಳಗಿನ ಅಸ್ಪೃಶ್ಯತೆಯ ಅಂತರವನ್ನು ಎತ್ತಿ ತೋರಿಸುವಂತೆ ತೋಟದ ತೆಂಕಣ ತುದಿಯಲ್ಲಿ ಹೊಲೆಯರ ಕಂಡನ್, ಬಡಗಣ ತುದಿಯಲ್ಲಿ ಬಿಲ್ಲವರ ಕೊಚ್ಚಯ್ಯಪ್ಪನ್ ಇರುತ್ತಿದ್ದರು. ತೋಟದ ನಡುಮಧ್ಯದಲ್ಲಿ ನೀರು ಹರಿದುಹೋಗುವ ಒಂದು ತೊರೆಯೂ ಇತ್ತು.

ಕೊಚ್ಚಯ್ಯಪ್ಪನ ಹಿರಿಯ ಮಗ ಕೊಚ್ಚುರಾಮನಿಗೆ ಇಪ್ಪತ್ತನಾಲ್ಕು ವರ್ಷ. ಅವನು ಮೂರು—ನಾಲ್ಕನೇ ತರಗತಿಯ ವರೆಗೆ ಓದಿದ್ದ. ಸುಂದರವಾದ ಮತ್ತು ಗಟ್ಟಿಯಾದ ದೇಹ ಅವನದು. ಅವನು ತನ್ನ ಗುಂಗುರು ಕೂದಲನ್ನು ನೆತ್ತಿಯಿಂದ ಬಾಚಿ, ಬನಿಯನ್ ಹಾಕಿಕೊಂಡು ಯಾವಾಗಲೂ ಬೆಳಗ್ಗೆ ಕೆಲಸಕ್ಕೆ ಹೋಗುತ್ತಿದ್ದ. ಅವನನ್ನು ನೋಡಲು ಬಿಳಿನೀಲಿ ತನ್ನ ಮನೆಯ ಒಳಗಣ ಅಂಗಳದಲ್ಲಿ ಬಂದು ನಿಲ್ಲುತ್ತಿದ್ದುದು ವಾಡಿಕೆಯಾಗಿತ್ತು.

ಕೊಚ್ಚುರಾಮನಿಗೆ ಕೊಚ್ಚಿ (ಕೊಚ್ಚಿನ್) ಬಂದರಿನಲ್ಲಿ ಹಡಗಿನಿಂದ ಸಾಮಾನುಗಳನ್ನು ದಡಕ್ಕೆ ಸಾಗಿಸುವ ಕೆಲಸ. ಆ ದಿನಗಳಲ್ಲಿ ಕೊಚ್ಚಿಗೆ ಹಡಗು ಬಂದರೆ ಒಳಗೆ ಪ್ರವೇಶಿಸುವುದಕ್ಕಾಗಲೀ ದಡಕ್ಕೆ ಬರುವುದಕ್ಕಾಗಲೀ ಸೌಕರ್ಯವಿರಲಿಲ್ಲ. ಸಾಮಾನುಗಳನ್ನು ತುಂಬಿದ ಹಡಗುಗಳು ಸಮುದ್ರದ ದಡವನ್ನು ಬಿಟ್ಟು ಬಹುದೂರ ನಿಲ್ಲುತ್ತಿದ್ದುವು. ಹಡಗಿನಿಂದ ಸಾಮಾನುಗಳನ್ನು ದೋಣಿಗಳಲ್ಲಿ ತುಂಬಿಸಿ ದಡಕ್ಕೆ ತಂದು ಇಳಿಸುವುದು ಪದ್ಧತಿ. ಅಂತಹ ದೋಣಿಗಳಲ್ಲಿ ಒಂದರ ಯಜಮಾನ ಕೊಚ್ಚುರಾಮನ್. ಹಡಗಿನಿಂದ ಇಳಿಸಿದ ಸಾಮಾನಿನ ಪ್ರಮಾಣಕ್ಕನುಸಾರವಾಗಿ ಅವರಿಗೆ ಕೊಡಬೇಕಾದ ಕೂಲಿ ನಿರ್ಧಾರವಾಗುತ್ತಿತ್ತು. ಆದುದರಿಂದ ಆ ದೋಣಿಗಾರರಿಗೆ ಇತರರಿಗಿಂತ ಹೆಚ್ಚಿನ ಕೂಲಿ ಸಿಗುತ್ತಿತ್ತು.

ಕೊಚ್ಚಯ್ಯಪ್ಪನ್ ಮತ್ತು ಕೊಚ್ಚುರಾಮನ್ ಇಬ್ಬರೂ ದುಡಿದು ಹಣ ತರುತ್ತಿದ್ದುದರಿಂದ ಅವರ ಕುಟುಂಬ ಜೀವನ ಹೆಚ್ಚು ಕಡಿಮೆ ಸುಖವಾಗಿತ್ತು. ಅವರ ಸಂಪಾದನೆಯಲ್ಲಿ ಅಲ್ಪಸ್ವಲ್ಪ ಉಳಿತಾಯವಾಗುತ್ತಿತ್ತು. ನೆರೆಹೊರೆಯವರಿಗೆ ಅಗತ್ಯ ಬಿದ್ದಲ್ಲಿ ಕೆಲವೊಮ್ಮೆ ಸಾಲ ಕೊಡುವುದೂ ನಡೆಯುತ್ತಿತ್ತು. ಆದ್ದರಿಂದಲೇ

ನೆರೆಹೊರೆಯ ಹೆಂಗಸರಿಂದ ಕೊಚ್ಚುರಾಮನ ತಾಯಿ ಪಾರುವಿಗೆ ಸ್ವಲ್ಪ ಗೌರವ ದೊರಕುತ್ತಿತ್ತು.

ಎಲ್ಲಾ ರೈತರಿಗೂ ಹೊಲೆಯರ ಕಂಡನ್ ಬೇಕೇಬೇಕು. ಒಂದು ದಿನದಲ್ಲಿ ಇಬ್ಬರು ಮಾಡುವ ಕೆಲಸವನ್ನು ಅವನು ಒಬ್ಬನೇ ಮಾಡುತ್ತಿದ್ದ. ಆದುದರಿಂದ ಅವನಿಗೆ ದಿನಕ್ಕೆ ಒಂದೂವರೆ ಆಳಿನ ಕೂಲಿಯೂ ಸಿಗುತ್ತಿತ್ತು. ಆದರೆ ಸಿಕ್ಕುವುದನ್ನೆಲ್ಲಾ ಅಂದಂದೇ ಮುಗಿಸುತ್ತಲೂ ಇದ್ದ. ಕಂಡನಿಗೆ ಚೆನ್ನಾಗಿ ತಿನ್ನಲೂ ಬೇಕು ಚೆನ್ನಾಗಿ ಕುಡಿಯಲೂ ಬೇಕು. ದುಡ್ಡು ಕೊಟ್ಟು ಕುಡಿದದ್ದು ಸಾಕಾಗದಿದ್ದಲ್ಲಿ ಈಚಲು--ತೆಂಗು ಮರಗಳನ್ನೇರಿ ಕದ್ದು ಕಳ್ಳು ಕುಡಿಯಲೂ ಅವನು ಹಿಂಜರಿಯುತ್ತಿರಲಿಲ್ಲ.

ಕಂಡನ ಹೆಂಡತಿ ಅಳಗಿಯ ಚೊಚ್ಚಲ ಮಗು ತೀರಿಹೋಗಿತ್ತು. ಎರಡನೆಯ ಮಗುವೇ ನೀಲಿ. ಅವಳ ಮೈಬಣ್ಣ ಬಿಳಿಯಾದುದರಿಂದ ಎಲ್ಲರೂ ಅವಳನ್ನು ಬಿಳಿನೀಲಿ ಎಂದು ಕರೆಯುತ್ತಿದ್ದರು. ಅಳಗಿ, ನೀಲಿಯನ್ನು ಹೆತ್ತಾಗ ನೆರೆಹೊರೆಯವರು "ಕರಿ ಕೋಳಿ ಬಿಳಿ ಮೊಟ್ಟೆಯಿಟ್ಟಿತು" ಎಂದು ಹಾಸ್ಯ ಮಾಡಿದ್ದರು. ಇದರ ಹಿನ್ನೆಲೆಯಾಗಿ ಒಂದು ಕಥೆ ಇದೆ.

ವಕ್ಕಚ್ಚನ್ ಒಂದೊಂದು ದಿನ ಸಂಜೆ ವೇಳೆಯಲ್ಲಿ ತನ್ನ ತೋಟದಲ್ಲಿ ಸುತ್ತಾಡಿ ಬರುತ್ತಿದ್ದ. ದೃಢವಾದ ಬಿಳಿಯ ದೇಹ, ಹುರಿಮೀಸೆ, ಗಲ್ಲದ ವರೆಗೆ ಕೂದಲು ಇಳಿಯಬಿಟ್ಟ ಮುಖಕ್ಷೌರ, ಪಂಚೆಯುಟ್ಟ ನೀಳವಾದ ಶಾಲು ಹೊದ್ದುಕೊಂಡು ನಾಟಕದಲ್ಲಿನ ರಾಜನಂತೆ ನಡೆಯುವ ವ್ಯಕ್ತಿ ವಕ್ಕಚ್ಚನ್. ತೋಟವನ್ನು ನೋಡುವುದೂ, ಒಕ್ಕಲುಗಳ ಯೋಗಕ್ಷೇಮ ವಿಚಾರಿಸುವುದೂ ಅವನ ತಿರುಗಾಟದ ಉದ್ದೇಶ. ಒಕ್ಕಲು ಮಕ್ಕಳ ಬಗ್ಗೆ ಕರುಣೆಯುಳ್ಳ ವ್ಯಕ್ತಿ ಅವನು. ಸುಂದರ ಸ್ತ್ರೀಯರಿರುವ ಒಕ್ಕಲೆಂದರೆ ಅವನು ಹೆಚ್ಚಿನ ಕರುಣೆ ತೋರಿಸುತ್ತಿದ್ದ. ಈ ರೀತಿಯ ಅವನ ಹೆಚ್ಚಿನ ಕರುಣೆಗೆ ಪಾತ್ರನಾದ ಒಕ್ಕಲಾಗಿದ್ದ ಹೊಲೆಯರ ಕಂಡನ್.

ಕಂಡನ ಹೆಂಡತಿ ಅಳಗಿಗೆ ಮಾದಕವಾದ ಕಣ್ಣುಗಳಿದ್ದುವು. ಆಕರ್ಷಕವಾದ ನಗೆಯೂ ಇತ್ತು. ಆದ್ದರಿಂದ ವಕ್ಕಚ್ಚನ್ ಅಲ್ಲಿಗೆ ಹೋದರೆ ಬಹಳ ಹೊತ್ತು ಅಂಗಳದಲ್ಲಿ ಕುಳಿತುಕೊಳ್ಳುತ್ತಿದ್ದ. ಅವನಿಗೆ ಕುಳಿತುಕೊಳ್ಳಲೂ ಮಲಗಲೂ ಕ್ಯಾನ್ವಾಸಿನ ಒಂದು ಕುರ್ಚಿ ಅಲ್ಲಿ ಪ್ರತ್ಯೇಕವಾಗಿ ಇಡಲಾಗಿತ್ತು. ಅವನು ಬಂದೊಡನೆ ಅಳಗಿ ಆ ಕುರ್ಚಿಯನ್ನು ತಂದು ಅಂಗಳದಲ್ಲಿ ಇಡುತ್ತಿದ್ದಳು. ಕಂಡನ್ ಬೇಕೆಂದೇ ವಕ್ಕಚ್ಚನಿಗೆ ತಾಂಬೂಲ ತರಲು ಹೋಗುತ್ತಿದ್ದ. ಒಂದೆರಡು ಸಲ ತಿನ್ನಲು ಬೇಕಾದ ತಾಂಬೂಲ ತರುವುದಕ್ಕೆ ಪೂರ್ತಿ ಒಂದು ರೂಪಾಯಿಯನ್ನು ವಕ್ಕಚ್ಚನ್ ಅವನ ಕೈಯಲ್ಲಿ ಇಡುತ್ತಿದ್ದ. ಅವನು ಹೋಗುವಾಗ ವಕ್ಕಚ್ಚನ್ ಕೂಗಿ ಹೇಳುತ್ತಿದ್ದ :

"ಬೇಕಾದರೆ ಹಾಗೆಯೇ ಒಮ್ಮೆ ಸೇಂದಿ ಅಂಗಡಿಯನ್ನೂ ಹೊಕ್ಕು ಬಾ."

ಅವನು ಹೇಳಲಿ ಬಿಡಲಿ ಕಂಡನ್ ಕಳ್ಳು ಅಂಗಡಿಯನ್ನು ಹೊಕ್ಕೇ ತೀರುತ್ತಿದ್ದ.

ಅಕ್ಕಪಕ್ಕದಲ್ಲಿ ಒಕ್ಕಲಿದ್ದವರು ಇದನ್ನೆಲ್ಲ ನೋಡುತ್ತಿದ್ದರೂ ಅದನ್ನು ನೋಡಿವಂತೆ ತೋರಿಸಿಕೊಳ್ಳುತ್ತಿರಲಿಲ್ಲ.

ವಕ್ಕಚ್ಚನ್ ತನ್ನ ತೋಟದಿಂದ ತೆಂಗಿನಕಾಯಿ ಕೀಳಿಸುವಾಗ ಪ್ರತಿ ಒಕ್ಕಲಿಗೆ ಎರಡರಂತೆ ಕಾಯಿಗಳನ್ನು ಕೊಡುತ್ತಿದ್ದ. ಆದರೆ ಅವನು ಕಾಯಿ ಕೀಳಿಸಿ ಹೋದ ಮೇಲೆ ಅಳಗಿ ಹತ್ತು ಹದಿನೈದು ತೆಂಗಿನ ಕಾಯಿಯನ್ನು ಮಾರಲು ತೆಗೆದುಕೊಂಡು ಹೋಗುವುದು ಕಂಡುಬರುತ್ತಿತ್ತು.

ಒಂದೊಂದು ರಾತ್ರಿ ಕಂಡನ ಗುಡಿಸಲಿನ ಸಮೀಪದ ಮರಗಳಿಂದ ತೆಂಗಿನ ಕಾಯಿಗಳು ಬೀಳುವ ಶಬ್ದ ಕೇಳಿಬರುತ್ತಿತ್ತು. ನೆರೆಹೊರೆಯವರು ಅದನ್ನು ವಕ್ಕಚ್ಚನಿಗೆ ಹೇಳುತ್ತಿದ್ದರು. ಆಗ ಅವನು "ಕೊಂದುಬಿಡುತ್ತೀನಿ, ತಿಂದುಬಿಡುತ್ತೀನಿ" ಎಂದೆಲ್ಲಾ ಕೂಗಾಡುತ್ತಿದ್ದ. ಆ ಮೇಲೆಯೂ ಕಂಡನ್ ತೆಂಗಿನಕಾಯಿಗಳನ್ನು ಕೀಳುವುದು ನಡೆಯುತ್ತಲೇ ಇತ್ತು.

ವಕ್ಕಚ್ಚನ್ ಒಮ್ಮೆ ತೆಂಗಿನ ಕಾಯಿ ಕೀಳಿಸಲು ಬಂದಿದ್ದಾಗ, ಕೊಚ್ಚಯ್ಯಪ್ಪನ್ ತನ್ನ ಅಂಗಳದ ತೆಂಕಣದಲ್ಲಿದ್ದ ಮರದಿಂದ ಒಂದು ತೆಂಗಿನ ಗೊನೆಯನ್ನು ಕಳವು ಮಾಡಿದುದಾಗಿ ತಿಳಿದುಬಂತು. ಅವನು ಕೊಚ್ಚಯ್ಯಪ್ಪನನ್ನು ಬಹಳಷ್ಟು ಬೈದು, ಪೋಲೀಸರ ಕೈಗೆ ಕೊಡುವೆನೆಂದು ಗದರಿಸಿದ. ಕೊಚ್ಚಯ್ಯಪ್ಪನ್ ಕೇಳಿದ:

"ಅದೇನು ಧಣಿಗಳೇ ಪಕ್ಷಪಾತ ತೋರಿಸೋದು? ಪೊಲೆಯರ ಕಂಡನ್ ತೆಂಗಿನ ಗೊನೆಗಳನ್ನು ಕದ್ದು ಇಳಿಸಿದರೆ ದಣಿಗಳು ಮಾತನಾಡುವುದೇ ಇಲ್ಲವಲ್ಲ."

"ಅದು ನನ್ನ ಇಷ್ಟ ಕಣೋ. ನೀನ್ಯಾರೋ ಅವನ್ನೆಲ್ಲಾ ಕೇಳೋದಕ್ಕೆ?"

"ಪಕ್ಷಪಾತ ಮಾಡಬಾರದು ದಣಿಗಳೇ. ಮೇಲೊಬ್ಬನಿದ್ದಾನೆ ಇವನ್ನೆಲ್ಲ ನೋಡಿಕೊಳ್ಳೋದಕ್ಕೆ."

ಕೊಚ್ಚಯ್ಯಪ್ಪನ್ ತಿಳಿಯದಂತೆ ತೆಂಗಿನಕಾಯಿ ಕೀಳುತ್ತಲೇ ಇದ್ದ. ವಕ್ಕಚ್ಚನ್ ಕೇಳಿದರೆ "ಪಕ್ಷಪಾತ ಮಾಡಬಾರದು" ಎಂದು ಹೇಳುತ್ತಿದ್ದ.

ವಕ್ಕಚ್ಚನ್‌ನ ತೋಟದ ಇನ್ನೊಂದು ಭಾಗದಲ್ಲಿ ತೌಡು ವ್ಯಾಪಾರದ ಸಾರಳು ಕೂಲಿ ಒಕ್ಕಲಾಗಿದ್ದಳು. ಮನೆಮನೆಗಳಿಗೆ ಹೋಗಿ ತೌಡು ಒಟ್ಟುಗೂಡಿಸಿಕೊಂಡು ಹೋಗುವುದು ಅವಳ ಕಸುಬು. ಕೆಲವರು ಅವಳನ್ನು "ತುಡುಗಿ ಸಾರ" ಎಂದೂ ಕೆಲವರು "ವಾಚಾಳಿ ಸಾರ" ಎಂದೂ ಕರೆಯುತ್ತಿದ್ದರು.

ತೌಡು ವ್ಯಾಪಾರದ ಸಾರ ವಕ್ಕಚ್ಚನ ಒಕ್ಕಲಾಗಿದ್ದರೂ ಅವನ ಕೃಪೆಗೆ ಪಾತ್ರಳಾಗಿರಲಿಲ್ಲ. ಆದ್ದರಿಂದ ಕೊಚ್ಚಯ್ಯಪ್ಪನ ಮನೆಗೆ ಬಂದು ಕುಳಿತು, ಅವಳು ಮತ್ತು ಕೊಚ್ಚಯ್ಯಪ್ಪನ ಹೆಂಡತಿ ಪಾರು, ಇಬ್ಬರೂ ಸೇರಿ ಅಳಗಿಯ ಬಗ್ಗೆ ಕಿಡಿಕಾರುವುದು ಅವರ ಪದ್ಧತಿ. ಸಾರಳಿಗೆ ತೌಡು ವ್ಯಾಪಾರಕ್ಕೆ ಬೇಕಾದ ಹಣ ಬಿಲ್ಲವರ ಹೆಣ್ಣು ಪಾರು ಸಾಲ ಕೊಡುತ್ತಿದ್ದುದರಿಂದ ಇಬ್ಬರೂ ತುಂಬಾ ಗೆಳೆತನದಿಂದ ಇದ್ದರು. ಪಾರು ಹೇಳುತ್ತಿದ್ದಳು:

"ಎಲ್ಲರೂ ಹೇಳುತ್ತಿರೋದು ವಕ್ಕಚ್ಚನ್ ಬಡವರಲ್ಲಿ ಕರುಣೆಯುಳ್ಳವ ಅಂತ."

"ಅವನಿಗೆ ಬಡವರಲ್ಲಿ ಕರುಣೆ ಇಲ್ಲ ಎಂತಲೋ ನೀನು ಹೇಳೋದು?"

"ಕರುಣೆ ಇದ್ದದ್ದಾದರೆ ನಮ್ಮಲ್ಲೇಕೆ ಮತ್ತೆ ತೋರಿಸೋದಿಲ್ಲ?"

"ಅದಕ್ಕೊಂದು ಕಾರಣವಿದೆ, ಪಾರು."

"ಅದೇನು?"

"ಸುಮ್ಮನೆ ಬರಿ ಸಾಧುವಾಗಿದ್ದರೆ ಸಾಲದು."

"ಮತ್ತೇನಾಗಿರಬೇಕು?"

"ನೋಡೋದಕ್ಕೆ ಸೌಂದರ್ಯವೂ ಬೇಕು, ಧೈರ್ಯವೂ ಬೇಕು." ಇಬ್ಬರೂ ಗೊಳ್ಳೆಂದು ನಕ್ಕರು.

ಹೊಲೆಯರ ಅಳಗಿ ಹೆತ್ತಾಗ ನೆರೆಹೊರೆಯವರೆಲ್ಲಾ ಮಗುವನ್ನು ನೋಡಲು ಹೋಗಿದ್ದರು. ಅಲ್ಲಿ ಸೇರಿದ್ದವರು ತಮ್ಮೊಳಗೆ ಪಿಸುಮಾತನಾಡಿಕೊಂಡರು: "ಕರಿಯ ಕೋಳಿ ಬಿಳಿಯ ಮೊಟ್ಟೆ ಇಟ್ಟಿತು," ಎಂದು. ಸಾರ ಪಾರುವನ್ನು ಕೇಳಿದಳು:

"ಈ ಮಗು ದೊಡ್ಡದಾದಾಗ ಹೇಗೆ ಇರುತ್ತೆ ಗೊತ್ತೆ, ಪಾರು?"

"ಹೇಗಿರುತ್ತೆ?"

"ವಕ್ಕಚ್ಚನ ಕಿರಿಯ ಮಗಳನ್ನು ನೀನು ನೋಡಿದ್ದೀಯಾ?"

"ಹುಂ."

"ಹಾಗೇ ಇರುತ್ತೆ ನೋಡು."

ಇಬ್ಬರೂ ಮತ್ತೊಮ್ಮೆ ಗೊಳ್ಳನೆ ನಕ್ಕರು.

× × ×

ನೀಲಿ ಬೆಳೆದಳು. ಅವಳು ಯೌವನಕ್ಕೆ ಕಾಲಿಟ್ಟಳು. ಅವಳಿಗೆ ಹದಿನೇಳು ವರ್ಷ ಕಳೆಯಿತು. ತನ್ನ ತಾಯಿಯ ಆಕರ್ಷಕವಾದ ಮಂದಹಾಸವೂ ಮಾದಕವಾದ ಕಣ್ಣುಗಳೂ ಅವಳಿಗೆ ಬಂದಿವೆ. ಅಳಗಿಗೆ ಇಲ್ಲದ ಮತ್ತೂ ಕೆಲವಂಶಗಳು ನೀಲಿಗೆ ಮತ್ತೆಲ್ಲಿಂದಲೋ ದೊರೆತಿವೆ—ಮಾಗಿದ ನಿಂಬೆಯ ಹಣ್ಣಿನಂತಹ ಮೈಬಣ್ಣ, ಗುಂಗುರು ಕೂದಲು.

ಪಾರು ಮತ್ತು ಸಾರ, ಪಾರುವಿನ ಮನೆಯ ಅಂಗಳದ ತೆಂಕಣ ದಿಕ್ಕಿನಲ್ಲಿ ನಿಂತು ತೆಂಕಣ ದಿಕ್ಕಿನ ಕಡೆ ನೋಡಿ ಏನೆಲ್ಲಾ ಆಡಿಕೊಂಡು ನಗುವುದು ಪದ್ಧತಿಯಾಗಿತ್ತು. ಕೆಲವೊಮ್ಮೆ ಬೇರೆ ಹೆಂಗಸರೂ ಆ ಗುಂಪಿಗೆ ಸೇರುತ್ತಿದ್ದರು. ಅಳಗಿ ಇದನ್ನೆಲ್ಲಾ ನೋಡುತ್ತಲೂ ಇದ್ದಳು. ಅವಳಿಗೆ ಗೊತ್ತು ಅವರು ಯಾಕೆ ನಗುತ್ತಿದ್ದರೆಂದು, ಏನೇನು ಆಡಿಕೊಳ್ಳುತ್ತಿದ್ದರೆಂದು. ಆದರೆ ಅವಳು ಅದನ್ನು ಕಂಡೂ ಕಾಣದಂತೆ ನಟಿಸುತ್ತಿದ್ದಳು; ಮಾತ್ರವಲ್ಲ, ನೀಲಿಗೆ ಅದೆಲ್ಲವನ್ನು ನೋಡುವುದಕ್ಕೆ ಅವಕಾಶ ಕೊಡುತ್ತಿರಲಿಲ್ಲ.

ಕೊಚ್ಚೆಯ್ಯಪ್ಪನಿಗೂ ಕಂಡನಿಗೂ ತಮ್ಮೊಳಗೆ ಮಾತುಕತೆಯಿಲ್ಲ. ದಾರಿಯಲ್ಲೆಲ್ಲಾದರೂ ಪರಸ್ಪರ ಎದುರಾದರೆ ನೋಡಿಯೂ ನೋಡದಂತೆ ಇಬ್ಬರೂ ತಲೆತಗ್ಗಿಸಿಕೊಂಡು ಹೋಗುತ್ತಿದ್ದರು.

ಒಂದು ದಿನ ಬೆಳಗ್ಗೆ ಕೊಚ್ಚುರಾಮನ್, ಮನೆಯ ತೆಂಕಣ ಭಾಗದಲ್ಲಿ ನಿಂತಿರುವುದನ್ನು ಕಂಡು ಪಾರು ಕೇಳಿದಳು:

"ಮಗೂ, ನೀನ್ಯಾಕೋ ಇಲ್ಲಿ ಬಂದು ನಿಂತು, ಹೀಗೆ ತೆಂಕಣ ದಿಕ್ಕಿನತ್ತ ನೋಡುತ್ತಿರೋದು?"

ಕಂಡನ ಗುಡಿಸಲಿನ ಒಳಗಣ ಭಾಗದಲ್ಲಿ ತೆಂಗಿನ ಮರಕ್ಕೆ ಆತು ನಿಂತುಕೊಂಡು ಬಡಗಣ ದಿಕ್ಕಿಗೆ ನೋಡುತ್ತಿದ್ದ ನೀಲಿ, ಪಾರುವನ್ನು ಕಂಡು ಒಳಗೆ ಹೋದಳು. ಕೊಚ್ಚುರಾಮನ್ ತಾಯಿಯೊಡನೆ ಕೇಳಿದ:

"ತೆಂಕಣ ದಿಕ್ಕಿಗೆ ನೋಡುತ್ತಾ ನಿಂತರೇನಾಯ್ತು?"

"ಹಾಗಿದ್ದರೆ ನೀನೇಕೆ ಮೂಡಣ ದಿಕ್ಕಿಗೆ ಮುಖಮಾಡಿ ನಿಂತಿದ್ದು?"

"ಈ ತಾಯಿಗೇನು—ಹುಚ್ಚಾ?"

"ಹುಚ್ಚು ನಿನಗೆ."

ಆ ನಂತರ ಕೊಚ್ಚುರಾಮನ್ ಪ್ರತಿನಿತ್ಯ ಮನೆಯ ತೆಂಕಣ ಪಾರ್ಶ್ವಕ್ಕೆ ಹೋಗಿ ತೆಂಕಣ ದಿಕ್ಕಿಗೆ ನೋಡುತ್ತ ನಿಲ್ಲುತ್ತಿದ್ದ. ನೀಲಿ ತನ್ನ ಗುಡಿಸಲಿನ ಬಡಗಣ ಭಾಗಕ್ಕೆ ಬಂದು ಬಡಗಣ ದಿಕ್ಕಿನತ್ತ ನೋಡುತ್ತಾ ನಿಲ್ಲುತ್ತಿದ್ದಳು. ಅವರು ಒಬ್ಬರನ್ನೊಬ್ಬರು ನೋಡುತ್ತಿದ್ದರು, ನಗುತ್ತಿದ್ದರು. ಆ ನಿಲುವು ಆ ನೋಟ ಎಲ್ಲವನ್ನೂ ಪಾರು ಕೊಚ್ಚೆಯ್ಯಪ್ಪನಿಗೆ ತಿಳಿಸಿದಳು. ಅವನು ಹೇಳಿದ:

"ಮಕ್ಕಳು ಯಾರನ್ನೊ ನೋಡಿ ನಿಂತರೆ ನಿನಗದರಿಂದೇನು?"

"ಹೀಗೆ ನೋಡುತ್ತಾ ನಿಂತುಕೊಳ್ಳುವುದರಿಂದಲೆ ಕೊನೆಗೆ ತೊಂದರೆ ಬರುವುದು."

"ಅದಕ್ಕೀಗ ನಾನೇನು ಮಾಡಬೇಕು? ಹಾಗೆ ನೋಡಬೇಡವೆಂದು ಅವನಲ್ಲಿ ಹೇಳಬೇಕೋ?"

"ಅವನಿಗೆಲ್ಲಿಂದಲಾದರೂ ಒಂದು ಹುಡುಗಿಯನ್ನು ತರಬೇಕು ಅಂತ ನಾನು ಹೇಳೋದು."

"ಅದು ಬೇಕೆಂದು ಅವನಿಗೂ ತೋರಬೇಕೂ ಅಂತ ನಾನು ಕೇಳೋದು."

ಆ ನಿಲ್ಲುವಿಕೆ, ಆ ನೋಟ, ಆ ನಗುಗಳನ್ನು ಪ್ರೋತ್ಸಾಹಿಸಬಾರದೆಂದು, ಕೊಚ್ಚೆಯ್ಯಪ್ಪನಿಗೆ ಗೊತ್ತು. ಆದರೆ ಅವನೇನು ಮಾಡಬಲ್ಲ?

ಪಾರು ಕೆಲವೊಮ್ಮೆ ಮನೆಯ ತೆಂಕಣ ಪಾರ್ಶ್ವಕ್ಕೆ ಬಂದು ನಿಂತು ತೆಂಕಣ ದಿಕ್ಕಿನತ್ತ ನೋಡುತ್ತಾ ಆಕಾಶಕ್ಕೋ ಎಂಬಂತೆ ಕೆಟ್ಟ ಮಾತುಗಳನ್ನು ಏರುಧ್ವನಿಯಲ್ಲಿ ಹೇಳುತ್ತಿದ್ದಳು. "ತಾಯಿಯಂತೆ ಮಗಳು" ಎಂದು ಪಲ್ಲವಿ ಸೇರಿಸಿ ತುಂಬಾ ಹೊತ್ತಿನವರೆಗೆ ಬೈಯುತ್ತಿದ್ದಳು.

ಮೊದಮೊದಲು ಅಳಗಿ ಅದನ್ನು ಕೇಳಿಯೂ ಕೇಳದಂತಿದ್ದರೂ ಕೊನೆಗೆ ಸಹನೆ ಕೆಟ್ಟು ಅವಳೂ ಬೈಯುತ್ತಿದ್ದಳು:

"ನನ್ನ ಮಗಳು ನನ್ನ ಅಂಗಳದಲ್ಲಿ ನಿಂತಿರೋದು. ನಿಮ್ಮ ಮಗನನ್ನು ನೀವು ಮರ್ಯಾದೆಯಿಂದಿರುವಂತೆ ನೋಡಿಕೊಳ್ಳದಿದ್ದರೆ...... ಹೂಂ...... ಇಲ್ಲಿ ಕುಡು ಗೋಲಿದೆ ಗೊತ್ತೇ?"

ಕೊಚ್ಚುರಾಮನ್ ಮತ್ತು ನೀಲಿಯರ ನೋಟ ನಗೆಗಳು ದಿನೇದಿನೇ ಹೆಚ್ಚು ತ್ತಲೇ ಇದ್ದುವು. ಪಾರು ಮತ್ತು ಅಳಗಿಯರ ಬೈದಾಟಗಳೂ ಹೆಚ್ಚುತ್ತಲೇ ಇದ್ದುವು.

ಕೊಚ್ಚಯ್ಯಪ್ಪನಿಗೂ ಕಂಡನಿಗೂ ಇದೆಲ್ಲಾ ತಿಳಿದಿದ್ದರೂ ಅವರು ಮುಖಾಮುಖಿ ಯಾಗಿ ಏನೂ ಮಾತಾಡಿರಲಿಲ್ಲ. ಆದರೆ ಕಂಡನಿಗೆ ಒಂದು ಪಾಠ ಕಲಿಸಬೇಕೆಂದು ಕೊಚ್ಚಯ್ಯಪ್ಪನ್ ನಿಶ್ಚಯಿಸಿದ.

ರಾತ್ರಿಯಲ್ಲಿ ತೆಂಗಿನ ಮರವನ್ನೇರಿ ಕದ್ದು ಕಳ್ಳು ಕುಡಿಯುವ ಅಭ್ಯಾಸವಿದೆಯಲ್ಲ ಕಂಡನಿಗೆ. ಕೆಲವೊಮ್ಮೆ ಕೊಚ್ಚುಯ್ಯಪ್ಪನ್ ಕಟ್ಟಿದ ತೆಂಗಿನ ಮರವನ್ನೇರಿಯೂ ಅವನು ಕಳ್ಳು ಕುಡಿಯುವುದುಂಟು. ಒಂದು ದಿನ ಕೊಚ್ಚಯ್ಯಪ್ಪನ್ ತೆಂಗಿನ ಮರಕ್ಕೆ ಹರಿತ ವಾದ ಮೊಳೆಗಳನ್ನು ನಟ್ಟು ಇಳಿದುಹೋದ. ಇದನ್ನರಿಯದೆ ಕಂಡನ್ ತೆಂಗಿನ ಮರ ವನ್ನೇರಿದ. ಆ ಹರಿತವಾದ ಮೊಳೆಗಳು ಅವನ ಕಾಲನ್ನು ಗೀರಿ ಗಾಯವುಂಟಾಯಿತು. ಕೆಳಗೆ ಬೀಳದಂತೆ ಬಹಳ ಪ್ರಯತ್ನಪಟ್ಟು, ರಕ್ತ ಸುರಿಸಿಕೊಂಡೇ ಕೆಳಗೆ ಇಳಿದ. ಅವಿತು ಕುಳಿತಿದ್ದ ಕೊಚ್ಚಯ್ಯಪ್ಪನ್ ಎದ್ದು ಹತ್ತಿರ ಬಂದು ಕೇಳಿದ:

"ಏನೋ ಕಂಡನ್, ಸೇಂದಿ ರುಚಿಯಾಗಿತ್ತೊ?"

"ನನಗೆ ಈ ರೀತಿ ಮೋಸ ಮಾಡಬಾರದಿತ್ತು."

ಕಂಡನ್ ಒಂದು ತಿಂಗಳ ವರೆಗೆ ಹಾಸಿಗೆ ಹಿಡಿದಿದ್ದ. ಔಷಧಿಗೂ ಮನೆ ಖರ್ಚಿಗೂ ವಕ್ಕಚ್ಚನ್ ಹಣ ಕೊಡುತ್ತಿದ್ದನೆಂದು ಪಾರು ಮತ್ತು ಸಾರ ಪಕ್ಕದ ಮನೆಯವರೊಡನೆ ಹೇಳಿಕೊಂಡು ನಡೆದರು.

ಆ ನಂತರವೂ ಕೊಚ್ಚುರಾಮನ್ ತೆಂಕಣ ಪಾರ್ಶ್ವಕ್ಕೆ ಹೋಗಿ ತೆಂಕಣ ದಿಕ್ಕಿನತ್ತ ನೋಡಿ ನಗುವುದು ಮುಂದುವರಿದಿತ್ತು.

ನೀಲಿಯ ಗುಡಿಸಿಲಿನಿಂದ ಯಾವಾಗಲೂ ಗಲಾಟೆ ಕೇಳುತ್ತಿತ್ತು. ಕೆಲವೊಮ್ಮೆ ಕಂಡನ ಉಗ್ರ ಗರ್ಜನೆಯೂ ಕೇಳುತ್ತಿತ್ತು.:

"ನಾನಿವಳನ್ನು ಕಡಿದುಹಾಕುತ್ತೇನೆ! ಕತ್ತು ಹಿಚುಕುತ್ತೇನೆ!"

ಕಂಡನ ಗುಡಿಸಿಲಿನತ್ತ ಚಾತನ್ ಆಗಾಗ ಬರುತ್ತಿದ್ದ. ತರುಣನಾದ ಅವನು ನೀಲಿಯನ್ನು ಮದುವೆಯಾಗಲು ನಿಶ್ಚಯಿಸಿದ್ದ. ಅವನ ಮತ್ತು ನೀಲಿಯ ಮನೆ ಯವರಿಗೆ ಅದು ಸಮ್ಮತಿಯೂ ಆಗಿತ್ತು. ಅವನು ನೀಲಿಯ ಮನೆಗೆ ಬರುವಾಗಲೆಲ್ಲ ಏನಾದರೂ ತಿಂಡಿ ತರುತ್ತಿದ್ದ. ನೀಲಿ ಆ ತಿಂಡಿಯನ್ನು ತಿನ್ನುತ್ತಿರಲಿಲ್ಲ. ಆದರೂ

ನೇರವಾಗಿ ಅವಳಿಗೆ ಕೊಟ್ಟರೆ ಅವಳು ಬೇಡವೆನ್ನುತ್ತಿರಲಿಲ್ಲ. ಅವಳು ಕೊಟ್ಟದ್ದನ್ನು ತೆಗೆದುಕೊಂಡು ಯಾರಿಗೂ ಕಾಣದಂತೆ ಕಾಲುವೆಯಲ್ಲಿ ಬೀಸಾಕುತ್ತಿದ್ದಳು.

ಒಂದು ದಿನ ನೀಲಿ ತಿಂಡಿಯನ್ನು ಕಾಲುವೆಗೆ ಎಸೆಯುತ್ತಿದ್ದುದನ್ನು ಕಂಡು ಅಳಗಿ ಕೇಳಿದಳು:

"ಏಕೆ ಅದನ್ನು ಬೀಸಾಕಿದ್ದು?"

"ನನಗೆ ಅದು ಬೇಡ."

"ಏಕೆ ಬೇಡ?"

"ಅವನು ತಂದುಕೊಡುವ ಯಾವ ಪದಾರ್ಥವೂ ನನಗೆ ಬೇಡ."

"ಹಾಗಾದರೆ ನಿನಗೆ ಮತ್ತಾರು ತಂದುಕೊಡುತ್ತಾರೆ?"

"ನನಗೆ ಯಾರೂ ತಂದುಕೊಡಬೇಕಾಗಿಲ್ಲ !"

ಒಂದುದಿನ ಕಂಡನ ಗುಡಿಸಲಿನಿಂದ ದೊಡ್ಡ ಗಲಾಟೆ ಕೇಳಿಬಂತು. ಜೊತೆಗೆ ನೀಲಿಯ ಗೋಳೂ ಕೇಳಿಸಿತು.

ಮರುದಿನ ಹಿತ್ತಿಲಿನ ಬಡಗಣ ದಿಕ್ಕಿನಲ್ಲಿ ನಿಂತು ಚಾತನ್ ಗರ್ಜಿಸಿದ:

"ನಾನು ಆ ಪೋಕರಿಯ ತಲೆ ಕಡಿಯುವೆ."

ಅಂದು ರಾತ್ರಿ ಬಹಳ ಹೊತ್ತಿನ ವರೆಗೆ ಕೊಚ್ಚೆಯ್ಯಪ್ಪನ್ ಏರುಧ್ವನಿಯಲ್ಲಿ ಬೈಯುತ್ತಿದ್ದುದು, ಹೆದರಿಸುತ್ತಿದ್ದುದು ಕೇಳುತ್ತಿತ್ತು.

ಆಮೇಲೆ ಕೊಚ್ಚುರಾಮನ್ ತೆಂಕಣ ಪಾರ್ಶ್ವದಲ್ಲಿ ಬಂದು ನಿಲ್ಲುವುದೂ ನೀಲಿ ಬಡಗಣ ದಿಕ್ಕಿನಲ್ಲಿ ಬಂದು ನಿಲ್ಲುವುದೂ ನಿಂತುಹೋಯಿತು.

## ( ೨ )

ಬಡಗು ದಿಕ್ಕಿನ ಬತ್ತದ ಬಯಲಿನ ಬದುವಿನಲ್ಲಿರುವ ಸಣ್ಣ ತೆಂಗಿನ ಮರದ ಕೆಳಗೆ ಕೊಚ್ಚುರಾಮನ್ ಮತ್ತು ನೀಲಿಯರು ಒಂದು ಸಂಜೆ ನಿಂತು ಮಾತನಾಡುವು ದನ್ನು ನೋಡಿದೆನೆಂದು ಒಂದು ದಿನ ತೌಡು ವ್ಯಾಪಾರದ ಸಾರ ಪಾರುವಿನೊಡನೆ ಹೇಳಿದಳು. ಸಾರ ಕೆಲವೊಮ್ಮೆ ಈ ಬಗೆಯ ಸುಳ್ಳು ಹೇಳುತ್ತಿದ್ದುದರಿಂದ ಮೊದಲು ಪಾರು ಅದನ್ನು ನಂಬಲಿಲ್ಲ. ಆದರೂ ಕೊಚ್ಚುರಾಮನಲ್ಲಿ ಒಮ್ಮೆ ಕೇಳಿದಳು. ಅವನು ಇದು ಶುದ್ಧ ಸುಳ್ಳು ಎಂದು ಹೇಳಿದ.

ಇದಾದ ಕೆಲವು ದಿನಗಳ ನಂತರ ಸಾರ ಮತ್ತೊಂದು ಸುದ್ದಿ ತಂದಳು. ಕೊಚ್ಚುರಾಮನ್ ನೀಲಿಗೆ ಒಂದು ಹೊಸ ಜಂಪರ್ ಹೊಲಿಸಿ ಕೊಟ್ಟಿರುವುದಾಗಿ ಅವಳು ಪಾರುವಿಗೆ ಹೇಳಿದಳು. ಇದನ್ನು ಕೇಳಿ ಸಿಟ್ಟಿಗೇರಿದ ಪಾರು ಹೇಳಿದಳು:

"ನೀನು ಈ ರೀತಿ ಸುಳ್ಳು ಮಾತಾಡಬಾರದು."

ಇದರಿಂದ ಅವಳಿಗೂ ಕೋಪ ಬಂತು.

"ನಾನು ಹೇಳಿದ್ದು ಸುಳ್ಳಾದರೆ ನೀನು ಒಂದು ಕೆಲಸ ಮಾಡು. ಮೂಡಣ ದಿಕ್ಕಿನ ಕಿರುದಾರಿಯಲ್ಲೆ ಅವಳೀಗ ಮೀನು ತರಲು ಹೋಗುವಳು—ಅಲ್ಲಿ ಹೋಗಿ ನಿಂತರೆ ಅವಳು ಆ ಜಂಪರ್ ಹಾಕಿಕೊಂಡಿರುವುದನ್ನು ನೀನು ನೋಡಬಹುದು."

ಪಾರು ಮತ್ತು ಸಾರ ಕಿರುದಾರಿಗೆ ಹೋಗಿ ನಿಂತರು. ನೀಲಿ ಹೊಸ ಜಂಪರ್ ಧರಿಸಿಕೊಂಡು ಕೈಯಲ್ಲಿ ಒಂದು ಚಿಕ್ಕ ಕುಕ್ಕೆಯನ್ನು ಹಿಡಿದುಕೊಂಡು ಬಂದಳು. ಪಾರುವಿಗೆ ಸಿಟ್ಟು ನೆತ್ತಿಗೇರಿತ . ಅವಳು ನೀಲಿಯನ್ನು ಹಳಿಯುವುದಕ್ಕೆ ಪ್ರಾರಂಭಿಸಿದಳು.

"ಪ್ರಾಯಕ್ಕೆ ಬಂದ ಹುಡುಗರಿಗೆ ಕಣ್ಣು, ಗಲ್ಲಗಳನ್ನು ತೋರಿಸಿ ಅವರಿಂದ ಬಟ್ಟೆ ಬರೆಗಳನ್ನು ಸುಲಿಗೆ ಮಾಡುವ ಸೂಳೆ......!" ಅವಳ ಬೈಗಳು ಮುಂದುವರಿಯಿತು! ಅದು ಜನ ಓಡಾಡುವ ದಾರಿಯಾದುದರಿಂದ ಅನೇಕರು ಬಂದು ಸೇರಿದರು. ನೀಲಿ ಅಳುತ್ತಾ ತನ್ನ ಮನೆಗೆ ಹೋದಳು.

ಸ್ವಲ್ಪ ಹೊತ್ತಿನಲ್ಲೇ ಕುಡುಗೋಲು ಹಿಡಿದುಕೊಂಡು ಅಳಗಿ ಬಿರುಗಾಳಿಯಂತೆ ಅಲ್ಲಿಗೆ ಬಂದಳು. ಪಾರು ಓಡಿಹೋಗಿ ಒಂದು ಮಸೆಗತ್ತಿ ಹಿಡಿದುಕೊಂಡು ಬಂದಳು. ಎರಡೂ ಕಡೆಗಳಿಂದ ಬೈಗಳದ ಮಳೆಯೇ ಶುರುವಾಯಿತು. ತೀರ ಹೊಲಸು ಬೈಗಳು. ಈ ಜಗಳದಿಂದ ಕೆಲವು ಸಂಗತಿಗಳು ಅಲ್ಲಿ ಸೇರಿದವರಿಗೂ ಗೊತ್ತಾಯಿತು. ಕೊಚ್ಚುರಾಮನ್ ಹೊಲಿಸಿಕೊಟ್ಟ ಜಂಪರ್ ನೀಲಿ ಹಾಕಿಕೊಂಡದ್ದನ್ನು ನೋಡಿದೆ ನೆಂದು, ಪಾರು ಮೊದಲು ಹೇಳಿದಳು. ನೀಲಿ ಒಂದು ಡಬ್ಬಿಯಲ್ಲಿ ಯಾವಾಗಲೂ ಚಿಲ್ಲರೆ ದುಡ್ಡು ಹಾಕಿಡುತ್ತಿದ್ದಳು. ಆ ಹಣದಿಂದ ಅವಳೇ ಹೊಲಿಸಿಕೊಂಡದ್ದು ಎಂದು ಅಳಗಿ ಹೇಳಿದಳು. ಕೊಚ್ಚುರಾಮನ್ ಜಂಪರ್ ಹೊಲಿಸಿಕೊಟ್ಟನೆಂದು ಸಾರ ನನ್ನೊಡನೆ ಹೇಳಿದಳು ಎಂದು ಪಾರು ಕೊನೆಗೆ ಹೇಳಿದಳು.

ಅಳಗಿ ನೇರವಾಗಿ ಸಾರಳ ಹತ್ತಿರ ಕುಡುಗೋಲು ಬೀಸಿಕೊಂಡು ಹೋಗಿ ಅಟ್ಟಹಾಸದಿಂದ ಹೇಳಿದಳು:

"ನಿನ್ನ ಕಡಿದು ಹಾಕ್ತೀನಿ, ಕಡಿದು ಹಾಕ್ತೀನಿ."

ಸಾರ ಅಲ್ಲಿಂದ ಓಡಿದಳು. ಅವಳು ಹೆದರಿ ಓಡಿದಳೆಂದು ಅಲ್ಲಿದ್ದವರೆಲ್ಲಾ ಭಾವಿಸಿದರು. ಆದರೆ ಸ್ವಲ್ಪ ಹೊತ್ತಿನಲ್ಲೇ ದರ್ಜಿ ಶಂಕರನೊಡನೆ ಅವಳು ಅಲ್ಲಿಗೆ ಬಂದಳು. ಅವಳು ಅಲ್ಲಿದ್ದವರೊಡನೆ ಹೇಳಿದಳು:

"ಎಲ್ಲರೂ ಸ್ವಲ್ಪ ಇಲ್ಲಿ ಕೇಳಿ! ಈ ಶಂಕರ ನನ್ನೊಡನೆ ಹೇಳಿದ್ದು. ನೀವೇ ಕೇಳಿರಿ, ಹೌದೋ ಅಲ್ಲವೊ ಎಂದು."

ಶಂಕರನು ಎಲ್ಲವನ್ನೂ ವಿವರವಾಗಿ ಹೇಳಿದ:

"ಕೊಚ್ಚುರಾಮನ್ ಬಟ್ಟೆ ತೆಗೆದು ಕೊಟ್ಟದ್ದೂ ಸತ್ಯ. ನಾನು ಹೊಲಿದು ಕೊಟ್ಟದ್ದೂ ಸತ್ಯ. ಅರಸಿನ ಬಣ್ಣದ ಮೈಗೆ ಕಪ್ಪಿನ ಬೊಟ್ಟು ಇರುವ ಬಟ್ಟೆ ಅದು."

ಅದನ್ನೇ ನೀಲಿ ತೊಟ್ಟಿದ್ದಳು ಎಂಬುದನ್ನು ಎಲ್ಲರೂ ಗಮನಿಸಿದ್ದರು. ಸಾರ ವಿಜಯ ಕಪಳಿ ಮೊಳಗಿದ್ದಳು. ಅವಳು ಅಳಗಿಯನ್ನು ಗೇಲಿ ಮಾಡುತ್ತ ಕೇಳಿದಳು:

"ಏನಾಯಿತು ನಿನ್ನ ಆ ಕುಡುಗೋಲು?"

"ತಾಯಿಯಂತೆ ಮಗಳೂ ಬೆಳೆಯುತ್ತಿದ್ದಾಳೆ" ಎಂದು ಅಲ್ಲಿದ್ದವರಲ್ಲಿ ಅನೇಕರು ಪಿಸುಗುಟ್ಟಿದರು.

ಅಳಗಿ ತಲೆತಗ್ಗಿಸಿಕೊಂಡು ಗುಡಿಸಿಲಿನತ್ತ ಹೋದಳು. ಅಂದು ರಾತ್ರಿ ಕಂಡನ ಗುಡಿಸಿಲಿನಲ್ಲಿ ಕೂಗಾಟ, ರೋದನಗಳು ಕೇಳಿದುವು.

ಮಾರನೆಯ ದಿನ ಬೆಳಿಗ್ಗೆ ಅವನು ಅಂಗಳಕ್ಕಿಳಿದು ಹಾರೆಯನ್ನು ಎತ್ತಿಹಿಡಿದು ಹೇಳಿದ:

"ಇನ್ನು ಇವಳು ಅವನಲ್ಲಿ ಮಾತನಾಡಿದರೂ ಅವನನ್ನು ನೋಡಿದರೂ ನಾನು ಇವಳ ತಲೆಯನ್ನು ಹೀಗೆ ಕಡಿದುಹಾಕುವೆ." ಎಂದು ಅವನು ಅಂಗಳವನ್ನು ಅಗೆದ.

ಅಂದು ಸಂಜೆ ಚಾತನ್ ಬಂದ. ಅವನು ಖಡ್ಗದಂತಹ ಕತ್ತಿಯೊಂದನ್ನು ಬೇಲಿಯ ಗೂಟಕ್ಕೆ ನೇರವಾಗಿ ಎತ್ತಿ ಹಿಡಿದು ಪ್ರತಿಜ್ಞೆ ಮಾಡಿದ:

"ಅವನನ್ನು ಅವಳನ್ನು ನೋಡಿ ನಕ್ಕರೆ, ಅವಳೊಡನೆ ಮಾತನಾಡಿದರೆ ಇದೋ ಹೀಗೆ ಬಿದ್ದೀತು ಅವನ ತಲೆ"—ಎಂದು ಬೇಲಿಯ ಗೂಟಕ್ಕೆ ಹೊಡೆದ. ಗೂಟ ತುಂಡಾಗಿ ಕೆಳಗೆ ಬಿತ್ತು.

ಕೊಚ್ಚೆಯ್ಯಪ್ಪನ್ ತೆಂಕಣ ದಿಕ್ಕಿನಲ್ಲಿ ನಿಂತು ಅವನ ಕೈಯಲ್ಲಿದ್ದ ತನ್ನ ಕೆಲಸದ ಕತ್ತಿಯನ್ನು ಅಂಗೈಗೆ ಮಸೆದುಕೊಂಡು ಘರ್ಜಿಸಿದ:

"ಇನ್ನು ಮೇಲೆ ಹೀಗೇನಾದರೂ ಕೇಳಿಬಂದರೆ ಅವರಿಬ್ಬರ ತಲೆಗಳನ್ನು ನಾನೀ ರೀತಿಯಲ್ಲಿ ತುಂಡರಿಸಿ ಹಾಕುವೆನು" ಎಂದು ತೆಂಗಿನ ಎಳೆಯ ಹೂಗೊನೆಯನ್ನು ಕೊಯ್ಯುವಂತೆ ಕೊಯ್ದು ತೋರಿಸಿದ.

ಆ ಮೇಲೆ ಕೊಚ್ಚುರಾಮನ್ ಮತ್ತು ನೀಲಿಯರು ತಮ್ಮೊಳಗೆ ಮಾತನಾಡು ವುದು, ನೋಡುವುದು, ನಗುವುದು ಮುಂತಾದುವನ್ನು ನಡೆಸಿದರೆಂದು ಯಾರೂ ಹೇಳಲಿಲ್ಲ.

ನೀಲಿ ಮತ್ತು ಚಾತನ್‌ರವರ ಮದುವೆಗೆ ದಿನ ನಿಶ್ಚಯವಾಯಿತು. ಗುಡಿಸಿಲಿನ ಎದುರು ಅಂಗಳದಲ್ಲಿ ಒಂದು ಚಪ್ಪರವೂ ತಯಾರಾಯ್ತು. ಕೊಚ್ಚೆಯ್ಯಪ್ಪನ್ ಕೊಚ್ಚು ರಾಮನಿಗೆ ಮದುವೆ ಮಾಡಿಸಲು ಮೂರು ನಾಲ್ಕು ಕಡೆ ವಿಚಾರಿಸಿದ್ದ. ಒಂದು ಕಡೆ ಹೆಣ್ಣು ನೋಡಿಯೂ ಆಗಿತ್ತು.

ಹೀಗಿರಲು ಒಂದು ದಿನ ಮುಂಜಾನೆ ಕೊಚ್ಚೆಯ್ಯಪ್ಪನ ಮನೆಯ ತೆಂಕಣ ಅಂಗಳದಲ್ಲಿ ಒಂದು ಕೂಗು ಹಾಗೂ ಒಂದು ಅಟ್ಟಹಾಸ ಕೇಳಿಬಂತು. ಪಕ್ಕದ ಮನೆ ಯವರು ಎದ್ದು ಹೊರಗೆ ಬಂದು ನೋಡಿದಾಗ, ಕಂಡನ್ ಒಂದು ದೊಡ್ಡ ಕತ್ತಿಯನ್ನೂ ಅಳಗಿ ಒಂದು ಕುಡುಗೋಲನ್ನೂ ಹಿಡಿದು ಗರ್ಜಿಸುತ್ತಿದ್ದರು.

"ನನ್ನ ಮಗಳನ್ನು ಹೊರಗೆ ಬಿಡುತ್ತೀರೋ, ಇಲ್ಲ ನಾನೇ ಒಳಗೆ ಬರಲೋ?" ಕಂಡನ್ ಕೇಳಿದ.

ಪಾರು ಒಳಗೆ ಓಡಿಹೋಗಿ ನೋಡಿದಾಗ ಕೊಚ್ಚುರಾಮನ್ ಮಲಗಿವಲ್ಲಿ ಅವನನ್ನು ಕಾಣಲಿಲ್ಲ. ಅವಳು ಬೊಬ್ಬೆ ಇಟ್ಟಳು.

"ನಿನ್ನ ಮಗಳು ನನ್ನ ಮಗನನ್ನು ಅಪಹರಿಸಿಕೊಂಡು ಹೋಗಿದ್ದಾಳೆ. ನಿನ್ನನ್ನೂ ಅವಳನ್ನೂ ನಾನು ಕಡಿದುಹಾಕುತ್ತೇನೆ," ಎಂದು ಪಾರು ಒಂದು ಕುಡುಗೋಲು ಹಿಡಿದುಕೊಂಡು ಬಂದಳು.

ಕೊಚ್ಚೆಯ್ಯಪ್ಪನ್ ಒಂದು ಒನಕೆ ಹಿಡಿದುಕೊಂಡು ಬಂದು ಘರ್ಜಿಸಿದ:

"ಎಲಾ! ನನ್ನ ಮಗನನ್ನು ಕೊಡದಿದ್ದರೆ ನಿನ್ನ ತಲೆಯನ್ನು ಒಡೆದುಹಾಕುವೆನು!"

ಕಂಡನ್ ಕಡಿಯಲು ಕತ್ತಿ ಎತ್ತಿದ. ಕೊಚ್ಚೆಯ್ಯಪ್ಪನ್ ಒನಕೆಯಿಂದ ಕಂಡನ ನಡುನೆತ್ತಿಗೆ ಒಂದೇಟು ಬಿಗಿದ. ತಲೆಯೊಡೆದು ಅವನು ನೆಲಕ್ಕುರುಳಿದ. ಅಳಗಿ ಕುಡುಗೋಲಿನಿಂದ ಪಾರುವಿಗೆ ಹೊಡೆದಳು. ಪಾರು ಅಳಗಿಗೆ ಹೊಡೆದಳು. ಅಳಗಿಯ ಕತ್ತಿಯ ಮೊನೆ ಪಾರುವಿನ ಹೊಟ್ಟೆಗೂ ಪಾರುವಿನ ಕತ್ತಿಯ ಮೊನೆ ಅಳಗಿಯ ಎದೆಗೂ ತಾಗಿತ್ತು. ಇಬ್ಬರೂ ನೆಲಕ್ಕುರುಳಿದರು. ನೆರೆಹೊರೆಯವರೆಲ್ಲಾ ಓಡಿಬಂದು ಸೇರಿದರು. ಅಷ್ಟರಲ್ಲಿ ಚೆನ್ನಾಗಿ ಬೆಳಗಾಗಿತ್ತು.

"ಕೊಲ್ಲುವೆನು—ಎಲ್ಲರನ್ನೂ ಕೊಂದಿಕ್ಕುವೆನು," ಎಂದು ಬೊಬ್ಬಿರಿಯುತ್ತ, ಚಾತನ್ ಒಂದು ದೊಡ್ಡ ಕತ್ತಿಯನ್ನು ಹಿಡಿದುಕೊಂಡು ಅಲ್ಲಿಗೆ ಓಡಿ ಬಂದ. ಅವನು ಕೊಚ್ಚೆಯ್ಯಪ್ಪನ ಮನೆಯ ಮಗ್ಗುಲ ಬೇಲಿಯನ್ನು ಒದ್ದು ಮುರಿದ. ಮನೆಗೆ ಬೆಂಕಿ ಹಾಕಲು ಪ್ರಯತ್ನಿಸಿದ. ಆಗ ಅಲ್ಲಿದ್ದವರು ಅವನನ್ನು ಹಿಡಿದು ತೆಂಗಿನ ಮರಕ್ಕೆ ಕಟ್ಟಿಹಾಕಿದರು.

ಪೋಲೀಸರು ಬಂದರು. ಕಂಡನ್, ಅಳಗಿ, ಮತ್ತು ಪಾರು ಈ ಮೂವರನ್ನೂ ಆಸ್ಪತ್ರೆಗೆ ಸೇರಿಸಿದರು. ಕೊಚ್ಚೆಯ್ಯಪ್ಪನ್ ಮತ್ತು ಚಾತನ್ ಬಂಧಿತರಾದರು.

× × ×

ಯಾರಿಗೂ ಯಾವ ರೀತಿಯ ಅನುಮಾನವಿರಲಿಲ್ಲ. ನೀಲಿ ಎಂದಿನಂತೆ ರಾತ್ರಿ ಊಟ ಮುಗಿಸಿ ಅಳಗಿಯ ಹತ್ತಿರ ಮಲಗಿದ್ದಳು. ಕೊಚ್ಚುರಾಮನ್ ರಾತ್ರಿ ಊಟ ಮುಗಿಸಿ, ಒಂದು ಬೀಡಿ ಸೇದಿ, ಯಾವಾಗಲೂ ಮಲಗುವ ಜಾಗದಲ್ಲಿ ಚಾಪೆ ಹಾಸಿ ಮಲಗಿದ್ದ.

ಬೆಳಗಿನ ಜಾವ ಅಳಗಿ ಎಚ್ಚತ್ತು ನೀಲಿಯನ್ನು ಕೂಗಿದಳು. ಉತ್ತರ ಬಾರದ್ದರಿಂದ ಚಾಪೆಯನ್ನು ಮುಟ್ಟಿ ನೋಡಿದಳು. ನೀಲಿ ಅಲ್ಲಿ ಕಾಣದ್ದರಿಂದ ಹೊರಗೆ

ಬಂದು ನೋಡಿದಳು. ಅಲ್ಲಿಯೂ ಕಾಣಲಿಲ್ಲ. ಆಗ ಗಂಡನನ್ನು ಕೂಗಿ ನೀಲಿ ಇಲ್ಲದಿರುವುದನ್ನು ತಿಳಿಸಿದಳು. ಇಬ್ಬರೂ ಸುತ್ತಮುತ್ತಲೆಲ್ಲಾ ಹುಡುಕಾಡಿದರು. ಇದ್ದಕ್ಕಿದ್ದಂತೆ ಒಂದು ಯೋಚನೆ ಅವರಿಗೆ ಹೊಳೆಯಿತು—ಕೊಚ್ಚುರಾಮನ್ ಕರೆದುಕೊಂಡು ಹೋಗಿರಬೇಕೆಂದು. ಇದೇ ಈ ಎಲ್ಲ ಘಟನೆಗೂ ಕಾರಣವಾಯಿತು.

ಕೊಚ್ಚುರಾಮನ್ ಮತ್ತು ನೀಲಿ ಎಲ್ಲಿಗೆ ಹೋದರೆಂಬುದು ಯಾರಿಗೂ ತಿಳಿಯದು. ಯಾರೂ ಅವರನ್ನು ಹುಡುಕಲಿಲ್ಲ. ಹುಡುಕಬೇಕಾದವರು ಆಸ್ಪತ್ರೆಯಲ್ಲೋ ಲಾಕಪ್ಪಿನಲ್ಲೋ ಇದ್ದರು.

ಅವರು ಇಬ್ಬರೂ ಊರು ಬಿಡಬೇಕೆಂದು ಮುಂಚೆಯೇ ತೀರ್ಮಾನಿಸಿದ್ದರು. ಇಬ್ಬರೂ ಅದಕ್ಕೆ ಬೇಕಾದ ಸಿದ್ಧತೆ ಮಾಡಿಕೊಂಡಿದ್ದರು. ಎಲ್ಲಿಗೆ ಹೋಗಬೇಕೆಂದೂ ಹೇಗೆ ಹೋಗಬೇಕೆಂದೂ ಕೊಚ್ಚುರಾಮನ್ ನಿರ್ಧರಿಸಿದ್ದ.

ಕೊಚ್ಚುರಾಮನ್ನಿನ ಹಳೆಯ ಸ್ನೇಹಿತನೊಬ್ಬ ಆಲೆಪ್ಪಿಯಲ್ಲಿದ್ದ. ಅವನ ಹೆಸರು ವಾಸು. ಆಟಪಾಠಗಳೊಂದಿಗೆ ಅವರು ಒಟ್ಟಿಗೆ ಬೆಳೆದವರಾಗಿದ್ದರು. ಆಲಪ್ಪಿಯಲ್ಲಿ ಹುರಿಹಗ್ಗ ತಯಾರಿಸುವ ಒಂದು ಕಾರ್ಖಾನೆಯಲ್ಲಿ ಅವನು ಕೂಲಿ ಕೆಲಸದವನಾಗಿದ್ದ. ಅವನು ಅಲ್ಲಿ ಮದುವೆಯಾಗಿ ಸಂಸಾರ ಸಮೇತ ವಾಸಿಸುತ್ತಿದ್ದ.

ವಾಸು ಕೆಲವೊಮ್ಮೆ ಕೊಚ್ಚಿಗೆ ಹೋಗುತ್ತಿದ್ದ. ಅಲ್ಲಿ ಹೋದಾಗಲೆಲ್ಲ ಕೊಚ್ಚುರಾಮನನ್ನು ಕಾಣುತ್ತಿದ್ದ. ದೋಣಿ ನಡೆಸುವ ಕೆಲಸವನ್ನು ಬಿಟ್ಟು ಆಲಪ್ಪಿಗೆ ಬರಬೇಕೆಂದೂ ಹುರಿಹಗ್ಗದ ಫ್ಯಾಕ್ಟರಿಯಲ್ಲಿ ಅವನಿಗೊಂದು ಕೆಲಸ ಕೊಡಿಸಬಹುದೆಂದೂ ಅವನು ಕೊಚ್ಚುರಾಮನೊಡನೆ ಹೇಳುತ್ತಿದ್ದ. ಆದ್ದರಿಂದ ಅಲ್ಲಿಗೆ ಹೋಗಿ ಅಲ್ಲೇ ವಾಸಿಸಬಹುದೆಂದು ಕೊಚ್ಚುರಾಮನ್ ನಿಶ್ಚಯಿಸಿದ್ದ.

ರಾತ್ರಿ ಸಮಯ. ಎಲ್ಲರೂ ನಿದ್ರಿಸಿದ್ದರು. ದಾರಿಯಲ್ಲಿ ಜನಸಂಚಾರ ನಿಂತಿತ್ತು. ಕೊಚ್ಚುರಾಮನ್ ಬಟ್ಟೆಯ ಒಂದು ಗಂಟನ್ನು ಹಿಡಿದುಕೊಂಡು ಬಂದು, ಕಿರುದಾರಿಯಲ್ಲಿ ನಿಂತ. ನಿಶ್ಚಯದಂತೆ ನೀಲಿಯೂ ಅಲ್ಲಿಗೆ ಬಂದಳು. ಅವರು ಅದೇ ದಾರಿಯಲ್ಲಿ ಮುಂದುವರಿದು, ಜನರು ಹೆಚ್ಚು ಸಂಖ್ಯೆಯಲ್ಲಿ ಹತ್ತುವ ಮತ್ತು ಇಳಿಯುವ ದೋಣಿ ತಂಗುವ ಒಂದು ಸಣ್ಣ ಜಾಗವನ್ನು ಸೇರಿದರು. ಆಲಪ್ಪಿಗೆ ಹೋಗುವ ದೋಣಿ ಬಂದಾಗ ಕೊಚ್ಚುರಾಮನ್ ಅದನ್ನು ಕೂಗಿದ ಮತ್ತು ಬೆಂಕಿಪೊಟ್ಟಣದ ಕಡ್ಡಿ ಹಚ್ಚಿ ಬೆಳಕು ತೋರಿಸಿ ಅದನ್ನು ದಡಕ್ಕೆ ಕರೆಸಿದ. ಇಬ್ಬರೂ ಅದರಲ್ಲಿ ಹತ್ತಿದರು.

ಅವರು ಆಲಪ್ಪಿಯನ್ನು ತಲುಪಿದಾಗ ಚೆನ್ನಾಗಿ ಬೆಳಗಾಗಿತ್ತು. ವಾಸು ತನ್ನ ಮನೆಗೆ ಹೋಗುವ ದಾರಿಯನ್ನು ಕೊಚ್ಚುರಾಮನಿಗೆ ಹೇಳಿದ್ದ. ಆ ನೆನಪಿನಿಂದ ಅವನು ನೀಲಿಯೊಡನೆ ನಡೆದ. ಯಾರೋ ಒಬ್ಬರಲ್ಲಿ ಕೇಳಿ ಸಂಶಯ ಪರಿಹರಿಸಿಕೊಂಡು ಅವರು ವಾಸುವಿನ ಮನೆಯನ್ನು ಸೇರಿದರು. ಮಡಲಿನ ತಟ್ಟಿಯಿಂದ ಕೂಡಿದ ಒಂದು ಸಣ್ಣ ಮನೆಯಲ್ಲಿ ವಾಸು ತನ್ನ ಕುಟುಂಬ ಸಮೇತ ವಾಸಿಸುತ್ತಿದ್ದ. ಅವನ ಕುಟುಂಬವೆಂದರೆ ಅವನ ಹೆಂಡತಿ ಮತ್ತು ಒಂದು ಮಗು ಮಾತ್ರ. ಹೆಂಡತಿಯ ಮನೆಯಲ್ಲಿ ತುಂಬ

ಜನರಿದ್ದುದರಿಂದ ಅವನು ಒಂದು ಸಣ್ಣ ಮನೆಮಾಡಿ ಹೆಂಡತಿಯನ್ನು ಕರೆತಂದು ಅಲ್ಲಿ ವಾಸಿಸುತ್ತಿದ್ದ.

ಒಂದು ಹೆಣ್ಣಿನೊಂದಿಗೆ ಕೊಚ್ಚುರಾಮನ್ ಮನೆಯ ಮೆಟ್ಟಲು ಏರಿದಾಗ ವಾಸು ಆಶ್ಚರ್ಯಗೊಂಡ. ವಾಸುವಿಗೆ ಆಶ್ಚರ್ಯವಾಗಬಹುದೆಂದು ಕೊಚ್ಚುರಾಮನ್ ಮೊದಲೇ ಊಹಿಸಿದ್ದುದರಿಂದ ಅವನಿಗೆ ಆ ದೃಶ್ಯ ವಿಶೇಷವಾಗಿ ಕಾಣಲಿಲ್ಲ. ಅವನು ವಿಷಯವನ್ನೆಲ್ಲ ವಾಸುವಿಗೆ ಚುಟುಕಾಗಿ ಹೇಳಿದ. ತಾತ್ಕಾಲಿಕವಾಗಿ ಅಲ್ಲಿದ್ದು ಒಂದು ಉದ್ಯೋಗ ಹುಡುಕಬೇಕೆಂದೂ ಕೆಲಸ ಸಿಕ್ಕಿದೊಡನೆ ಬೇರೆ ಮನೆಮಾಡಿ ವಾಸಿಸ ಬೇಕೆಂದೂ ಕೊಚ್ಚುರಾಮನ್ ಹೇಳಿದ.

ಅದೊಂದಕ್ಕೂ ವಾಸುವಿನ ಆಕ್ಷೇಪವಿರಲಿಲ್ಲ. ಕೊಚ್ಚುರಾಮನಿಗೆ ಇಷ್ಟವಾದ ಹೆಣ್ಣು ಯಾವ ಜಾತಿಗೆ ಸೇರಿದವಳಾದರೂ, ಅವನು ಅವಳನ್ನು ಮದುವೆಯಾಗುವುದು ವಾಸುವಿಗೆ ಸಂತೋಷವೇ ಆಗಿತ್ತು. ತನ್ನ ಬಾಲ್ಯಸ್ನೇಹಿತನಿಗೆ ಸಾಧ್ಯವಿರುವ ಎಲ್ಲಾ ಸಹಾಯ ಮಾಡಬೇಕೆಂದು ಅವನಿಗೆ ಮನಸ್ಸಾಯಿತು.

ಆದರೆ ಅವನ ಹೆಂಡತಿಯ ಮನೆಯವರು ಅತಿ ಪ್ರಾಮಾಣಿಕರು. ಒಬ್ಬ ಬಿಲ್ಲವರ ಯುವಕನು ಹೊಲೆಯರ ಹುಡುಗಿಯೊಂದನ್ನು ಮದುವೆಯಾಗಿದ್ದಾನೆ ಎಂಬುದೇ ಅವರಿಗೆ ಇಷ್ಟವಾಗದ ಸಂಗತಿ. ಅದೂ ವಾಸುವಿನ ಗೆಳೆಯನೆಂದು ತಿಳಿದರೆ ಅವರಿಗೆ ಸಿಟ್ಟೇ ಬಂದೀತು. ಅದರಲ್ಲಿಯೂ, ಅವರು ವಾಸುವಿನ ಮನೆಯಲ್ಲೇ ಉಳಕೊಂಡಿರು ವರೆಂದು ತಿಳಿದರೆ, ಮತ್ತೇನು ಹೇಳುವುದೇ ಬೇಡ, ಕತ್ತಿ ದೊಣ್ಣೆ ಹಿಡಿದುಕೊಂಡು ಬಂದಾರು, ಹೊಡೆದು ಮನೆಯಿಂದ ಹೊರಗೆ ಹಾಕುವುದಕ್ಕೆ ! ಸಾಲದ್ದಕ್ಕೆ ಅವನ ಒಬ್ಬ ಭಾವ ರೌಡಿಯೂ ಆಗಿದ್ದ.

ಇಂಥ ಗೊಂದಲಮಯ ಪರಿಸ್ಥಿತಿಯಲ್ಲಿ ಅವನು ಏನು ಮಾಡಿಯಾನು? ಕೊಚ್ಚುರಾಮನನ್ನು ಮನೆಯಿಂದ ಹೊರಟುಹೋಗಲು ಹೇಳುವುದೆ? ರೂಪವತಿ ಯಾದ ತನ್ನ ಹೆಣ್ಣನ್ನು ಕರೆದುಕೊಂಡು ಅವನು ಆಲಪ್ಪಿ ಪಟ್ಟಣದಲ್ಲಿ ಅಲೆಯುವುದಕ್ಕೆ ಸಮ್ಮತಿಸುವುದೆಂತು? ವಾಸುವಿನ ಸಹಾಯವನ್ನಷ್ಟೇ ಪಡೆಯುವ ನಿರೀಕ್ಷೆಯಿಂದಲ್ಲವೆ ಅವರು ಕೊಚ್ಚಿಯಿಂದ ಆಲಪ್ಪಿಗೆ ಬಂದುದು?

ಬರುವುದೆಲ್ಲಾ ಬರಲಿ ಎಂದು ನಿಶ್ಚಯಿಸಿ, ತಾತ್ಕಾಲಿಕವಾಗಿ ಅವರು ತನ್ನ ಮನೆ ಯಲ್ಲಿ ಇರುವುದಕ್ಕೆ ವಾಸು ಒಪ್ಪಿದ. ಆದರೆ ನೀಲಿ ಯಾವ ಜಾತಿಯವಳೆಂದು ಅವನು ತನ್ನ ಹೆಂಡತಿಗೆ ಹೇಳಲಿಲ್ಲ. ಕೊಚ್ಚುರಾಮನ್ ಜಾತ್ಯಾಚಾರಕ್ಕನುಸಾರವಾಗಿ ಮದುವೆ ಯಾದುದೆಂದೂ ಅವನ ಹೆಂಡತಿಯ ಹೆಸರು ಭಾರ್ಗವಿಯೆಂದೂ ಹೇಳಬೇಕೆಂದು ಅವರು ನಿಶ್ಚಯಿಸಿದರು. ಅದೇ ಪ್ರಕಾರ ಕೊಚ್ಚುರಾಮನ್ ನೀಲಿಗೆ ಅದನ್ನು ರಹಸ್ಯ ವಾಗಿ ಹೇಳಿದ. ಸ್ವಲ್ಪ ಹಣ ಅವನ ಕೈಯಲ್ಲಿ ಇದ್ದುದರಿಂದ ಆರ್ಥಿಕ ಅಡಚಣೆ ಅವರಿಗೆ ಬರಲಿಲ್ಲ.

ಅಂದೇ ವಾಸು ಕೆಲಸ ಮಾಡುತ್ತಿದ್ದ ಫ್ಯಾಕ್ಟರಿಯ ನಾಯಕನ ಮತ್ತು ಮ್ಯಾನೇಜ

ರನ ಅನುಮತಿಯಂತೆ ಕೊಚ್ಚುರಾಮನ್ ಕೆಲಸ ಅಭ್ಯಾಸ ಮಾಡಲು ತೊಡಗಿದ. ಹೀಗೆ ಮೂರು ನಾಲ್ಕು ದಿನಗಳು ಕಳೆದುವು.

ವಾಸುವಿನ ಗೆಳೆಯ ತನ್ನ ಹೆಂಡತಿಯೊಂದಿಗೆ ಅವನ ಮನೆಯಲ್ಲಿ ವಾಸಿಸುತ್ತಿದ್ದಾನೆಂದು. ಅವನ ಹೆಂಡತಿಯ ಮನೆಯವರಿಗೆ ಗೊತ್ತಾಯಿತು. ಅವರು ಅತಿಥಿಗಳನ್ನು ನೋಡಲು ಬಂದರು. ಅವರೆಲ್ಲರೂ ಹುಡುಗಿಯನ್ನು ಕಂಡು ಮೆಚ್ಚಿದರು. ಅವಳ ಸೌಂದರ್ಯ, ಮರ್ಯಾದೆ, ವಿನಯ, ಅಚ್ಚುಕಟ್ಟುತನ ಎಲ್ಲವನ್ನೂ ಕಂಡು ಮೆಚ್ಚಿದರು. ಆದರೆ ಅವಳ ಮಾತಿನ ರೀತಿಯಲ್ಲಿ ಕೀಳು ವರ್ಗದವರ ಧಾಟಿಯಿದೆ. ಬಿಲ್ಲವರು ಆ ರೀತಿ ಎಂದಾದರೂ ಮಾತನಾಡುವುದುಂಟೇ ಎಂದು ಅವರಿಗೊಂದು ಸಂಶಯ. ಅವರು ವಾಸುವಿನೊಡನೆ, ಕೊಚ್ಚುರಾಮನ ಹೆಂಡತಿ ‘[೧]ಏನ್’ ಎಂದು ಉಚ್ಚರಿಸುವುದರ ಅರ್ಥವೇನೆಂದು ಕೇಳಿದರು.

ಕೊಚ್ಚಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಹೊಲೆಯರಿದ್ದಾರೆಂದೂ, ಅವರೊಂದಿಗೆ ನಿತ್ಯ ವ್ಯವಹಾರದಿಂದ ಅವಳು ಹಾಗೆ ಮಾತಾಡುವಳೆಂದೂ ವಾಸು ಹೇಳಿದ. ಆ ಮಾತಿನಿಂದ ಯಾರಿಗೂ ಸಮಾಧಾನವಾಗಲಿಲ್ಲ. ಸಂಶಯಪಟ್ಟುಕೊಂಡೇ ಅವರು ಮನೆಗೆ ಹೋದರು.

ಈ ಮಧ್ಯೆ ವಾಸು ಕೆಲಸ ಮಾಡುತ್ತಿದ್ದ ಫ್ಯಾಕ್ಟರಿಯ ಒಬ್ಬ ನಾಯಕ ಫ್ಯಾಕ್ಟರಿಯ ಅಗತ್ಯ ಕೆಲಸದ ನಿಮಿತ್ತವಾಗಿ ಕೊಚ್ಚಿಗೆ ಹೋಗಿ ಎರಡು ದಿವಸ ಅಲ್ಲಿದ್ದು ಬಂದ. ಅವನು ಬರುವಾಗ ತಂದ ಕೆಲವು ಸುದ್ದಿಗಳ ಪೈಕಿ, ಒಬ್ಬ ಬಿಲ್ಲವರ ಯುವಕನು ಹೊಲೆಯರ ಒಬ್ಬಾಕೆ ಯುವತಿಯನ್ನು ಹಾರಿಸಿಕೊಂಡು ಹೋದ ವಿಷಯವೂ ಒಂದಾಗಿತ್ತು. ಈ ಘಟನೆಯ ನಂತರ ಆ ಎರಡು ಮನೆಯವರೂ ತಮ್ಮೊಳಗೆ ಹೊಡೆದಾಡಿ, ಎರಡು ಮೂರು ಜನರನ್ನು ಆಸ್ಪತ್ರೆಗೆ ಸೇರಿಸಿದ್ದಾರೆಂದೂ ಹೇಳಿದ್ದ. ಇದನ್ನು ಕೇಳಿ ವಾಸು ಮತ್ತು ಕೊಚ್ಚುರಾಮನ್ ತಬ್ಬಿಬ್ಬಾದರು. ಕಡಿತ, ಇರಿತಗಳಾಯಿತಲ್ಲ ಎಂಬುದು ಕೊಚ್ಚುರಾಮನ ವ್ಯಾಕುಲಕ್ಕೆ ಕಾರಣ. ಇದರ ಸಂಗತಿ ತನ್ನ ಹೆಂಡತಿಯ ಮನೆಯವರಿಗೂ ಊರವರಿಗೂ ತಿಳಿದರೆ ಕಷ್ಟ ಎಂಬುದು ವಾಸುವಿಗೆ ಭೀತಿ.

ಒಂದು ದಿನ ವಾಸುವಿನ ಸೋದರ ಭಾವ ಅವನೊಡನೆ ಹೇಳಿದ:

"ಕೊಚ್ಚುರಾಮನನ್ನೂ ಅವನ ಹೊಲತಿ ಹೆಂಡತಿಯನ್ನೂ ಮನೆಯಿಂದ ಹೊರಗೆ ದಬ್ಬದಿದ್ದರೆ, ನಾನೇ ಒಮ್ಮೆ ಆ ಕಡೆಗೆ ಬಂದೇನು."

ಒಟ್ಟಿನಲ್ಲಿ ಕಾರ್ಯ ಕೆಟ್ಟುಹೋಯ್ತು ಎಂದು ಕೊಚ್ಚುರಾಮನಿಗೆ ಮನವರಿಕೆಯಾಯಿತು. ವಾಸುವನ್ನು ಕಷ್ಟಕ್ಕೊಳಪಡಿಸದೆ ಆದಷ್ಟು ಬೇಗ ಅಲ್ಲಿಂದ ಹೊರಡ

---

೧. ‘ನಾನು’ ಎಂಬ ಪದಕ್ಕೆ ಮಲಯಾಳವ್‌ದಲ್ಲಿ ಸಮಾನಪದ ‘ಞಾನ್’ ಎಂದು. ವಿವಿಧ ಜಾತಿಗಳ ಆಡುನುಡಿಗಳಲ್ಲಿ ಪದ ಪ್ರಯೋಗಗಳಲ್ಲಿ ವ್ಯತ್ಯಾಸ ಕಾಣಬಹುದು. ಹರಿಜನರ ನುಡಿಯಲ್ಲಿ ಞಾನ್ > ಏನ್ ಎಂದಾಗಿದೆ.

ಬೇಕೆಂದು ಅವನು ನಿಶ್ಚಯಿಸಿದ. ಆದರೆ ಎಲ್ಲಿಗೆ ಹೋಗುವುದು? ಅಷ್ಟರಲ್ಲೆ ಅವನಿಗೆ ಪರಿಚಯವಾದ ಕೆಲವರಲ್ಲಿ ಕೇಳಿದ, ಉಳಕೊಳ್ಳಲು ಏನಾದರೂ ವ್ಯವಸ್ಥೆ ಮಾಡ ಬಹುದೋ ಎಂದು.

ರಿಕ್ಷಾ ಓಡಿಸುವ ಪತ್ರೋಸ್ ಹೇಳಿದ, ತನ್ನ ಮನೆಯಲ್ಲಿ ಇರಬಹುದೆಂದು. ಆದರೆ ವಾಸು ಅದಕ್ಕೆ ಅಡ್ಡಿಪಡಿಸಿದ. ಪತ್ರೋಸನ ಮನೆ ಅವನ ಮನೆಯ ಸಮೀ ಪವೇ ಆಗಿತ್ತು. ಆಲಪ್ಪಿ ಪಟ್ಟಣದಲ್ಲಿ ಪತ್ರೋಸನ್ನು ಅರಿಯದವರು ವಿರಳ. ಹಿರಿಯ ಕಿರಿಯರೆಂಬ ಭೇದವಿಲ್ಲದೆ ಎಲ್ಲರೂ ಅವನನ್ನು ಬಲ್ಲರು. ಎಲ್ಲರಿಗೂ ಅವನಲ್ಲಿ ವಿರೋಧವಿದೆ. ಆದರೆ ಅದನ್ನು ಯಾರೂ ಹೊರಗೆ ತೋರಿಸುತ್ತಿರಲಿಲ್ಲ. ಅವರೆಲ್ಲ ರಿಗೂ ಅವನ ಬಗ್ಗೆ ಒಂದು ರೀತಿಯ ಹೆದರಿಕೆ.

ರಸ್ತೆಯ ಪಕ್ಕದಲ್ಲಿ ಜನ ನಿಲ್ಲುವ ಸ್ಥಳದಲ್ಲಿ ತನ್ನ ರಿಕ್ಷಾದ ಮೆಟ್ಟುಹಲಗೆಯನ್ನು ಏರಿ, ಬೀಡಿ ಸೇದುತ್ತಾ ಅವನು ಕುಳಿತುಕೊಳ್ಳುತ್ತಿದ್ದ. ಕೆಲವೊಮ್ಮೆ ಕೈರಿಕ್ಷಾವನ್ನು ಎಳೆದುಕೊಂಡು ಮೂಕಹಾಡಿನೊಂದಿಗೆ, ಉದಾಸೀನಭಾವದಿಂದ ಮುಂದೆ ಹೋಗು ತ್ತಿದ್ದ. ಅವನು ಯಾವಾಗ ನೋಡಿದರೂ ರಿಕ್ಷಾದೊಂದಿಗೇ ಇರುತ್ತಿದ್ದ. ಆದರೆ ಅವನ ಕೆಲಸ ರಿಕ್ಷಾ ಓಡಿಸುವುದೊಂದೇ ಅಲ್ಲ. ಇದು ಎಲ್ಲರಿಗೂ ಗೊತ್ತು. ಅರಿಯದೆ ಯಾರಾದರೂ ಅವನ ರಿಕ್ಷಾವನ್ನು ಕೂಗಿದರೆ ಅವನು ಹೇಳುತ್ತಿದ್ದ:

"ಈಗ ಬರಲು ಸಮಯವಿಲ್ಲ ಸಾರ್. ನನಗೆ ಬೇರೆ ಹೋಗಲಿದೆ—ಒಬ್ಬರನ್ನು ಕರಕೊಂಡು."

ಹೊತ್ತು ಮುಳುಗಿತೆಂದರೆ ಅವನ ಕೈರಿಕ್ಷಾ ಓಡಲು ಪ್ರಾರಂಭಿಸುತ್ತಿತ್ತು—ಅಧಿಕ ಜನಸಂಚಾರವಿಲ್ಲದ ರಸ್ತೆಗಳಲ್ಲಿಯೂ, ಒಳರಸ್ತೆಗಳಲ್ಲಿಯೂ. ಆಗ ಆ ರಿಕ್ಷಾದ ಬಾಗಿಲು ಮುಚ್ಚಿ ಕಟ್ಟುತ್ತಿದ್ದ. ಅದು ಎಲ್ಲೆಲ್ಲಾ ಹೋಗುವುದು, ಏಕೆ ಹೋಗು ವುದು? ಎಂದು ಎಲ್ಲರಿಗೂ ಗೊತ್ತು. ಆದರೆ ಯಾರೂ ಅವನ್ನು ತಿಳಿದಂತೆ ತೋರಿಸು ತ್ತಿರಲಿಲ್ಲ. ಕೆಲವು ಅಧಿಕಾರಿಗಳ ಮತ್ತು ಶ್ರೀಮಂತರ ಗುಪ್ತ ದಾಹ ಹಾಗೂ ಅಗತ್ಯ ಗಳನ್ನು ಪೂರೈಸುವುದಕ್ಕೆ ಅವನು ನೆರವಾಗುತ್ತಿದ್ದ. ಆದ್ದರಿಂದ ಎಲ್ಲರಿಗೂ ಅವನಲ್ಲಿ ಅಸಮಾಧಾನ; ಅವನ ಹೆದರಿಕೆ.

ಅದೆಲ್ಲಾ ಕೊಚ್ಚುರಾಮನಿಗೆ ತಿಳಿದಿರಲಿಲ್ಲ. ಆದುದರಿಂದ ಪತ್ರೋಸಿಯ ಮನೆ ಯಲ್ಲಿ ಇರಬಾರದೆಂದು ವಾಸು ಆಕ್ಷೇಪಿಸಿದಾಗ ಅವನು ಕೇಳಿದ:

"ಏನಿಲ್ಲೆಂದರೂ ಅವನೊಬ್ಬ ಕ್ರಿಸ್ತಾನಿಯಲ್ಲವೇ? ಅಲ್ಲಿದ್ದರೆ ನಿನ್ನ ಜಾತಿ ಏನೆಂದು ಕೇಳಿ ಯಾರೂ ಹೊಡೆಯಲಿಕ್ಕೆ ಬರಲಾರರಷ್ಟೆ?"

"ಅದು ಸರಿ. ಆದರೊಂದು ಸಂಗತಿಯಿದೆ."

"ಏನದು?"

"ಅವನ ಮನೆಯಲ್ಲಿ ಉಳಕೊಳ್ಳಲು ತೊಡಗಿದರೆ ನೀನು ಮತ್ತೆ ಬೇರೆ ಹೆಣ್ಣನ್ನು ಹುಡುಕಬೇಕು."

"ಅದೇನು?"

"ಅದು ಏನೆಂದರೆ? ಹೂಂ, ಅದು ಹಾಗೆ."

"ಏನೆಂದು ಹೇಳು, ವಾಸು."

"ಕತ್ತಲಾದೊಡನೆ ಅವನು ನಿನ್ನ ಹೆಂಡತಿಯೊಡನೆ ಹೇಳುತ್ತಾನೆ. ರಿಕ್ಷಾ ಏರು ವಂತೆ."

"ಅದೇಕೆ?"

"ಏಕೆಂದರೆ? ಅಗತ್ಯವಿದ್ದವರಿಗೆ ಅವಳನ್ನು ಒಪ್ಪಿಸುವುದಕ್ಕೆ."

ಕೊಚ್ಚುರಾಮನ್ ಆಮೇಲೆ ಏನೂ ಕೇಳಲಿಲ್ಲ. ಪತ್ರೋಸನೊಡನೆ ಆ ವಿಷಯ ಕುರಿತು ಮತ್ತೆ ಮಾತನಾಡಲೂ ಇಲ್ಲ.

ಇನ್ನೇನು ಮಾಡುವುದು? ಎಲ್ಲಿಗೆ ಹೋಗುವುದು?

( ೩ )

ಪರೀದು ಸಾಹೇಬ ಒಬ್ಬ ದೊಡ್ಡ ಭೂಮಾಲಿಕನಾಗಿದ್ದ. ಆಲಪ್ಪಿಯಲ್ಲೂ ಸಮೀಪದ ಊರುಗಳಲ್ಲೂ ಅವನಿಗೆ ದೊಡ್ಡದೊಡ್ಡ ತೆಂಗಿನ ತೋಟಗಳಿದ್ದುವು. ಅವನ ಹಣದ ಶಕ್ತಿಯನ್ನು ಸಾರಿಹೇಳುವಂತೆ ದೊಡ್ಡದೊಂದು ಮಹಡಿಮನೆಯಿತ್ತು ಅವನಿಗೆ, ಪಟ್ಟಣದ ಮಧ್ಯದಲ್ಲಿ.

ಮೊದಲು ಆಲಪ್ಪಿಯಲ್ಲಿ ಹುರಿಹಗ್ಗ ತಯಾರಿಸುವ ಫ್ಯಾಕ್ಟರಿಯನ್ನು ಪ್ರಾರಂಭಿಸಿದ್ದು ಯುರೋಪಿಯನ್ನರು. ಆಮೇಲೆ ಊರವರು ಸಣ್ಣಸಣ್ಣ ಫ್ಯಾಕ್ಟರಿಗಳನ್ನು ಪ್ರಾರಂಭಿಸಿದರು. ಆದರೆ ಆ ಫ್ಯಾಕ್ಟರಿಯವರಿಗೆ ಯುರೋಪಿನ ವರ್ತಕರೊಂದಿಗೆ ಪೈಪೋಟಿ ನಡೆಸಲು ಸಾಧ್ಯವಾಗಲಿಲ್ಲ. ಆದುದರಿಂದಲೆ ಪರೀದು ಸಾಬ್ ಯುರೋಪಿಯನ್ ಕಂಪೆನಿಗಳಿಗೆ ಸರಿಸಾಟಿಯಾದ ರೀತಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಒಂದು ಹುರಿಹಗ್ಗದ ಫ್ಯಾಕ್ಟರಿ ನಿರ್ಮಿಸಿದ.

ಆದರೆ ಪರೀದು ಸಾಹೇಬ ಎಲ್ಲರಲ್ಲೂ ಹೇಳುತ್ತಿದ್ದುದೇನೆಂದರೆ ತನ್ನ ಒಕ್ಕಲುಗಳಿಗೆ ಹಣ ಸಹಾಯ ಮಾಡಲು ಈ ಫ್ಯಾಕ್ಟರಿ ಪ್ರಾರಂಭಿಸಿದ್ದೆಂದು. ಸತ್ಯಾಂಶ ತಿಳಿದ ಕೆಲವರು ಅದನ್ನು ನಂಬದಿದ್ದರೂ ಹೆಚ್ಚಿನವರು ನಂಬಿದ್ದರು. ತಾವು ಧನಿಕರಾಗುವ ದೃಷ್ಟಿಯಿಂದ ಒಕ್ಕಲುಗಳನ್ನು ಕೂಲಿಗೆ ದುಡಿಸುವುದು—ಜಮೀನ್ದಾರರ ತಂತ್ರವಾಗಿತ್ತು. ಕೂಲಿಯಾಳುಗಳನ್ನು ಬಂಧಿಸುವ ಸರಪಳಿಯ ಒಂದು ತುದಿಯನ್ನು ಅವರ ಉದ್ಯೋಗ ಸ್ಥಳಕ್ಕೂ ಮತ್ತೊಂದು ತುದಿಯನ್ನು ಅವರ ಮನೆಗಳಿಗೂ ಬಿಗಿಯುವ

ಉಪಾಯವಾಗಿತ್ತು ಅದು. ವರೀದು ಸಾಹೇಬನು ಸಮರ್ಥ ವ್ಯಕ್ತಿಯಾದುದರಿಂದ ಅವನಿಗದು ಸಾಧ್ಯವಾಯಿತು. ತನ್ನ ಒಕ್ಕಲುಗಳಲ್ಲಿ ಕೆಲಸ ಮಾಡಲು ಸಾಧ್ಯವಿರುವವರಿಗೆಲ್ಲಾ ತನ್ನ ಹುರಿಹಗ್ಗದ ಫ್ಯಾಕ್ಟರಿಯಲ್ಲಿ ಕೆಲಸ ಕೊಟ್ಟ. ಇದರಿಂದ ಅನೇಕ ಜನರ ದೃಷ್ಟಿಯಲ್ಲಿ ಅವನೊಬ್ಬ ಕರುಣಾಳು ವ್ಯಕ್ತಿಯಾಗಿದ್ದ.

ಕೊಚ್ಚುರಾಮನ್ ವರೀದು ಸಾಹೇಬನನ್ನು ಕಂಡು ತನ್ನ ಸಂಕಷ್ಟಗಳನ್ನು ಹೇಳಿಕೊಳ್ಳಲು ನಿಶ್ಚಯಿಸಿದ. ಅವನು ಸಾಹೇಬನ ಮನೆಗೆ ಹೋಗಿ ಅವನನ್ನು ಕಂಡು ಎಲ್ಲವನ್ನೂ ವಿವರವಾಗಿ ಹೇಳಿದ. ತಾನು ಕೊಚ್ಚಿಯವನೆಂದೂ ಬಿಲ್ಲವ ಜಾತಿಯವನೆಂದೂ ತಾನು ಹೊಲೆಯರ ಹೆಣ್ಣನ್ನು ಮದುವೆಯಾಗಿರುವುದಾಗಿಯೂ, ಅಂತರ್ಜಾತಿ ವಿವಾಹವಾದುದರಿಂದ ಇರಲು ಮನೆಯಿಲ್ಲದೆ ಕಷ್ಟಪಡುತ್ತಿರುವುದಾಗಿಯೂ ಹೇಳಿದ. ಸಾಹೇಬ ಕೇಳಿದ:

"ಹಾಗಿದ್ದರೆ ನೀನೇಕೆ ಬಿಲ್ಲವನಾಗಿ ಹೀಗೆ ಅಲೆಯಬೇಕು? ಅವಳೇಕೆ ಇನ್ನೂ ಹೊಲತಿಯಾಗಿಯೇ ಇದ್ದಾಳೆ?"

"ಮತ್ತೇನು ಮಾಡೋದು ಧಣಿಗಳೇ?" ಕೊಚ್ಚುರಾಮನ್ ಕೇಳಿದ.

"ಏನು ಮಾಡೋದೆಂದು ಕೇಳಿದರೆ?...... ಅದನ್ನು ಮುಂದೆ ಹೇಳುವೆ...... ನೀನೀಗ ಒಂದು ಕೆಲಸ ಮಾಡು. ನೀನು ನನ್ನ ನಿವೇಶನದಲ್ಲಿ ಒಂದು ಮನೆಕಟ್ಟಿಕೊಂಡು ಅದರಲ್ಲಿರು. ನನ್ನ ಕಂಪೆನಿಯಲ್ಲಿ ನಿನಗೊಂದು ಕೆಲಸವನ್ನೂ ಕೊಡಬಹುದು."

ಕೊಚ್ಚುರಾಮನ್ ಸಂತೋಷದಿಂದ ಮೈಮರೆತ. ಸಾಹೇಬ ಮನೆ ಕಟ್ಟಲು ಸ್ಥಳವನ್ನೂ ಕೊಟ್ಟ. ಹೇಗೆ ಮನೆಕಟ್ಟಬೇಕೆಂದು ಆದೇಶವಿತ್ತ. ಕೊನೆಗೆ ಹೇಳಿದ:

"ಹೆಣೆದ ಗರಿಗಳನ್ನೂ, ಬಿದಿರುಗಳನ್ನೂ ಇಲ್ಲಿಂದ ತೆಗೆದುಕೊ."

ಕೊಚ್ಚುರಾಮನ ಕಣ್ಣುಗಳಲ್ಲಿ ಸಂತೋಷದ ಕಣ್ಣೀರು ಇಳಿಯಿತು.

ಪಟ್ಟಣದಲ್ಲಿ ಸಾಹೇಬನ ಭೂಮಿಯು ಅವನ ಹುರಿಹಗ್ಗದ ಫ್ಯಾಕ್ಟರಿಯ ಸಮೀಪವೇ ಆಗಿತ್ತು. ಆ ಸ್ಥಳದಿಂದ ನೋಡಿದರೆ ಫ್ಯಾಕ್ಟರಿಯ ಆಫೀಸಿನ ಒಂದು ಗೋಡೆಯನ್ನು ಕಾಣಬಹುದಾಗಿತ್ತು.

ಅದು ಸುತ್ತಲೂ ಮುಳ್ಳಿನ ಬೇಲಿಯುಳ್ಳ, ತೆಂಗಿನ ಮರಗಳ ದೊಡ್ಡದೊಂದು ತೋಟವಾಗಿತ್ತು. ತೆಂಕಣ, ಮೂಡಣ ಮತ್ತು ಬಡಗಣ ದಿಕ್ಕುಗಳಲ್ಲಿ ಕಿರುದಾರಿಗಳಿದ್ದುವು. ನೀರು ಹರಿದುಹೋಗಲು ಅಲ್ಲಲ್ಲಿ ಸಣ್ಣಸಣ್ಣ ತೊರೆಗಳಿಂದ ಕೂಡಿದ ಆ ತೋಟದಲ್ಲಿ ಕೊಚ್ಚುರಾಮನ್‌ನ ಮನೆಯಲ್ಲದೆ ಬೇರೆ ಆರು ಮನೆಗಳಿದ್ದುವು. ಆ ಮನೆಗಳಲ್ಲಿದ್ದ ಪ್ರಾಯಕ್ಕೆ ಬಂದ ಗಂಡುಸರು ಮತ್ತು ಕೆಲವು ಹೆಂಗುಸರು ವರೀದು ಸಾಹೇಬನ ಹುರಿಹಗ್ಗದ ಫ್ಯಾಕ್ಟರಿಯಲ್ಲಿ ಕೂಲಿಯಾಳುಗಳಾಗಿದ್ದರು.

ಹೆಣೆದ ತೆಂಗಿನ ಗರಿಯ ಚಾಪೆಗಳಿಂದಲೂ, ಬಿದಿರು ಕೋಲುಗಳಿಂದಲೂ ಕೊಚ್ಚುರಾಮನ್ ಕಟ್ಟಿದ ಚಿಕ್ಕ ಮನೆ ಒಂದು ಕೊಟ್ಟಿಗೆಯಂತೆ ಕಾಣುತ್ತಿತ್ತು. ಆ ಭೂಮಿಯ ತೆಂಕಣ ಮತ್ತು ಪಡುವಣ ಮೂಲೆಗಳಲ್ಲಿಯ ಕಿರುದಾರಿಗೆ ಎದುರಾಗಿತ್ತು

ಆ ಮನೆ. ಒಂದು ಅಡುಗೆಕೋಣೆ ಮತ್ತು ಒಂದು ಕೊಠಡಿ ಮಾತ್ರ ಇತ್ತು. ಬಗ್ಗಿಕೊಂಡು ನುಗ್ಗಬೇಕು ಅದರೊಳಗೆ.

ಆ ಮನೆಯಲ್ಲಿ ವಾಸಿಸಲು ಪ್ರಾರಂಭಿಸಿದ ದಿನವೇ ಕೊಚ್ಚುರಾಮನ್ ಮತ್ತು ನೀಲಿ, ಸಾಹೇಬನ ಮನೆಗೆ ಹೋಗಿದ್ದರು. ಅವನ ಹೆಂಡತಿ ಮಕ್ಕಳು ನೀಲಿಯನ್ನು ಮನೆಯ ಬಡಗಣ ದಿಕ್ಕಿಗೆ ಕರೆದುಕೊಂಡು ಹೋಗಿ ಅವಳಿಂದ ವಿವರಗಳನ್ನು ಕೇಳಿದರು. ಅವರೆಲ್ಲರಿಗೂ ಅವಳ ಕ್ರಮ ಮೆಚ್ಚಿಗೆಯಾಯಿತು. ಒಂದು ಬಳ್ಳ ಅಕ್ಕಿ, ಉಪ್ಪು, ಮೆಣಸು, ಒಂದು ತೆಂಗಿನಕಾಯಿ ಮತ್ತು ಉಡಲು ಒಂದು ಹಳೆಯ ಸೀರೆಯನ್ನು ಅವಳಿಗೆ ಕೊಟ್ಟು ಅವರು ಸನ್ಮಾನಿಸಿದರು.

ಈ ರೀತಿ, ಅವರು, ಆ ಸಣ್ಣ ಗುಡಿಸಲಿನಲ್ಲಿ ತಮ್ಮ ಸಂಸಾರಜೀವನ ಪ್ರಾರಂಭಿಸಿದರು. ಮರುದಿನವೇ ಕೊಚ್ಚುರಾಮನ್ ಪರೀದು ಸಾಹೇಬನ ಫ್ಯಾಕ್ಟರಿಯಲ್ಲಿ ಕೆಲಸಕ್ಕೂ ಸೇರಿದ.

ಕೆಲವೊಮ್ಮೆ ನೀಲಿ, ಸಾಹೇಬನ ಮನೆಗೆ ಹೋಗುತ್ತಿದ್ದಳು. ಅಲ್ಲಿ ಹೋದರೆ ಏನಾದರೂ ಕೆಲಸ ಇದ್ದೇ ಇರುವುದು. ಅವರು ಹೇಳಿದರೂ ಹೇಳದಿದ್ದರೂ ಕಣ್ಣಿಗೆ ಕಂಡ ಕೆಲಸವನ್ನು ಅವಳು ಮಾಡುತ್ತಿದ್ದಳು. ಅವರು ಅವಳ ಕೆಲಸಕ್ಕೆ ಅಕ್ಕಿಯನ್ನೋ ಅನ್ನವನ್ನೋ ಕೊಡುತ್ತಿದ್ದರು. ಏನನ್ನೇ ಕೊಡಲಿ ಅವಳು ಅದನ್ನು ಮನೆಗೆ ತೆಗೆದುಕೊಂಡು ಹೋಗುತ್ತಿದ್ದಳು.

ಆ ತೋಟದಲ್ಲಿ ಬೇರೆ ಆರು ಮನೆಗಳಿದ್ದರೂ ಕೊಚ್ಚುರಾಮನ್ ಮತ್ತು ನೀಲಿಯರು 'ಪ್ರತ್ಯೇಕ'ವಾಗಿಯೇ ಇದ್ದರು. ಅಂದರೆ ಬೇರೆ ಮನೆಯವರಲ್ಲಿ ಅವರಿಗೆ ಹೆಚ್ಚಿನ ಸಂಪರ್ಕ ಇರಲಿಲ್ಲ. ನೆರೆಹೊರೆಯವರೆಲ್ಲಾ ಅವರ ಮನೆಯತ್ತ ನೋಡುವುದುಂಟು. ಕೆಲವರು ಕುತೂಹಲದಿಂದಲೇ ನೋಡುತ್ತಿದ್ದರು. ಕೆಲವರ ನೋಟದಲ್ಲಂತೂ ಅಸಿಷ್ಟ ಸ್ಪಷ್ಟವಾಗಿ ಕಾಣುತ್ತಿತ್ತು. ಮತ್ತೆ ಕೆಲವರ ನೋಟದಲ್ಲಿ ಕೋಪದ ಛಾಯೆಯಿತ್ತು.

ನೀಲಿಯ ಮನೆಯ ಬಡಗಣ ದಿಕ್ಕಿನ ಮನೆಯವರು ಬಿಲ್ಲವರಾಗಿದ್ದರು. ಅಲ್ಲಿ ಒಬ್ಬ ಬಿಲ್ಲವತ್ತಿ ಇದ್ದಳು. ಅವಳ ಹೆಸರು ನಾಣಿ (ನಾರಾಯಣಿ). ಅವಳಿಗೆ ನೀಲಿಯನ್ನು ಕಂಡರೇ ಬಹು ಕೋಪ ಮತ್ತು ಮತ್ಸರ. ಜಾತಿವೈರ ಮಾತ್ರವಲ್ಲ ಅದಕ್ಕೆ ಕಾರಣ. ಅವಳಿಗೆ ನೀಲಿಯ ಪ್ರಾಯದ ಒಬ್ಬಳು ಕುರೂಪಿ ಮಗಳಿದ್ದಳು—ಮುಡುಗಿಗೆ ಉಬ್ಬಿದ ತುಟಿಗಳು, ಮೆಳ್ಳೆಗಣ್ಣು, ಕಡುಕಪ್ಪು ಬಣ್ಣ. ಇಂತಹ ತನ್ನ ಮಗಳನ್ನು ನೋಡಿ, ನೀಲಿಯ ಮುಖವನ್ನು ನೋಡುವಾಗ ಅವಳಿಗೆ ಎಲ್ಲಿಲ್ಲದ ಸಂಕಟ ಮತ್ತು ಕೋಪ ಬರುತ್ತಿತ್ತು. ಅವಳು ಗೊಣಗುತ್ತಿದ್ದಳು:

"ಅವನಿಗೆ ಬಿಲ್ಲವರ ಹುಡುಗಿಯೊಂದು ಸಿಗದಿದ್ದುದರಿಂದಲೊ ಏನೋ ಈ ಹೊಲತಿ ಹೆಣ್ಣನ್ನು ಕದ್ದುಕೊಂಡು ಬಂದದ್ದು."

ಅವಳ ಮನೆಯ ಪಕ್ಕದಲ್ಲಿ ಕುಂಜುವಿನ ಮನೆ. ಅವನು ಮುಂಜಾನೆ ಕೆಲಸಕ್ಕೆ

ಹೋಗುತ್ತಿದ್ದ. ಆಮೇಲೆ ಅಲ್ಲಿ ಯಾವಾಗ ನೋಡಿದರೂ ಅಳು ಮತ್ತು ಗದ್ದಲಗಳು. ಹಠಮಾರಿಗಳಾದ ಇಬ್ಬರು ಗಂಡುಮಕ್ಕಳು ಮತ್ತು ಪ್ರತಿಯೊಂದಕ್ಕೂ ಅರಚಾಡುವ ಒಂದು ಹೆಣ್ಣುಮಗು ಇತ್ತು ಅಲ್ಲಿ. ಮಕ್ಕಳ ಹಠಮಾರಿತನಕ್ಕೂ ಕೂಗುವಿಕೆಗೂ ರೋಸಿ, ಗಂಡನನ್ನೂ ನೆರೆಯವರನ್ನೂ ದೇವರನ್ನೂ ನಿಂದಿಸುತ್ತಿದ್ದಳು ಆ ಮಕ್ಕಳ ತಾಯಿ ಗೌರಿ. ಕೆಲವೊಮ್ಮೆ ನಾಣಿ ಮತ್ತು ಅವಳೂ ಸೇರಿ ಕೊಚ್ಚುರಾಮನ್ ಮತ್ತು ನೀಲಿಯರ ವಿಷಯ ಮಾತನಾಡಿಕೊಳ್ಳುತ್ತಿದ್ದರು. ಅವರು ಮಾತನಾಡುವುದು ರಹಸ್ಯವಾಗಿಯೇ ಇದ್ದರೂ ಮಾತುಗಳೆಲ್ಲಾ ಅಕ್ಕಪಕ್ಕದ ಮನೆಯವರಿಗೆ ಕೇಳುತ್ತಿತ್ತು. ಗೌರಿ ಹೇಳು ತ್ತಿದ್ದಳು:

"ಅವನು ಬಿಲ್ಲವನೆಂದು ಸುಮ್ಮನೆ ಹೇಳೋದು ನಾಣಿಯಕ್ಕ. ಅವನು ಬಿಲ್ಲವನೂ ಅಲ್ಲ, ಏನೂ ಅಲ್ಲ. ಹೊಲೆಯನೋ ಪರವನೋ ಮತ್ಯಾರೋ ಆಗಿರಬೇಕು."

ಕುಂಜುವಿನ ಮನೆಯ ಆಚೆಯಿರುವುದು ಎರಡು ಕ್ರಿಸ್ತಾನಿಗಳ ಮನೆ. ಒಂದು ಔಸೇಪ್ಪನದ್ದು ಮತ್ತೊಂದು ಸ್ಕರಿಯನದ್ದು. ಔಸೇಪ್ಪ ಮತ್ತು ಅವನ ಇಬ್ಬರು ಗಂಡು ಮಕ್ಕಳು ಹುರಿಹಗ್ಗದ ಫ್ಯಾಕ್ಟರಿಯಲ್ಲಿ ಕೆಲಸ ಮಾಡುತ್ತಿದ್ದುದರಿಂದ ಆ ಕುಟುಂಬ ತಕ್ಕಮಟ್ಟಿಗೆ ಅನುಕೂಲ ಸ್ಥಿತಿಯಲ್ಲೇ ಜೀವಿಸುತ್ತಿತ್ತು. ಆ ಮನೆಯಿಂದ ಗಲಾಟೆ, ಕೂಗು ಮೊದಲಾದುವುಗಳು ಕೇಳುತ್ತಿರಲಿಲ್ಲ. ಔಸೇಪ್ಪನ ಹೆಂಡತಿ ಮರಿಯಮ್ಮ ಕೆಲವೊಮ್ಮೆ ನೀಲಿಯ ಮನೆಯತ್ತ ತಲೆಯೆತ್ತಿ ನೋಡುತ್ತಿದ್ದಳು. ಆಗ ನೀಲಿ ಆಕಡೆ ನೋಡಿದರೆ ಅವಳು ಮರೆಯಾಗುತ್ತಿದ್ದಳು.

ಸ್ಕರಿಯ ಇರುವ ಮನೆ ಒಂದು ನರಕವೇ ಸರಿ. ಎದ್ದು ನಡೆಯಲು ಶಕ್ತಿಯಿಲ್ಲದ ನಿತ್ಯ ರೋಗಿಯಾದ ಅವನ ಹೆಂಡತಿಯೂ, ಕಪ್ಪು ಬಣ್ಣದ ಎರಡು ಮಕ್ಕಳೂ ಇದ್ದರು ಅಲ್ಲಿ. ಸ್ಕರಿಯ ಕೆಲಸ ಮುಗಿಸಿ, ಮನೆಗೆ ಹಿಂದಿರುಗಿದೊಡನೆ ಮತ್ತೆ ಆ ನರಕದಲ್ಲಿ ಮುಳುಗಿಹೋಗುತ್ತಿದ್ದ.

ಸಾಹೇಬನ ಮನೆಯ ವಾಯುವ್ಯ ಮೂಲೆಯಲ್ಲಿರುವುದು ಕುಂಞಿಪೆಣ್ ಎಂಬ ಹೆಂಗಸಿನ ಮತ್ತು ವೇಲಾಯುಧನ್ ಎಂಬುವನ ಎರಡು ಮನೆಗಳು. ಕುಂಞಿಪೆಣ್‌ಗೆ ಪ್ರಾಯಕ್ಕೆ ಬಂದ ಒಬ್ಬ ಮಗನಿದ್ದ—ಅವನ ಹೆಸರು ಭಾಸ್ಕರನ್. ಮಗನ ಪ್ರಾಯಕ್ಕೆ ಬಹಳ ವ್ಯತ್ಯಾಸವಿಲ್ಲದ ರಾಮನ್ ಎಂಬ ಒಬ್ಬ ಪ್ರೇಮಿಯಿದ್ದ ಅವಳಿಗೆ. ಹೆಸರಿಗೆ ಅವನೊಬ್ಬ ದರ್ಜಿಯವ. ಆದರೆ ಆ ಹೆಂಗಸಿನ ಕಾಮಾತುರವನ್ನು ತೃಪ್ತಿಪಡಿಸುವುದೇ ಅವನ ಮುಖ್ಯ ವೃತ್ತಿ. ಅವಳ ಮಗ ಭಾಸ್ಕರನ್ ಕೂಡಾ ಒಬ್ಬ ವಿಲಾಸಪ್ರಿಯ.

ಅವನು, ಕೆಲವೊಮ್ಮೆ ತನ್ನ ಮನೆಯಂಗಳದಲ್ಲಿ ನಿಂತು ನೀಲಿಯ ಗುಡಿಸಲಿನತ್ತ ನೋಡಿಕೊಂಡು ಸಿಳ್ಳುಹಾಕುತ್ತಿದ್ದ. ಕೆಲವೊಮ್ಮೆ ಕಿರುದಾರಿಗೆ ಬಂದು, ಬೇಲಿಯ ದ್ವಾರದ ಮೂಲಕ ನೀಲಿಯ ಮನೆಯತ್ತ ಇಣಿಕಿ ನೋಡುತ್ತಿದ್ದ. ಕೆಲವೊಮ್ಮೆ ಬೇಲಿಯ ಪಕ್ಕದಲ್ಲಿ ನಿಂತು ಅವಳೊಡನೆ ಮಾತಾಡುತ್ತಿದ್ದ:

"ಕೊಚ್ಚುರಾಮಣ್ಣ ಇದ್ದಾರೋ ಮನೆಯಲ್ಲಿ?"

"ಇಲ್ಲ." ನೀಲಿ ಗಂಭೀರವಾಗಿಯೇ ಉತ್ತರಿಸುತ್ತಿದ್ದಳು.

"ಯಾವಾಗ ಬಂದಾರು?"

"ಕತ್ತಲಾದೀತು."

"ಬಂದಾಗ ನಾನು ಬಂದು ಕೇಳಿ ಹೋದೆನೆಂದು ಹೇಳಬಹುದೋ?"

"ಹೂಂ."

"ಯಾರೆಂದು ಹೇಳುವುದು?"

"ಯಾರೆಂದು?"

"ಕುಂಞಿಪೆಣ್ಣಿನ ಮಗ—ಭಾಸ್ಕರನ್."

"ಹೂಂ."

ಕೇಳಿದ್ದಕ್ಕೆಲ್ಲಾ ಉತ್ತರ ಸಿಗುತ್ತದೆ. ಆದರೆ ಆ ಉತ್ತರಗಳೊಂದೂ ಆಶಾದಾಯಕವಾದವುಗಳಲ್ಲ. ಆದರೆ ಅವನು ನಿರಾಶಾವಾದಿಯಲ್ಲ. "ಕೊಡದವರೊಡನೆ ಬಿಡದೆ ಇರುವ" ಸ್ವಭಾವದವ ಅವನು. ಆ ನಂತರವೂ ಅವನು ಆಗಾಗ್ಗೆ ಬರುವುದು, ವಿಚಾರಿಸುವುದು ನಡೆದೇ ಇತ್ತು.

ವಿಧವೆಯಾದ ತಾಯಿಯನ್ನೂ, ಎಳೆಯ ಮೂವರು ಸಹೋದರಿಯರನ್ನೂ, ದುಡಿದು ಸಾಕಬೇಕಾದವನು ವೇಲಾಯುಧನ್. ಅವನು ಹುರಿಹಗ್ಗದ ಫ್ಯಾಕ್ಟರಿಗೆ ಕೆಲಸಕ್ಕೆ ಹೋದಾಗ, ತಾಯಿ ಮತ್ತು ತಂಗಿಯರಿಗೆ ಹುರಿ ತಯಾರಿಸುವ ಕೆಲಸ. ಆದುದರಿಂದ ಅವರಿಗೆ ನೆರೆಹೊರೆಯವರನ್ನು ವಿಮರ್ಶಿಸುವುದಕ್ಕಾಗಲೀ ದೂಷಿಸುವುದಕ್ಕಾಗಲೀ ಸಮಯವಿರಲಿಲ್ಲ. ಆದಾಗ್ಯೂ ಹುರಿ ತಯಾರಿಸುವುದರ ನಡುವೆ, ಆಗಾಗ್ಗೆ ನೀಲಿಯ ಮನೆಯತ್ತ ನೋಡಿ ಏನೋ ಪಿಸುಗುಟ್ಟುತ್ತಿದ್ದರು.

ನೀಲಿಗೆ ಪಕ್ಕದ ಮನೆಯವರೊಡನೆ ಮಾತನಾಡಬೇಕೆಂಬ ಆಸೆಯಿದೆ. ಎಲ್ಲಾ ವಿಷಯಗಳನ್ನು ಹೇಳಬೇಕೆಂಬ ಮನಸ್ಸು ಅವಳಿಗೆ—ಕೊಚ್ಚುರಾಮನಿಗೂ ಅವಳಿಗೂ ಸ್ನೇಹವಾದುದು. ಅವನು ತೆಂಕಣ ಅಂಗಳದಲ್ಲೂ ಅವಳು ಬಡಗಣ ಅಂಗಳದಲ್ಲೂ ನಿಂತು ಪರಸ್ಪರ ನೋಡಿ ಆನಂದಪಡುತ್ತಿದ್ದುದೂ ಇದರಿಂದಾಗಿ, ಎರಡು ಮನೆಯವರೂ ತಮ್ಮತಮ್ಮೊಳಗೆ ಜಗಳಾಡುತ್ತಿದ್ದುದು. ಇವೆಲ್ಲವನ್ನೂ ಎಲ್ಲರಲ್ಲೂ ಹೇಳಬೇಕೆಂಬ ಆಸೆ. ಯಾರೊಡನೆಯಾದರೂ ಹೇಳಿದರೆ ಅವಳಿಗೆ ಮನಸ್ಸಿಗೆ ತೃಪ್ತಿಯಾಗುತ್ತಿತ್ತು. ಅಲ್ಲದೆ ನೆರೆಮನೆಯವರ ದಾಂಪತ್ಯಜೀವನ, ಅವರ ಸುಖದುಃಖಗಳು, ಅವರ ಬಂಧುಗಳು, ಶತ್ರುಗಳು ಇತ್ಯಾದಿಗಳನ್ನೆಲ್ಲಾ ಕೇಳಿ ತಿಳಿದುಕೊಳ್ಳಬೇಕೆಂಬ ಇಚ್ಛೆ ಅವಳಿಗೆ. ಏನಿದ್ದರೂ ಅವಳೂ ಒಂದು ಹೆಣ್ಣಲ್ಲವೇ? ಅವಳಿಗೂ ಸಾಮುದಾಯಿಕ ಬಂಧನಗಳ ಅವಶ್ಯವಿಲ್ಲವೆ?

ಆದರೆ ತನ್ನಲ್ಲಿ ಎಂದೂ ಮಾತಾಡದವರೊಡನೆ ತಾನೇ ಮೊದಲು ಹೇಗೆ ಮಾತಾಡುವುದು? ಅವಳ ಮನೆಯತ್ತ ಸುಳಿಯದವರ ಮನೆಗಳಿಗೆ ಅವಳು ಹೇಗೆ ತಾನೇ ಹೋದಾಳು?

ಕೊಚ್ಚುರಾಮನಾದರೊ ಕೆಲಸಕ್ಕೆ ಹೋದಾಗ ಅವರಿವರಲ್ಲಿ ಮಾತನಾಡುತ್ತಿದ್ದ. ಕೆಲವರ ಮಧ್ಯೆ ಬೆರೆತುಕೊಳ್ಳುತ್ತಿದ್ದ. ನೀಲಿಯಾದರೊ? ಅವಳು ಕೆಲವೊಮ್ಮೆ ಧಣಿಗಳ ಮನೆಗೆ ಹೋಗಿ ಅಲ್ಲಿಯ ಕೆಲಸಗಳನ್ನು ಮಾಡಿಕೊಡುವುದಿದೆ. ಆದರೆ ಅವರಲ್ಲಿ ಅವಳೇನೆಂದು ಮಾತಾಡುವುದು? ಅವರು ದೊಡ್ಡ ಮನುಷ್ಯರಲ್ಲವೆ? ಅವಳ ಸಣ್ಣಪುಟ್ಟ ವಿಷಯಗಳನ್ನು ಕೇಳುವುದಕ್ಕೆ ಅವರಿಗೆ ತಾಳ್ಮೆಯಾದರೂ ಎಲ್ಲಿ? ಈ ರೀತಿಯಲ್ಲಿ ನೀಲಿಯ ಅಸಹನೀಯ ಏಕಾಂತಜೀವನ ಸಾಗತೊಡಗಿತು.

ನೆರೆಮನೆಗಳಿಗೆ ಕ್ರೈಸ್ತ ಗುರುಗಳು ಉಪದೇಶ ಕೊಡಲು ಬರುವುದುಂಟು. ಹಾಗೆ ಬರುವವರಲ್ಲಿ ಗಂಡಸರೂ ಇದ್ದರು ಹೆಂಗಸರೂ ಇರುತ್ತಿದ್ದರು. ಕೆಲವೊಮ್ಮೆ ಅವರು ನೀಲಿಯ ಮನೆಯತ್ತ ತಲೆಯೆತ್ತಿ ನೋಡುತ್ತಿದ್ದರು. ನೀಲಿಯನ್ನು ಕಂಡರೆ ಸ್ನೇಹಪೂರ್ವಕವಾಗಿ ನಗುತ್ತಿದ್ದರು. ಅವರು ಎಲ್ಲಿಂದ ಬರುತ್ತಾರೆ, ಏಕೆ ಬರುತ್ತಾರೆ? ಎಂಬುದು ಅವಳಿಗೆ ತಿಳಿಯದು. ಆದರೆ ಅವರು ಎಲ್ಲಾ ಮನೆಗಳಿಗೆ ಹೋಗುತ್ತಿದ್ದರು. ಒಂದು ದಿನ ನೀಲಿಯ ಕಡೆಗೆ ನೋಡಿ ನಕ್ಕ ಇಬ್ಬರು ಸ್ತ್ರೀ ಉಪದೇಶಿಗಳೊಡನೆ ಅವಳು ಕೇಳಿದಳು:

"ಏಕೆ ಈ ಕಡೆ ಬರೋದಿಲ್ಲ?"

ಅವರು ದಾರಿಯಿಂದ ಅಂಗಳಕ್ಕೆ ಬಂದರು. ಸ್ನೇಹಪೂರ್ವಕವಾಗಿ ಅವಳ ಕುಶಲವನ್ನು ಕೇಳಿದರು. ನೀಲಿ ಮನೆಯೊಳಕ್ಕೆ ಅವರನ್ನು ಕರೆದಳು. ಅವರು ನಿಸ್ಸಂಕೋಚವಾಗಿ ಮನೆಯೊಳಕ್ಕೆ ಹೋದರು. ಅವಳು ಬಿಡಿಸಿದ ಚಾಪೆಯ ಮೇಲೆ ಕುಳಿತರು. ಅವಳೊಡನೆ ಹಲವು ಪ್ರಶ್ನೆಗಳನ್ನು ಕೇಳಿದರು. ಒಡ್ಡು ಕಡಿದು ಹರಿಯುವ ನೀರಿನಂತೆ ಅವಳು ಹೇಳತೊಡಗಿದಳು. ಎಲ್ಲಾ—ಎಲ್ಲವನ್ನೂ ಹೇಳಿದಳು.

ಅವರು ಮೌನವಾಗಿ ಕುಳಿತು, ಸಹನೆಯಿಂದ ಎಲ್ಲವನ್ನೂ ಕೇಳಿದರು. ಕೊನೆಗೆ ಅವರು ಅವಳಿಗಾಗಿ ಪ್ರಾರ್ಥಿಸಿದರು. ಬೈಬಲ್‌ನಿಂದ ಕೆಲವು ವಾಕ್ಯಗಳನ್ನು ಓದಿ, ಪಾಪ ಮೋಕ್ಷವಾಗಬೇಕಾದರೆ ಏಸು ಕ್ರಿಸ್ತನ ಮಾರ್ಗವನ್ನು ಅನುಸರಿಸಬೇಕೆಂದು ಅವರು ಉಪದೇಶಿಸಿದರು.

ನೀಲಿಗೆ ಆನಂದವಾಯಿತು. ಅವಳೂ ಮಾತಾಡಿದಳು. ಅವಳಿಗೆ ಎಲ್ಲರೊಡನೆ ಹೇಳಬೇಕೆಂದಿದ್ದ, ತನ್ನ ಪ್ರೇಮಕಥೆಯನ್ನು ಅವರಲ್ಲಿ ಹೇಳಿದಳು. ಮತ್ತೂ ಅವಳಿಗೆ ಹೇಳುವುದು ಬೇಕಾದಷ್ಟಿತ್ತು. ಅವಳು ಎಷ್ಟು ಹೇಳಿದರೂ ಅವರು ಕೇಳುವುದಕ್ಕೆ ಸಿದ್ಧರಿದ್ದರು. ಎಷ್ಟೊಂದು ಸಂತೋಷ!

ಅಂದು ಸಾಯಂಕಾಲ ಕೊಚ್ಚುರಾಮನ್ ಕೆಲಸ ಮುಗಿಸಿ ಮನೆಗೆ ಬಂದಾಗ, ಕ್ರೈಸ್ತ ಉಪದೇಶಿಣಿಯರು ಬಂದದ್ದು, ಅವರಲ್ಲಿ ತಾನು ಮಾತಾಡಿದ್ದು ಎಲ್ಲವನ್ನೂ ಅವಳು ಹೇಳಿದಳು. ಅವನು ಕೇಳಿದ:

"ಅವರು ಇನ್ನುಮೇಲೆಯೂ ಇಲ್ಲಿಗೆ ಬರುವರೋ?"

"ಹೌದು, ಇನ್ನೂ ಬರುತ್ತೇವೆಂದು ಹೇಳಿ ಹೋದರು."

ಅವನು ನೀಲಿಯ ಏಕಾಂತತೆಯ ಕಷ್ಟವನ್ನು ಅರಿತಿದ್ದ. ಆದ್ದರಿಂದ ಉಪದೇಶಿಣಿಯರ ಭೇಟಿಯನ್ನು ಅವನೂ ಸ್ವಾಗತಿಸಿದ, ಮತ್ತು ಪ್ರೋತ್ಸಾಹಿಸಿದ. ಮಾತ್ರವಲ್ಲ ಅವನ ನಿರೀಕ್ಷೆ ಮತ್ತು ಆಲೋಚನೆಗಳಲ್ಲಿ ಏನೋ ಒಂದು ಬಗೆಯ ಬದಲಾವಣೆಯು ತಲೆದೋರಿತು.

ಹೀಗೆ ಕೆಲವು ದಿನಗಳು ಉರುಳಿದುವು. ಒಂದು ದಿನ ಸಂಜೆ ಕೊಚ್ಚುರಾಮನ್ ಕೆಲಸ ಮುಗಿಸಿ ಮನೆಗೆ ಬಂದಾಗ, ಮನೆಯೊಳಗಡೆ ಗೋಡೆಯ ಮೇಲೆ ಒಂದು ಪಟ ತೂಗಾಡುತ್ತಿತ್ತು. ಅದು, ಲೋಕದ ಪಾಪ ಪರಿಹಾರಕ್ಕಾಗಿ, ಶಿಲುಬೆಯಲ್ಲಿ ನೇತು ಬಿದ್ದಿರುವ ಏಸುದೇವನ ಪಟವಾಗಿತ್ತು. ಅವನು ಆ ಪಟವನ್ನು ನೆಟ್ಟದೃಷ್ಟಿಯಿಂದ ನೋಡಿದ. ದೇವನ ಕೈಕಾಲುಗಳಲ್ಲಿಯೂ ಎದೆಯಲ್ಲಿಯೂ ನೆತ್ತರು ಹರಿಯುತ್ತಿತ್ತು. ಮುಳ್ಳು ಕಿರೀಟಾಲಂಕೃತವಾಗಿದ್ದ ತಲೆಯು ಆಯಾಸದಿಂದ ಬಾಗಿಕೊಂಡಿದೆ. ಕೊಚ್ಚುರಾಮನ್‌ನ ಕಣ್ಣುಗಳಲ್ಲಿ ನೀರು ತುಂಬಿತು.

ಅಂದು ಕತ್ತಲಾದೊಡನೆ ತೂಗುಹಾಕಿದ ಆ ಪಟದ ಕೆಳಗೆ ನೀಲಿ ಊದಿನ ಕಡ್ಡಿ ಹಚ್ಚಿ ಸಿಕ್ಕಿಸಿದಳು. ದಂಪತಿಗಳು ಆ ಪಟದ ಮುಂದೆ ಕುಳಿತರು. ಅವಳು ಪ್ರಾರ್ಥನಾ ಗಾನ ಹಾಡಿದಳು. ಅವನು ಅದನ್ನು ಅನುಕರಿಸಿದ.

ಏಸುವಿನ ಮಾರ್ಗವನ್ನು ಅನುಸರಿಸಲು ಅವರು ನಿಶ್ಚಯಿಸಿದರು.

ಮಾರಣೆಯ ದಿನ ಮುಂಜಾನೆ ಕೊಚ್ಚುರಾಮನ್ ವರೀದು ಸಾಹೇಬನ ಮನೆಗೆ ಹೋದ. ಹಿಂದಿರುಗಿ ಬಂದವನೇ ನೀಲಿಯೊಡನೆ ಹೇಳಿದ:

"ಸಾಹೇಬರೂ ಹೇಳಿದರು, ಅದದ್ದು ಒಳ್ಳೆಯದೆಂದು."

"ಯಾವುದು?"

"ಏಸುವಿನ ಮಾರ್ಗವೇ ನಮ್ಮ ದಾರಿ."

ಕೊಚ್ಚುರಾಮನ್ ಮತ್ತು ನೀಲಿಯರು ದೀಕ್ಷಾಸ್ನಾನ ಮುಗಿಸಿದರು. ಅವನು ವರ್ಕಿಯಾದ; ಅವಳು ಏಲಿಯಾದಳು.

## ( ೪ )

ವರ್ಕಿ ಹುರಿಪಗ್ಗದಿಂದ ಚಾಪೆ ಕಾಲೊರಸುಗಳನ್ನು ತಯಾರಿಸುವುದರಲ್ಲಿ ನಿಪುಣನಾದ. ಅವನ ಕೆಲಸದಲ್ಲಿ ವೇಗವಿತ್ತು, ನಾಜೂಕೂ ಇತ್ತು. ಅವನು ನಿಗದಿಯಾದುದಕ್ಕಿಂತ ಹೆಚ್ಚು ಕೆಲಸ ಮಾಡುತ್ತಿದ್ದುದರಿಂದ ಅವನಿಗೆ ಹೆಚ್ಚು ಸಂಬಳವೂ ಸಿಗುತ್ತಿತ್ತು. ವರೀದು ಸಾಹೇಬನು ಹೆಚ್ಚಿನ ಅನುಕೂಲತೆಗಳನ್ನು ಅವನಿಗೆ ಒದಗಿಸಿ ಕೊಡುತ್ತಿದ್ದನೆಂಬ ಕಾರಣ ವರ್ಕಿಗೆ ಕೂಲಿಯವರ ಮಧ್ಯೆ ಒಂದು ಯೋಗ್ಯ ಸ್ಥಾನವಿತ್ತು.

ವರೀದು ಸಾಹೇಬನಿಗೆ ತನ್ನ ಜಮೀನನ್ನು ನೋಡಲು ಹೋಗುವ ಇಲ್ಲವೆ ಒಕ್ಕಲುಗಳ ಮನೆಗಳಿಗೆ ಹೋಗುವ ಅಭ್ಯಾಸವಿರಲಿಲ್ಲ. ಅದಕ್ಕೆಲ್ಲಾ ಬೇರೆ ಜನರಿದ್ದರು. ಆದರೆ ಒಂದು ದಿನ ಸಂಜೆ ವರೀದು ಸಾಹೇಬನು ತಿರುಗಾಡಲು ಹೋಗಿದ್ದಾಗ ವರ್ಕಿಯ ಮನೆಯ ಬಳಿ ಹೋದ. ಅವರ ಕುಶಲವನ್ನು ಕೇಳಿದ. ಮನೆಯೊಳಗೆ ಹೋದ. ಆ ಮನೆಯನ್ನು ಸ್ವಲ್ಪ ದೊಡ್ಡದು ಮಾಡಿ ಕಟ್ಟಲು ಹೇಳಿದ. ಅಲ್ಲದೆ ಅದಕ್ಕೆ ಬಿದಿರಿನ ಚಾಪೆಯ ತಟ್ಟಿಯನ್ನು ಮಾಡಬೇಕೆಂದೂ ಗಟ್ಟಿಯಾದ ಬೀಗ ಇರ ಬೇಕೆಂದೂ ಹೇಳಿದ. ಮನೆ ಕಟ್ಟಲು ಬೇಕಾದ ಮಡಲನ್ನೂ ಬಿದಿರಿನ ಚಾಪೆಯನ್ನೂ ಕೊಡುವುದಾಗಿ ತಿಳಿಸಿದ.

ಸಾಹೇಬನು ಬಂದಿರುವ ಸುದ್ದಿ ತಿಳಿದೊಡನೆ ನೆರೆಮನೆಯವರೆಲ್ಲಾ ಅವನನ್ನು ಕಾಣುವುದಕ್ಕೂ ಗೌರವಿಸುವುದಕ್ಕೂ ವರ್ಕಿಯ ಮನೆಯಂಗಳದಲ್ಲಿ ಬಂದು ಸೇರಿದರು. ಅವನು ಬೇರೆ ಯಾರ ಮನೆಗೂ ಹೋಗಲಿಲ್ಲ. ಅಲ್ಲಿಂದಲೇ ಅವರ ಕ್ಷೇಮ ಸಮಾಚಾರ ವಿಚಾರಿಸಿದ. ಈ ಘಟನೆಯು ನೆರೆಹೊರೆಯವರ ಮಧ್ಯೆ ವರ್ಕಿ ಮತ್ತು ಏಲಿಯರ ಸ್ಥಾನವನ್ನು ಮತ್ತಷ್ಟು ಹೆಚ್ಚಿಸಿತು. ಆಮೇಲೆ ಎಲ್ಲರೂ ಅಲ್ಲಿಗೆ ಬರಲು ಪ್ರಾರಂಭಿ ಸಿದರು. ಏಲಿಯನ್ನು ತಮ್ಮ ಮನೆಗಳಿಗೂ ಕರೆದರು.

ವರ್ಕಿ ದೊಡ್ಡದೊಂದು ಮನೆ ಕಟ್ಟಿದ—ಬಾಗಿಲು, ಕಿಟಕಿಗಳೂ, ಬಿದಿರ ಗೋಡೆ ಗಳೂ ಇರುವ ತಕ್ಕಮಟ್ಟಿಗೆ ದೊಡ್ಡದೇ ಆದ ಮನೆ. ಎರಡು ಕೋಣೆಗಳು, ಅಡುಗೆ ಕೊಠಡಿ, ಒಂದು ಹಜಾರ, ಹಿಂಭಾಗದಲ್ಲಿ ಒಂದು ಚಿಕ್ಕ ಕೋಣೆ ಸಹ ಇದ್ದುವು. ಮರದಿಂದ ಮಾಡಿದ ಸುಂದರವಾದ ಒಂದು ಗೂಡಿನಲ್ಲಿ ಶಿಲುಬೆಗೇರಿಸಿದ ಏಸುವಿನ ಪಟವನ್ನು ಇರಿಸಿದ. ದಂಪತಿಗಳು ಪ್ರತಿದಿನ ದೀಪ ಹಚ್ಚಿ ಅಲ್ಲಿಟ್ಟು ಪ್ರಾರ್ಥಿಸುತ್ತಿದ್ದರು. ಪ್ರತಿ ಆದಿತ್ಯವಾರ ಅವರು ಚರ್ಚಿಗೂ ಹೋಗುತ್ತಿದ್ದರು.

ಏಲಿ ಗರ್ಭಿಣಿಯಾದಳು. ಅವಳು ಒಂದು ಗಂಡುಮಗುವನ್ನು ಹೆತ್ತಳು. ಆ ಮಗುವಿಗೆ ಅಂತೋಣಿಯೆಂದು ಹೆಸರಿಟ್ಟರು.

ವಿಶೇಷ ದಾರಿದ್ರ್ಯ, ಕ್ಲೇಶಗಳಿಲ್ಲದೆ, ಪರ್ವತದ ತಪ್ಪಲಿಂದ ಹರಿದುಬರುವ ತೊರೆಯಂತೆ, ಆ ಚಿಕ್ಕ ಕುಟುಂಬ ಸುಗಮವಾಗಿ ಸಾಗುತ್ತಿತ್ತು. ವರ್ಕಿಗಂತೂ ಮನೆ ಮತ್ತು ಫ್ಯಾಕ್ಟರಿ ಆಯ್ತು ತಾನಾಯ್ತು. ಅನ್ಯರ ವಿಷಯದಲ್ಲಿ ಪಾಲುಗೊಳ್ಳುವುದ ಕ್ಕಾಗಲೀ ಆಲೋಚಿಸುವುದಕ್ಕಾಗಲೀ ಅವನಿಗೆ ಸಮಯವಿಲ್ಲ. ಫ್ಯಾಕ್ಟರಿಗೆ ಹೋದರೆ ಚೆನ್ನಾಗಿ ದುಡಿಯುವುದು, ಮನೆಗೆ ಬಂದರೆ ಹೆಂಡತಿ ಮತ್ತು ಮಗುವಿನ ಬಗ್ಗೆ ಕ್ಷೇಮ ಚಿಂತನೆ—ಅದಕ್ಕಷ್ಟೆ ಅವನಿಗೆ ಸಮಯವಿರುವುದು. ಇದರಿಂದ ಅವನು ಸಂತೃಪ್ತ ನಾಗುತ್ತಿದ್ದ.

ಎರಡು ವರ್ಷಗಳು ಕಳೆದುವು. ಏಲಿ ಈಗ ಎರಡನೆ ಸಲದ ಗರ್ಭಿಣಿ. ಈ ಸಲವೂ ಅವಳು ಒಂದು ಗುಂಡುಮಗುವನ್ನು ಹೆತ್ತಳು. ಆ ಮಗುವಿಗೆ ರೋಕಿಯೆಂದು ಹೆಸರಿಟ್ಟರು.

ಮಕ್ಕಳ ಪೋಷಣೆ ಮತ್ತು ಗಂಡನ ಶುಶ್ರೂಷೆಯಲ್ಲಿ ಪೆಲಿ ಸಮಯ ಕಳೆಯು ತ್ತಿದ್ದಳು. ಪರ್ಕಿಗೆ ಅಷ್ಟೇನೂ ಶುಶ್ರೂಷೆ ಅಗತ್ಯವಿಲ್ಲ. ಆದರೆ ಸಂಜೆ ಮನೆಗೆ ಬಂದ ಮೇಲೆ ಅವನು ಏನಾದರೂ ಕೆಲಸ ಮಾಡುವುದು ಅವಳಿಗೆ ಇಷ್ಟವಿರಲಿಲ್ಲ. ವಾರ ಕ್ಕೊಮ್ಮೆ ಸಿಗುವ ಕೂಲಿಹಣವನ್ನು ತಂದು ಅವನು ಹೆಂಡತಿಯ ಕೈಯಲ್ಲಿ ಕೊಡುತ್ತಿದ್ದ. ಅದರಲ್ಲಿ ಪ್ರತಿ ಕಾಸನ್ನೂ ಹೇಗೆ ಸದುಪಯೋಗಪಡಿಸಿಕೊಳ್ಳಬೇಕೆಂಬುದು ಅವಳಿಗೆ ತಿಳಿದಿತ್ತು.

ಹೊರಜಗತ್ತಿನಲ್ಲಿ ಏನೆಲ್ಲಾ ಕೋಲಾಹಲಗಳು ನಡೆಯುತ್ತಿದ್ದುವು. ಸಾಂಘಿ ಕವೂ ರಾಜಕೀಯವೂ ಆದ ಆಂದೋಳನದ ತೆರೆಗಳು ಸುತ್ತುಮುತ್ತು ತಲೆಯೆತ್ತು ತ್ತಿದ್ದುವು. ಪರ್ಕಿ ಅದೊಂದನ್ನೂ ಗಮನಿಸುತ್ತಿರಲಿಲ್ಲ. ಗಮನಿಸಬೇಕೆಂದು ಅವನಿಗೆ ತೋಚುತ್ತಲೂ ಇರಲಿಲ್ಲ.

ಫ್ಯಾಕ್ಟರಿಯ ಒಳಗೂ ಹೊರಗೂ ಕೂಲಿಕಾರರು ಏನೇನೋ ಪಿಸುಮಾತುಗಳ ನ್ನಾಡುವುದು, ಗೊಣಗುಟ್ಟುವುದು ಅವನಿಗೆ ಕಂಡುಬರುತ್ತಿತ್ತು. ತಮ್ಮ ಸಂಬಳದ ಬಗ್ಗೆ, ಹಕ್ಕಿನ ಬಗ್ಗೆ ಅವರು ಮಾತಾಡುತ್ತಿದ್ದರು. ಪರ್ಕಿ ಅದೊಂದಕ್ಕೂ ಕಿವಿಗೊಡು ತ್ತಿರಲಿಲ್ಲ. ತನಗೆ ಸಿಕ್ಕುತ್ತಿದ್ದ ಸಂಬಳದಲ್ಲಿ ಅವನು ಸಂತೃಪ್ತ. ಹಕ್ಕುಗಳನ್ನು ಕೇಳುವ ಬಗ್ಗೆ ಅವನಿಗೆ ಯಾವ ಇಚ್ಛೆಯೂ ಇರಲಿಲ್ಲ.

ಕೆಲಸಗಾರರು ಫ್ಯಾಕ್ಟರಿಯ ಮೇಸ್ತ್ರಿಗಳನ್ನೂ ಗುಮಾಸ್ತರನ್ನೂ ಹಲವಾರು ಬಗೆಯಿಂದ ದೂಷಿಸುವುದನ್ನು ಕೇಳಿದರೆ, ಪರ್ಕಿಗೆ ಅದು ಮಹತ್ವದ ವಿಷಯವಲ್ಲ. ಆದರೆ ಪರೀದು ಸಾಹೇಬನ ವಿರೋಧವಾಗಿ ಯಾರಾದರೂ ಮಾತಾಡಿದರೆ, ಅವನು ಅದನ್ನು ಸಹಿಸುತ್ತಿರಲಿಲ್ಲ. ಅವನು ಹೇಳುತ್ತಿದ್ದ:

"ಮಾಲಿಕರು, ಮಾಲಿಕರೆಂದರೆ ಯಾರೆಂದು ಗೊತ್ತೋ ನಿಮಗೆ?...... ಮಾಲಿಕ ರೆಂದರೆ ದೇವರು. ನಮ್ಮನ್ನು ರಕ್ಷಿಸಲೂ ಶಿಕ್ಷಿಸಲೂ ಅಧಿಕಾರವಿದೆ ದೇವರಿಗೆ, ಗೊತ್ತೋ?"

ಪೆಲಿ ಮೂರನೇ ಮಗುವನ್ನು ಹೆತ್ತದ್ದು ಐದು ವರ್ಷಗಳ ಮೇಲೆ. ಅದು ಹೆಣ್ಣುಮಗುವಾಗಿತ್ತು. ಆ ಮಗುವಿಗೆ ಅನ್ನೆ ಎಂದು ಹೆಸರಿಟ್ಟರು.

ಅಂತೋಣಿಗೆ ಪರ್ಕಿಯ ಮುಖಛಾಯೆ. ಆದರೆ ಅವನು ಜಿಜ್ಞಾಸುವಾಗಿದ್ದ. ಅವನಿಗೆ ಎಲ್ಲಾ ವಿಷಯ ತಿಳಿಯಬೇಕಾಗಿದೆ. ಏನೊಂದು ಕಾಗದದ ಚೂರು ಸಿಕ್ಕಿದರೂ ಅದೆಲ್ಲವನ್ನೂ ಕಷ್ಟಪಟ್ಟು ಓದಬೇಕು. ಅವನ ನಡತೆ ಮತ್ತು ರೀತಿಯನ್ನು ನೋಡಿದರೆ ಯಾವಾಗಲೂ ಏನೋ ಆಲೋಚನಾಪರನಾದಂತೆ ಕಾಣುತ್ತಿದ್ದ. ಯಾರನ್ನು ಕಂಡರೂ ಸರಿ, ಏನಾದರೊಂದು ಪ್ರಶ್ನೆ ಕೇಳುತ್ತಿದ್ದ.

ಇದಕ್ಕೆ ತದ್ವಿರುದ್ಧ ರೋಕಿಯ ಸ್ವಭಾವ. ಅವನು ದೊಡ್ಡ ಜಗಳಗಂಟ. ಅಕ್ಕಪಕ್ಕದ ಮನೆಗಳಿಗೆಲ್ಲಾ ಅವನು ಹೋಗುತ್ತಿದ್ದ. ಅಲ್ಲಿರುವ ಮಕ್ಕಳೊಡನೆ ಜಗಳಾಡುತ್ತಿದ್ದ. ಶಾಲೆಯಲ್ಲೂ ಅವನ ವಿಷಯವಾಗಿ ದಿನಾ ಜಗಳಗಳು ನಡೆಯು

ತ್ತಲೇ ಇದ್ದುವು. ಏಲಿ ಕೆಲವೊಮ್ಮೆ ಮಕ್ಕಳಿಗೆ ಒಂದೆರಡು ಪೆಟ್ಟು ಕೊಡುತ್ತಿದ್ದಳು. ಆದರೆ ವರ್ಕಿ ಎಂದೂ ಮಕ್ಕಳಿಗೆ ಹೊಡೆದವನಲ್ಲ.

ಅನ್ನೆ ತಾಯಿಯನ್ನೇ ಹೋಲುತ್ತಿದ್ದಳು. ಆದರೆ ತಾಯಿಯಷ್ಟು ಚೆಲುವಾದ ಮೈಬಣ್ಣವಾಗಿರಲಿಲ್ಲ. ಅವಳು ಕಂದು ಮೈಬಣ್ಣ ಹೊಂದಿದ್ದಳು. ಅವಳ ಕಣ್ಣುಗಳು ತಾಯಿಯ ಕಣ್ಣುಗಳಂತೆ ಆಕರ್ಷಕವಾಗಿದ್ದುವು. ಆದರೆ ಆ ಕಣ್ಣುಗಳಲ್ಲಿ ಶೋಕದ ಕಪ್ಪು ಬರೆ ಎಳೆದಂತೆ ಕಾಣುತ್ತಿತ್ತು. ಪ್ರಾರ್ಥನೆಯಲ್ಲಿ ಅವಳಿಗೆ ಹೆಚ್ಚಿನ ಪ್ರೀತಿ. ಶಿಲುಬೆಗೇರಿಸಿದ ದೇವರ ಪಟವನ್ನು ಅವಳು ದಿನಾಲೂ ಬಹಳ ಸಮಯದ ವರೆಗೆ ನೋಡುತ್ತಾ ಕುಳಿತುಕೊಳ್ಳುತ್ತಿದ್ದಳು. ಆಗ ಅವಳ ಕಣ್ಣುಗಳಲ್ಲಿ ನೀರು ತುಂಬಿದಂತೆ ತೋರುತ್ತಿದ್ದುವು. ಕೆಲವೊಮ್ಮೆ ಅವಳು ಆಕಾಶದತ್ತ ನೋಡುತ್ತಾ ಕುಳಿತುಕೊಳ್ಳುತ್ತಿದ್ದಳು—ಕರುಣಾಜನಕವಾದ ಏನನ್ನೋ ನೋಡುವಂತೆ.

ಅಂತೋಣಿ ಐದನೇ ಕ್ಲಾಸಿನಲ್ಲೂ ರೋಕಿ ಮೂರನೇ ಕ್ಲಾಸಿನಲ್ಲೂ ಕಲಿಯುತ್ತಿದ್ದರು. ಆಗ ಅನ್ನೆ ಅಕ್ಷರಗಳನ್ನು ಕಲಿಯಲು ಪ್ರಾರಂಭಿಸಿದ್ದಳಷ್ಟೆ.

ವರ್ಕಿಯ ಕುಟುಂಬವೆಂಬ ನದಿಯು ವಿಕಾಸಗೊಂಡಿತು. ಅದರ ಆಳ ಹೆಚ್ಚಿತು. ಐದು ಹೊಟ್ಟೆಗಳ ಹಸಿವು ನೀಗಲು ಆಹಾರ ಬೇಕು, ಬಟ್ಟೆಬರೆಗಳು ಬೇಕು. ಅಂತೋಣಿ ಮತ್ತು ರೋಕಿಯರ ಶಾಲೆಯ ಖರ್ಚು ನೋಡಿಕೊಳ್ಳಬೇಕು. ವರ್ಕಿಗೆ ಸಿಗುವ ಕೂಲಿಯಿಂದ ಇವೆಲ್ಲವನ್ನೂ ನೋಡಿಕೊಳ್ಳಲು ಸಾಧ್ಯವಿಲ್ಲವಾಯಿತು. ಮಕ್ಕಳಿಗೆ ಸರಿಯಾಗಿ ಆಹಾರ ಕೊಡುವುದಕ್ಕಾಗಿ, ತಂದೆ ತಾಯಿಯರ ಆಹಾರದಲ್ಲಿ ಕಡಿತ ವುಂಟಾಯಿತು. ಇದರಿಂದ ಅವರ ಆರೋಗ್ಯವೂ ಕ್ಷಯಿಸತೊಡಗಿತು. ವರ್ಕಿಗೆ ತನ್ನ ಕೆಲಸದಲ್ಲಿ ಮೊದಲಿನ ಚುರುಕುತನ ಇಲ್ಲದಾಯಿತು. ಆದುದರಿಂದ ಅವನಿಗೆ ಸಿಕ್ಕುವ ಸಂಬಳವೂ ಕಡಿಮೆಯಾಯಿತು.

ಫ್ಯಾಕ್ಟರಿಯ ಕೆಲಸಗಾರರ ಪಿಸುಮಾತುಗಳು, ಗೊಣಗುವಿಕೆಗಳೂ ಅವರವರ ಮನೆಗಳಲ್ಲೂ ಪ್ರತಿಧ್ವನಿಸತೊಡಗಿದವು. ಆ ಪ್ರತಿಧ್ವನಿಗಳು ಚಾದಂಗಡಿ, ಬೀಡಿ ಅಂಗಡಿಗಳಿಗೂ ದಾರಿಯ ಸಂದುಗೊಂದುಗಳಿಗೂ ಹಬ್ಬಿದುವು. ಏನೋ ಒಂದು ಅಸಮಾಧಾನ. ಏನೆಂದು ಹೇಳಲು ಯಾರಿಗೂ ಗೊತ್ತಿಲ್ಲ. ಕೆಲವರು ಫ್ಯಾಕ್ಟರಿಯ ಮೇಸ್ತ್ರಿಗಳನ್ನು ಛೀಮಾರಿಗರೆದರು. ಕೆಲವರು ಗುಮಾಸ್ತರನ್ನು ಮ್ಯಾನೇಜರುಗಳನ್ನು ದೂಷಿಸಿದರು. ಕೆಲವರು ಮಾಲಿಕರನ್ನಷ್ಟೇ ಆಪಾದಿಸಿದರು. ರೋಗವೇನೆಂದು ರೋಗಿಗೇ ಗೊತ್ತಿಲ್ಲ. ಅದನ್ನು ಕಂಡುಹಿಡಿಯಲು ಒಬ್ಬ ವೈದ್ಯನೂ ಇಲ್ಲ. ರೋಗಿ ಕಣ್ಣಿಗೆ ಕಂಡವರನ್ನೆಲ್ಲಾ ದೂಷಿಸಲು ತೊಡಗಿದ.

ಔಸೇಪ್ಪನ ಇಬ್ಬರು ಮಕ್ಕಳೂ ಕೂಲಿ ಕೆಲಸದವರು—ಮತ್ತಾಯಿ ಮತ್ತು ಸೈಮನ್. ಅವರು ಮತ್ತು ವೇಲಾಯುಧನ್ ಆಪ್ತ ಗೆಳೆಯರು. ಕೆಲಸ ಮುಗಿಸಿ ಬಂದ ನಂತರ ಅವರು ಮೂವರೂ, ವೇಲಾಯುಧನ ಮನೆಯಂಗಳದಲ್ಲಿ ಕುಳಿತು ಏನೇನೋ ಮಾತನಾಡುತ್ತಿದ್ದರು. ಒಂದು ದಿನ ವೇಲಾಯುಧನ್ ಉಚ್ಚಸ್ವರದಲ್ಲಿ ಹೇಳಿದ:

"ಮಾಲಕರು ಕಂಪೆನಿ ಪ್ರಾರಂಭಿಸಿದ್ದು ನಮ್ಮನ್ನು ರಕ್ಷಿಸುವುದಕ್ಕೆಂದು ! ಆದರೆ ಅವರು ದಿನಹೋದಂತೆ ಬೆಳೆಯುತ್ತಿದ್ದಾರೆ, ನಾವು ಕ್ಷೀಣವಾಗುತ್ತಿದ್ದೇವೆ."

ಈ ಮಾತುಗಳನ್ನು ಕೇಳಿದ ವರ್ಕಿ ಹೇಳಿದ:

"ದೇವರು ಮೆಚ್ಚದ ಮಾತುಗಳನ್ನಾಡಬಾರದು ವೇಲಾಯುಧಾ !"

ಅಂತೋಣಿ ಮೆಲುದನಿಯಲ್ಲಿ ತಂದೆಗೆ ಹೇಳಿದ:

"ಅವನು ಏನೋ ಮಾತು ಹೇಳಿದನಾದರೆ, ನೀವೇಕೆ ಮಧ್ಯ ಪ್ರವೇಶಿಸಿ ಮಾತಾಡೋದು?"

"ಏನೆಂದೆ?" ವರ್ಕಿ ಮಗನೊಡನೆ ಕೇಳಿದ.

"ಅವನು ಹೇಳಿದ್ದು ಸರಿಯಲ್ಲವೆ ಎಂದು ನಾನು ಕೇಳಿದ್ದು" ಅಂತೋಣಿ ಹೇಳಿದ.

"ಅದು ಸರಿಯಲ್ಲ ಮಗು, ಮಾಲಿಕರೆಂದರೆ ದೇವರು."

ಅಂತೋಣಿ ಅದಕ್ಕೆ ಆಕ್ಷೇಪ ಸೂಚಕವಾಗಿ ತಲೆಯಾಡಿಸಿದ. ಆದರೆ ತಂದೆಯೊಡನೆ ವಾದಿಸಲು ಅವನು ತಯಾರಿರಲಿಲ್ಲ.

ಏಳನೇ ಕ್ಲಾಸು ಓದಿಯಾದೊಡನೆ ಅಂತೋಣಿ ತಂದೆಗೆ ಹೇಳಿದ:

"ಇನ್ನುಮೇಲೆ ನಾನೂ ಕೆಲಸಕ್ಕೆ ಹೋಗುತ್ತೇನೆ."

ವರ್ಕಿ ಅದಕ್ಕೊಪ್ಪಿದ. ತಾನು ಕೆಲಸಕ್ಕೆ ಹೋಗುತ್ತೇನೆಂದು ರೋಕಿಯೂ ಹೇಳಿದ. ವರ್ಕಿ ಅದಕ್ಕೂ ಒಪ್ಪಿದ. ಅವನು ಹೇಳಿದ:

"ಇನ್ನು ನನಗೆ ಸಾಧ್ಯವಿಲ್ಲ ಮಕ್ಕಳೆ, ಮೊದಲಿನಂತೆ ಕೆಲಸ ಮಾಡುವುದು."

"ಇನ್ನು ನೀವು ಕೆಲಸ ಮಾಡಿ ತಂದೆಗೆ ವಿಶ್ರಾಂತಿ ಕೊಡಬೇಕು." ಏಲಿ ಹೇಳಿದಳು.

ಅಂತೋಣಿ ಮತ್ತು ರೋಕಿಯರು ಫ್ಯಾಕ್ಟರಿಯಲ್ಲಿ ಕೆಲಸಕ್ಕೆ ಸೇರಿದರು. ವರ್ಕಿಯ ಮಕ್ಕಳೆಂದು ಅವರಿಗೆ ಅಲ್ಲಿ ಪ್ರತ್ಯೇಕ ಮನ್ನಣೆ ದೊರಕಿತು. ಅವರು ಅತಿ ಬೇಗನೆ ಕೆಲಸ ಕಲಿತರು. ಅವರಿಗೂ ಹಣ ಸಿಗಲು ಪ್ರಾರಂಭವಾಯಿತು. ಸಿಕ್ಕಿದ ಹಣವನ್ನು ಅವರು ತಂದು ತಾಯಿಯ ಕೈಯಲ್ಲಿ ಕೊಡುತ್ತಿದ್ದರು.

ಅನ್ನೆ ಶಾಲೆಯಲ್ಲಿ ಕಲಿಯುತ್ತಿದ್ದಳು. ಅವಳು ಮನೆಯಲ್ಲಿ ಎಲ್ಲರ ವಾತ್ಸಲ್ಯಕ್ಕೂ ಪಾತ್ರಳಾಗಿದ್ದಳು. ಒಳ್ಳೆಯ ಉಡುಪು ಹಾಕಿ ಅವಳನ್ನು ಶಾಲೆಗೆ ಕಳುಹಿಸುತ್ತಿದ್ದರು. ಅವಳ ಎಲ್ಲಾ ಆವಶ್ಯಕತೆಗಳಿಗೂ ಯಾವಾಗಲೂ ಪುರಸ್ಕಾರವಿತ್ತು. ಆ ಮನೆಯಲ್ಲಿ. ಅವರ ಸಂಬಳದ ದಿನ ತಂದೆ ಮತ್ತು ಅಣ್ಣಂದಿರು ಏನಾದರೂ ತರುತ್ತಿದ್ದರು. ಅವಳಿಗೆ ಕೊಡುವುದಕ್ಕೆ. ಆದರೆ ತನಗೆ ಏನೇ ಸಿಗಲಿ ಅವಳದನ್ನು ಎಲ್ಲರಿಗೂ ಹಂಚಿಕೊಡದೆ ತಿನ್ನುತ್ತಿರಲಿಲ್ಲ. ಅವಳ ಪ್ರಪಂಚವೆಂದರೆ, ಅವಳ ತಂದೆ, ತಾಯಿ, ಅಣ್ಣಂದಿರು ಮತ್ತು ಶಿಲುಬೆಗೇರಿಸಿದ ಏಸು—ಅನ್ನೆ ಶಾಲೆಗೆ ಹೋಗುತ್ತಿದ್ದಳು, ಕಲಿಯುತ್ತಲೂ ಇದ್ದಳು. ಆದರೆ ಅವಳಿಗೆ ಯಾರಲ್ಲೂ ಗೆಳೆತನವಿಲ್ಲ, ಒಡನಾಟವೂ ಇಲ್ಲ. ಒಂಟಿಯಾಗಿ ಶಾಲೆಗೆ ಹೋಗುತ್ತಿದ್ದಳು. ಒಬ್ಬಳೇ ಬರುತ್ತಿದ್ದಳು.

ಅಂತೋಣಿ, ರೋಕಿಯರಿಗೆ ಸಂಗಾತಿಗಳಿದ್ದರು—ನೆರೆಮನೆಗಳಲ್ಲೂ ಹೊರಗೂ.

ಬೆಳಗ್ಗೆ ತಂಗಳು ಉಂಡು ಅವರು ಫ್ಯಾಕ್ಟರಿಗೆ ಹೋಗುತ್ತಿದ್ದರು. ಮಧ್ಯಾಹ್ನ ಬಂದು ಗಂಜಿಯುಂಡು ಹೋಗುತ್ತಿದ್ದರು. ಮತ್ತೆ ಮನೆಗೆ ಬರುತ್ತಿದ್ದುದು ತುಂಬಾ ರಾತ್ರಿ ಯಾದಮೇಲೆ.

ಏಲಿ ಅವರನ್ನು ಕಾದು ಕುಳಿತುಕೊಳ್ಳುತ್ತಿದ್ದಳು, ಮಕ್ಕಳಿಗೆ ಊಟ ಬಡಿಸಲು. ರಾತ್ರಿ ಊಟ ಮುಗಿಸಿ ರೋಕಿ ಚಾವಡಿಯಲ್ಲಿ ಮಲಗಿ ನಿದ್ರಿಸುತ್ತಿದ್ದ. ಅಂತೋಣಿ ಚಿಮಿಣಿ ದೀಪವಿಟ್ಟು ಓದಲು ಪ್ರಾರಂಭಿಸುತ್ತಿದ್ದ. ಕೆಲವೊಮ್ಮೆ ವರ್ಕಿಗೆ ಎಚ್ಚರವಾಗಿ. ಅಂತೋಣಿ ಓದುತ್ತಿರುವುದನ್ನು ಕಂಡು ಕೇಳುತ್ತಿದ್ದ:

"ಹೀಗೆ ಓದಿ ನೀನು ಏನೋ ಗುಪ್ಪೆ ಹಾಕೋದು?"

ಅದಕ್ಕೆ ಅಂತೋಣಿ ಏನೂ ಹೇಳುತ್ತಿರಲಿಲ್ಲ. ಬೇರೆಯವರಿಂದ ಎರವಲಾಗಿ ತಂದ ದೈನಿಕ, ಮಾಸಿಕ ಪತ್ರಿಕೆಗಳನ್ನೂ ಇತರ ಪುಸ್ತಕಗಳನ್ನೂ ಅವನು ಓದು ತ್ತಿದ್ದ.

ಫ್ಯಾಕ್ಟರಿಯ ಮೇಲ್ವಿಚಾರಕರು ಕೂಲಿಯವರನ್ನು ಬೈಯುವುದು ಹೊಡೆಯು ವುದು ಆ ಕಾಲದಲ್ಲಿ ಒಂದು ಸಾಧಾರಣ ಸಂಗತಿಯಾಗಿತ್ತು. ಅವರು ಕೆಲವೊಮ್ಮೆ ತಮ್ಮ ಇಷ್ಟದಂತೆಯೂ ಇಲ್ಲವೇ ಫ್ಯಾಕ್ಟರಿಯ ಉದ್ಯೋಗಸ್ಥರ ಆದೇಶದ ಮೇರೆಗೂ ಬೈಯುವುದು, ಹೊಡೆಯುವುದು ಕಾಣುತ್ತಿತ್ತು.

ಒಂದು ದಿನ ಮಗ್ಗದಲ್ಲಿ ಹುರಿಯ ಚಾಪೆಯನ್ನು ಹೆಣೆಯುತ್ತಿದ್ದ ಸೈಮನ್‌ನ ಹಿಂದುಗಡೆಯಿಂದ ಬಂದ ಮೇಲ್ವಿಚಾರಕನು ಅವನ ಕೆನ್ನೆಗೆ ಬಲವಾಗಿ ಒಂದೇಟು ಬಿಗಿದ. ಅವನು ತಲೆತಿರುಗಿ ಬಿದ್ದ. ಇದು ಸಾಧಾರಣವಾಗಿ ಯಾವಾಗಲೂ ನಡೆಯುತ್ತಿದ್ದ ಸಂಗತಿಯಾದ್ದರಿಂದ ಯಾರೂ ಅವರವರ ಜಾಗ ಬಿಟ್ಟು ಏಳಲಿಲ್ಲ.

ಚಾಪೆ ಹೆಣೆಯುತ್ತಿದ್ದ ಮತ್ತಾಯಿ ಓಡಿಬಂದು ತಮ್ಮನನ್ನು ಆಧರಿಸಿ ಹಿಡಿದು ಕೊಂಡ. ಅವನು ಕೇಳಿದ:

"ಯಾಕೆ ಸ್ವಾಮಿ, ಇವನಿಗೆ ಹೊಡೆದದ್ದು?"

"ನಿನಗೆ ನಾನು ಹೊಡೆದೆನೊ ! ನೀನು ಹುಶಾರಾಗಿರು" ಮೇಲ್ವಿಚಾರಕ ಗರ್ಜಿಸಿದ.

"ನನಗಲ್ಲ ಸ್ವಾಮಿ, ಇವನಿಗೆ ಹೊಡೆದದ್ದೇಕೆ?" ಮತ್ತಾಯಿ ವಿನಯಪೂರ್ವಕ ವಾಗಿ ಕೇಳಿದ.

ಮತ್ತಾಯಿಯ ಕೆನ್ನೆಗೂ ಒಂದೇಟು ಬಿತ್ತು. ಅವನೂ ತಲೆಸುತ್ತಿ ಬಿದ್ದ.

ಅಂತೋಣಿ ಮತ್ತು ರೋಕಿಯರು ಹತ್ತಿರ ಹತ್ತಿರ ಎರಡು ಮಗ್ಗಗಳಲ್ಲಿ ನೇಯುತ್ತಿದ್ದರು. ಅಂತೋಣಿ ಮಗ್ಗದಿಂದ ಇಳಿದು ಮೇಲ್ವಿಚಾರಕನ ಬಳಿಗೆ ವೇಗವಾಗಿ ಹೋದ. ಹಿಂದಿನಿಂದ ರೋಕಿಯೂ ಹೋದ. ಅಂತೋಣಿಯ ಮುಖದಲ್ಲಿ ಸಿಟ್ಟು ಅಲೆಯಾಡಿತ್ತು. ಆದರೂ ಸಮಾಧಾನ ತಂದುಕೊಂಡು ಕೇಳಿದ:

"ನಾಯಿಗೆ ಹೊಡೆಯುವಂತೆ ಮನುಷ್ಯರನ್ನು ಏಕೆ ಹೊಡೆಯೋದು ಮೇಲ್ವಿಚಾರ ಕರೆ?"

"ಯಾರೋ ಮನುಷ್ಯರು? ಉಪಕಾರಸ್ಮರಣೆಯಿಲ್ಲದವರು ಮನುಷ್ಯರಾಗೋದು ಹೇಗೋ ಅದು?" ಮೇಲ್ವಿಚಾರಕ ಘರ್ಜಿಸಿದ.

ಮತ್ತಾಯಿ ಮತ್ತು ಸೈಮನರು ಪ್ರಜ್ಞೆ ತಿಳಿದೆದ್ದರು. ಮತ್ತಾಯಿ ಕೇಳಿದ:

"ನಾವೇನು ಅನ್ಯಾಯ ಮಾಡಿದ್ದೇವೆ?"

"ನೀವೆಲ್ಲಾ ತಿನ್ನುವ ಅನ್ನ, ಯಾರ ಅನ್ನವೆಂದು ಗೊತ್ತೊ ನಿನಗೆ?

"ಯಾರ ಅನ್ನ ಸ್ವಾಮಿ?" ಹಿಂದಿನಿಂದ ವೇಲಾಯುಧನ್ ಕೇಳಿದ.

"ಯಾರದ್ದೆಂದು ಗೊತ್ತಿಲ್ಲದೆಯೇ ಇಷ್ಟು ದಿನ ತಿಂದದ್ದು?"

"ಗೊತ್ತಿದ್ದೇ ತಿಂದದ್ದು. ನಾವು ತಿನ್ನೋದು, ನಾವು ಕೆಲಸ ಮಾಡಿದ ಅನ್ನವನ್ನು." ಅಂತೋಣಿ ಸ್ವಲ್ಪ ಗಟ್ಟಿಯಾಗಿಯೇ ಹೇಳಿದ.

"ನಿನಗೂ ಏನಾದರೂ ಮರ್ಯಾದೆ ಬೇಕಾಗಿದೆಯೋ? ಕೆಟ್ಟ ನಾಯಿ!" ಮೇಲ್ವಿಚಾರಕ ಘರ್ಜಿಸಿದ.

"ಇಷ್ಟು ಪ್ರಾಯವಾದರೂ ಮನುಷ್ಯರಲ್ಲೂ ನಾಯಿಯಲ್ಲೂ ವ್ಯತ್ಯಾಸ ಅರಿಯದ......" ಮೇಲ್ವಿಚಾರಕನ ಕೈ ಮೇಲೆ ಹೋಯಿತು. ಹಿಂದಿನಿಂದ ರೋಕಿ ಅವನ ಕೈಯನ್ನು ಬಲವಾಗಿ ಹಿಡಿದುಕೊಂಡ.

"ಏನು ಮೇಲ್ವಿಚಾರಕರೇ ಏನು?" ವರ್ಕಿ ಭೀತಿಯಿಂದ ಓಡಿಬಂದ. ರೋಕಿಯು ಹಿಡಿತವನ್ನು ಬಿಡಿಸಿದ. ಅವನು ಮೇಲ್ವಿಚಾರಕನೊಡನೆ ಕ್ಷಮೆ ಯಾಚಿಸಿದ:

"ಬುದ್ಧಿಯಿಲ್ಲದ ಹುಡುಗರು. ಮೇಲ್ವಿಚಾರಕರೇ—ಬುದ್ಧಿಯಿಲ್ಲದೋರು, ಕ್ಷಮಿಸಬೇಕು."

"ಎಲೋ, ಮಕ್ಕಳನ್ನು ಹೊಡೆದು ಬುದ್ಧಿ ಕಲಿಸಿ ಬೆಳೆಸದ್ದರಿಂದಲೇ ಅವರು ಕೆಟ್ಟವರಾದ್ದು!"

"ಕ್ಷಮಿಸಿರಿ ಮೇಲ್ವಿಚಾರಕರೆ ಕ್ಷಮಿಸಿರಿ!" ವರ್ಕಿ ದೀನನಾಗಿ ಬೇಡಿದ.

ಎಲ್ಲರೂ ಮೌನ ತಾಳಿದರು. ಅಂತೋಣಿ ಒಮ್ಮೆ ಹೂಂಗುಟ್ಟಿದ. ರೋಕಿ ತನ್ನ ಕೈಗಳನ್ನು ಹಿಚುಕಿಕೊಂಡ. ವೇಲಾಯುಧನ್ ಮೇಲ್ವಿಚಾರಕನನ್ನು ದುರುಗುಟ್ಟಿ ನೋಡಿದ. ಮತ್ತಾಯಿ, ಸೈಮನರು ನಿಟ್ಟುಸಿರುಬಿಟ್ಟರು. ಆ ಹೂಂಕಾರ ಮತ್ತು ನಿಟ್ಟುಸಿರುಗಳು ಎಲ್ಲಾ ಮಗ್ಗಗಳ ಎಡೆಗಳಲ್ಲೂ ಮಾರ್ದನಿಗೊಂಡವು.

ಅಂದು ಅಂತೋಣಿ ಮತ್ತು ರೋಕಿಯರು ಮನೆಗೆ ಬಂದಾಗ ಮಧ್ಯರಾತ್ರಿಯಾಗಿತ್ತು. ಏಲಿ, ವರ್ಕಿಯರು ನಿದ್ರಿಸದೆ ಮಕ್ಕಳ ಆಗಮನವನ್ನು ಕಾದುಕುಳಿತಿದ್ದರು. ಏಲಿ ವರ್ಕಿಯೊಡನೆ ಕೇಳಿಕೊಂಡಳು, ರಾತ್ರಿ ಊಟ ಆಗದೆ ಅವರಲ್ಲೇನೂ ಕೇಳಬಾರದೆಂದು.

ಊಟ ಮುಗಿಸಿ ರೋಕಿ ಎಂದಿನಂತೆ ಚಾಪೆ ಹಾಕಿ ಮಲಗಿದ. ಅಂತೋಣಿ ಎಂದಿನಂತೆ ಚಿಮಿಣಿ ದೀಪ ಇಟ್ಟು ಪತ್ರಿಕೆ ಓದಲು ತೊಡಗಿದ. ವರ್ಕಿ ಚಾವಡಿಗೆ ಹೋದ. ಮನೆಯ ಬಾಗಿಲು ಹಿಡಿದುಕೊಂಡು ಮೌನವಾಗಿ ನಿಂತ. ಏಲಿಯೂ ಇದ್ದಳು. ಅಂತೋಣಿ ತಂದೆತಾಯಿಯರನ್ನು ನೋಡಿ ಕೇಳಿದ:

"ನೀವೇಕೆ ಮಲಗಲಿಲ್ಲ?"

"ಹೇಗಪ್ಪಾ ಮಲಗೋದು? ಮಕ್ಕಳ ಬುದ್ಧಿ ಹಾಳಾದರೆ ತಂದೆತಾಯಿಯರಿಗೆ ನಿದ್ದೆ ಬಂದೀತಾ?" ವರ್ಕಿಯ ಶರೀರ ನಡುಗಿ ಮಾತುಗಳು ತಡವರಿಸತೊಡಗಿದುವು. ರೋಕಿ ಎದ್ದು ಕೇಳಿದ:

"ನೀವೇನು ಹೇಳೋದಪ್ಪಾ? ನಾವೇನು ಕೆಟ್ಟತನ ತೋರಿಸಿದ್ದೇವೆ?"

"ನೀನೇಕೆ ಮೇಲ್ವಿಚಾರಕನ ಕೈಯನ್ನು ಹಿಡಿದದ್ದು?"

"ಅಣ್ಣನನ್ನು ಹೊಡೆಯಲು ಕೈಯೆತ್ತಿದಾಗ, ನಾನು ನೋಡಿಕೊಂಡು ನಿಲ್ಲಬೇಕೊ?"

"ನಾನು ಹೊಡೆಯಲು ಬಂದಾಗಲೂ ನೀನು ಹಿಡಿದುಕೊಳ್ಳುವೆಯಾ?"

"ಅಪ್ಪಾ, ನೀವು ನನ್ನನ್ನು ಹೊಡೆಯಿರಿ. ನೀವು ಹೊಡೆದರೂ ಕೊಂದರೂ ಅವನು ಹಿಡಿಯನು" ಅಂತೋಣಿ ಎದ್ದು ಬಂದು ತಂದೆಯ ಮುಂದೆ ಬಾಗಿ ನಿಂತ.

ಏಲಿ ಆವೇಶಭರಿತಳಾಗಿ ಹೇಳಿದಳು:

"ನೀವು ಹೊಡೆಯಿರಿ ಕೊಲ್ಲಿರಿ. ಆದರೆ ಮೇಲ್ವಿಚಾರಕನೇಕೆ ನನ್ನ ಮಗನಿಗೆ ಹೊಡೆಯಬೇಕು?"

"ನಮ್ಮನ್ನು ಹೊಡೆದು ಕೊಲ್ಲಿರಿ ಅಪ್ಪ—ಕೊಂದುಬಿಡಿ, ನಾವು ಮಾತೆತ್ತುವುದಿಲ್ಲ!" ರೋಕಿ ತಂದೆಯ ಮುಂದೆ ಬಂದು ಬಗ್ಗಿ ನಿಂತ.

ಆಮೇಲೆ ಯಾರೂ ಮಾತನಾಡಲಿಲ್ಲ. ವರ್ಕಿ ಕಣ್ಣೀರು ಒರಸಿಕೊಂಡು ಒಳಗೆ ಹೋದ; ಹಿಂದಿನಿಂದ ಏಲಿಯೂ ಹೋದಳು.

## ( ೫ )

ವರೀದು ಸಾಹೇಬನ ಫ್ಯಾಕ್ಟರಿಯ ಮುಂಭಾಗದಲ್ಲಿ ಮೂರು ರಸ್ತೆಗಳು ಸಂಧಿಸುತ್ತವೆ. ತೆಂಕಣ ದಿಕ್ಕಿನಲ್ಲಿ, ಪಟ್ಟಣದ ಮಧ್ಯದಿಂದ ಬಡಗಣ ದಿಕ್ಕಿಗೆ ಬರುವ ಒಂದು ರಸ್ತೆಯು ಆ ಸಂಗಮ ಸ್ಥಳದಲ್ಲಿ ಎರಡಾಗಿ ಮುಂದುವರಿಯುವುದು. ಅವರಲ್ಲಿ ಒಂದು ಬಡಗು ಪಡುವಣ ದಿಕ್ಕಿಗೂ, ಮತ್ತೊಂದು ಬಡಗು ಮೂಡಣ ದಿಕ್ಕಿಗೂ ಹೋಗುವುದು. ಆ ಸಂಗಮ ಸ್ಥಳದಲ್ಲಿ ಚಹದಂಗಡಿಗಳು, ಬೀಡಾದಂಗಡಿಗಳು; ಜವುಳಿ, ಹಾಗೂ ದರ್ಜಿಯ ಅಂಗಡಿಗಳಿದ್ದುವು. ಅವುಗಳಲ್ಲೊಂದು ಕುಟ್ಟಪ್ಪನ ಚಹದಂಗಡಿ.

ಅವನ ಚಹದಂಗಡಿ ಇತರ ಚಹದಂಗಡಿಗಳಂತಲ್ಲ. ಚಹ ಕುಡಿದಾದ ಮೇಲೆ ವಾರ್ತಾಪತ್ರಿಕೆ ಓದುವ, ಸುದ್ದಿ ಸಮಾಚಾರ ಕುರಿತು ಮಾತಾಡುವ ಸೌಕರ್ಯ ಅಲ್ಲಿದೆ.

ಅವನು ಕೆಲವು ಮಾಸಿಕ ಮತ್ತು ವಾರಪತ್ರಿಕೆಗಳನ್ನು ತರಿಸುತ್ತಿದ್ದ. ಪುಸ್ತಕ ಓದುವುದರಲ್ಲಿಯೂ ಅಭಿರುಚಿಯುಳ್ಳವನಾದುದರಿಂದ ಸಣ್ಣ ಪ್ರಮಾಣದ ಗ್ರಂಥಸಂಗ್ರಹವೂ ಅವನಲ್ಲಿತ್ತು. ಚಾ ಕುಡಿಯಲು ಬರುವವರಿಗೆ ಓದಿನ ಅಭಿರುಚಿ ಹುಟ್ಟಿಸುವುದೆಂದರೆ ಅವನಿಗೆ ತುಂಬಾ ಇಷ್ಟ. ಈ ಕಾರಣದಿಂದ ಅವನ ವ್ಯಾಪಾರಕ್ಕೆ ನಷ್ಟವಾಗುವುದಿರಲಿ, ಗಣನೀಯ ಲಾಭವೇ ಉಂಟಾಗುತ್ತಿತ್ತು.

ಪರೀದು ಸಾಹೇಬನ ಫ್ಯಾಕ್ಟರಿಯ ಮತ್ತು ಸಮೀಪದ ಇತರ ಕೆಲವು ಫ್ಯಾಕ್ಟರಿಗಳ ಹಲವು ಕೆಲಸದವರು ಯಾವಾಗಲೂ ಕುಟ್ಟಪ್ಪನ ಚಹದಂಗಡಿಯಲ್ಲಿ ಚಾ ಕುಡಿಯಲು ಸೇರುತ್ತಿದ್ದರು. ಪಟ್ಟಣದ ಮಧ್ಯದಲ್ಲಿರುವ ಯೂರೋಪಿಯನ್ ಕಂಪೆನಿಗಳ ಕೆಲವು ಕೆಲಸದವರೂ ಸಹ ತಮ್ಮ ಕೆಲಸ ಮುಗಿಸಿ ಸಂಜೆ ಹೋಗುವ ದಾರಿಯಲ್ಲಿ ಅವನ ಚಹದಂಗಡಿಗೆ ಹೋಗಿ ಚಾ ಕುಡಿದು, ಪತ್ರಿಕೆ ಓದಿ, ದಿನದ ಸುದ್ದಿ ಮಾತನಾಡುತ್ತ ಕುಳಿತುಕೊಳ್ಳುತ್ತಿದ್ದರು. ಅಂತೋಣಿ, ರೋಕಿ, ವೇಲಾಯುಧನ್, ಮತ್ತಾಯಿ, ಸೈಮನ್, ಅಚ್ಚುತನ್, ಜೋಸೆಫ್ ಮೊದಲಾದವರೂ ಸಂಜೆ ಚಾ ಕುಡಿಯುವ ಮತ್ತು ಪತ್ರಿಕೆ ಓದುವ ಖಾಯಂ ಗಿರಾಕಿಗಳು. ಪತ್ರಿಕೆಗಳಲ್ಲಿ ಬಂದ ವಿಷಯಗಳ ಕುರಿತೂ, ಫ್ಯಾಕ್ಟರಿಗಳ ಕೂಲಿಕಾರರ ಕೆಲಸ ಕಾರ್ಯಗಳ ಕುರಿತೂ ಕೆಲವೊಮ್ಮೆ ಬಹಳ ರಾತ್ರಿಯ ವರೆಗೆ ಅವರು ಚರ್ಚೆ ನಡೆಸುತ್ತಿದ್ದರು. ಆ ವಾದವಿವಾದಗಳು ಒಮ್ಮೊಮ್ಮೆ, ಗುರುತರವಾದ ಗುಪ್ತಾಲೋಚನಾ ಸಭೆಗಳಾಗಿಯೂ ಪರಿವರ್ತನೆಗೊಳ್ಳುತ್ತಿದ್ದುವು.

ಶಂಕುವಿನ ತಾಯಿ ತೀರಿಕೊಂಡ ದಿನವೂ, ಭಾರ್ಗವಿಯನ್ನು ಫ್ಯಾಕ್ಟರಿಯೊಳಗೆ ಪ್ರವೇಶಿಸಲು ಬಿಡದ ದಿನವೂ ಅಲ್ಲಿ ಬಿರುಸಾದ ಗೂಢಾಲೋಚನೆಗಳು ನಡೆದಿದ್ದವು. ಅಂಗಡಿಯ ಮುಂಭಾಗದ ಬಾಗಿಲ ಹಲಗೆಗಳನ್ನು ಮುಚ್ಚಿದ್ದರೂ ಅವುಗಳ ಸಂದಿಯಲ್ಲಿ ಉರಿಯುತ್ತಿದ್ದ ದೀಪವನ್ನು ಕಾಣಬಹುದಾಗಿತ್ತು. ತನ್ನ ತಾಯಿ ತೀರಿಕೊಂಡ ದಿನ ಶಂಕುವನ್ನೂ ಅಚ್ಚುತನನ್ನೂ ಜೋಸೆಫನನ್ನೂ ಪೋಲೀಸರು ಹಿಡಿದುಕೊಂಡು ಹೋಗಿ ಚೆನ್ನಾಗಿ ಥಳಿಸಿ, ಕೇಸು ದಾಖಲು ಮಾಡದೆ ಮರುದಿನ ಬಿಟ್ಟುಬಿಟ್ಟಿದ್ದರು. ಅಂದು ಅರ್ಧರಾತ್ರಿ ವರೆಗೆ ಕುಟ್ಟಪ್ಪನ ಚಹದಂಗಡಿಯಲ್ಲಿ ದೀಪ ಉರಿಯುತ್ತಿತ್ತು. ಪಿಸು ಮಾತುಗಳು ಕೇಳುತ್ತಿದ್ದುವು. ಅಂತೋಣಿ ಮತ್ತು ಪದ್ಮನಾಭನರು ಮೌನವಾಗಿದ್ದರು. ಬೇರೆಯವರೆಲ್ಲಾ ಮಾತು ಹೊರಗೆ ಕೇಳಿಸದಂತೆ ಧ್ವನಿಯನ್ನು ತಗ್ಗಿಸಿ ಮಾತಾಡುತ್ತಿದ್ದರು. ರೋಕಿಯ ಧ್ವನಿ ಮಾತ್ರ ಆಗಾಗ ನಿಯಂತ್ರಣಾತೀತವಾಗಿ ಹೊರಬರುತ್ತಿತ್ತು. ಅವನಿಗೆ ಕ್ಷಮಾಯಾಚನೆ ಬೇಡ. ಅವನು ಧೈರ್ಯಶಾಲಿಯಾಗಿದ್ದ. ಅವನು ಹೇಳಿದ:

"ನಾವು ಹೆದರುವುದರಿಂದ ಅವರು ಉಬ್ಬಿ ನಮ್ಮ ತಲೆ ಮೆಟ್ಟುತ್ತಿದ್ದಾರೆ. ನಾವು ಹೆದರಬಾರದು. ತಾವು ಹೊಡೆದರೆ, ತಮಗೂ ಹೊಡೆತ ಬೀಳುತ್ತದೆ, ಎಂದು ತಿಳಿದರೆ ಅವರು ಮತ್ತೆ ಹೊಡೆಯಲಾರರು."

"ಅವರಿಗೆ ಹೊಡೆತ ಬೀಳುತ್ತದೆ ಎಂದು ತಿಳಿಯಪಡಿಸುವುದು ಹೇಗೆ?" ಪಪ್ಪನ್ ಕೇಳಿದ.

"ತಿಳಿಸೋದು ಹೇಗೊ? ಸಮಯ ನೋಡಿಕೊಂಡು ಕುತ್ತಿಗೆಗೆ ಬೀಳುವಂತೆ ಬಿಡಬೇಕು ಹೊಡೆತ. ಆಗ ನಾವೂ ಹೊಡೆಯುತ್ತೇವೆಯೆಂದು ಅವರಿಗೆ ಗೊತ್ತಾಗುತ್ತದೆ."

"ನಿನಗೆ ತಲೆ ಕೆಟ್ಟಿದೆ ರೋಕಿ" ವೇಲಾಯುಧನ್ ಹೇಳಿದ.

"ತಲೆ ಕೆಟ್ಟಿರುವುದು ನನಗಲ್ಲ, ಪೆಟ್ಟು ತಿನ್ನುವವರಿಗೆ. ಹೊಡೆತ ತಿಂದು ಸುಮ್ಮನೆ ಬೊಬ್ಬೆ ಹೊಡೆಯೋದು ಹುಚ್ಚಲ್ಲದೆ ಮತ್ತೇನು?"

ತಲೆ ತಗ್ಗಿಸಿ ಕುಳಿತುಕೊಂಡಿದ್ದ ಪದ್ಮನಾಭನ್ ಒಪ್ಪಿಗೆಯಿಲ್ಲದವನಂತೆ ತಲೆ ಯಾಡಿಸುತ್ತಾ ಹೇಳಿದ:

"ಸಾಧ್ಯವಾಗದು—ಅದೊಂದೂ ಸಾಧ್ಯವಾಗದು."

ಅಂತೋಣಿ ಮುಖವೆತ್ತಿ ಪದ್ಮನಾಭನನ್ನು ನೋಡಿದ. ಸಮಾಧಾನದಿಂದ ಹೇಳಿದ:

"ಹೊಡೆತಕ್ಕೆ ಬದಲು ಹೊಡೆತ ಕೊಟ್ಟರೆ......"

"ಕೊಟ್ಟರೇನು?" ರೋಕಿ ಕೇಳಿದ.

"ಖಡ್ಗದ ಅಲಗಿಗೆ ಕೊರಳೊಡ್ಡಿದಂತೆ ಆದೀತು."

"ನಾವು ಮತ್ತೇನು ಮಾಡಬೇಕು. ಒದೆತ ಹೊಡೆತಗಳನ್ನು ತಿನ್ನದಿರಬೇಕಿದ್ದರೆ?" ಸೈಮನ್ ಕೇಳಿದ.

ಪದ್ಮನಾಭನ್ ಸಮಾಧಾನದಿಂದ ಹೇಳಿದ:

"ಮಾಡಬೇಕಾದ್ದಾ? ಮಾಡಬೇಕಾದ್ದು, ನಾವು ಒಗ್ಗೂಡಬೇಕು. ಇದೇ ನಾವು ಮಾಡಬೇಕಾದ್ದು."

ಅಂತೋಣಿಯ ಧ್ವನಿ ಸ್ವಲ್ಪ ಗಟ್ಟಿಯಾಗಿ ಹೊರಟಿತು:

"ಅದು ಸರಿ; ಅದೇ ನಾವು ಮಾಡಬೇಕಾದ್ದು. ನಾರು, ಗಾಳಿಗೆ ಹಾರೀತು. ಆದರೆ, ಹುರಿಹಗ್ಗ ಗಾಳಿಯಲ್ಲಿ ಹಾರಲಾರದು."

ಪದ್ಮನಾಭನ್ ಹೇಳಿದ:

"ನಾವು ಈಗ ನಾರಿನಂತೆ ಇದ್ದೇವೆ. ನಾವು ಹುರಿಹಗ್ಗದಂತೆ ಒಂದಾಗಬೇಕು."

"ಹೇಗೆ ಒಂದಾಗೋದು?" ಸೈಮನ್ ಕೇಳಿದ. ಮತ್ತಾಯಿ ಅದಕ್ಕೆ ಉತ್ತರಿಸಿದ:

"ಒಂದಾಗೋದು ಹೇಗೆಂದು ಹೇಳಿದರೆ, ನಮ್ಮೆಲ್ಲಾ ಗುಂಪುಗಳು ಒಂದಾಗಬೇಕು."

"ನಾರು ತನ್ನಿಂದ ತಾನೇ ಹುರಿಹಗ್ಗವಾಗುವುದು ಸಾಧ್ಯವೇ? ಎಂದು ನಾನು ಕೇಳೋದು" ವೇಲಾಯುಧನ್ ಹೇಳಿದ. ಪದ್ಮನಾಭನ್ ಗೊಣಗಿದ:

"ಒಂದಾಗಿಸಬೇಕು, ಅದು ಅವಶ್ಯ. ಈಗ ನಾರೆಲ್ಲಾ ಹಬ್ಬಿ ಹರಡಿಕೊಂಡಿವೆ. ಅವೆಲ್ಲವನ್ನೂ ಒಟ್ಟುಗೂಡಿಸಿ ಹುರಿ ಮಾಡಬೇಕು."

"ಯಾರು?" ಪ್ರಧಾನವಾದ ಪ್ರಶ್ನೆಯಾಗಿತ್ತು ಇದು. ಕೇಳಿದ್ದು ರೋಕಿ.

ಯಾರೂ ಉತ್ತರಿಸಲಿಲ್ಲ. ಎಲ್ಲರೂ ತಲೆತಗ್ಗಿಸಿ ಕುಳಿತರಷ್ಟೆ. ಬೆಕ್ಕಿನ ಕೊರಳಿಗೆ ಗಂಟೆ ಕಟ್ಟಬೇಕು. ಯಾರು?

ಒಂದಾಗಬೇಕು;

ಒಂದಾಗಿಸಬೇಕು;

ಯಾರು?

ಆ ನಿಶ್ಶಬ್ದ ವಾತಾವರಣದಲ್ಲಿ ಆ ಪ್ರಶ್ನೆಗಳು ಎದ್ದು ನಿಂತವು. ಆದರೆ ಅಂಗಡಿ ಬಾಗಿಲಿನ ಹಲಗೆಗಳ ಸಂದಿಗಳ ಮೂಲಕ ಆ ಪ್ರಶ್ನೆಗಳು ಹೊರಗೆ ಹೋದವು.

"ಒಂದಾಗಬೇಕು, ನಾವೆಲ್ಲಾ ಒಂದಾಗಬೇಕು." ಅದೊಂದು ಮುದ್ರಾವಾಕ್ಯವಾಯಿತು. ಆ ವಾಕ್ಯ ಮರುದಿನ ಫ್ಯಾಕ್ಟರಿಗಳಲ್ಲಿ ಪಿಸು–ಪಿಸು ಶಬ್ದವಾಗಿ ರೂಪ ತಾಳಿತು. ಆ ಶಬ್ದವು ಚಹದಂಗಡಿಗಳಲ್ಲೂ ಬೀಡಾದಂಗಡಿಗಳಲ್ಲೂ ಜನರು ಬಂದು ಸೇರುವ ದಾರಿಗಳ ಸಂಗಮಗಳಲ್ಲೂ ಪ್ರತಿಧ್ವನಿಸಿತು. ಆ ಪ್ರಾರ್ಥನೆ ಮಾಲಿಕರ ಕಿವಿಗಳ ವರೆಗೂ ಮುಟ್ಟಿತು.

ಮತ್ತೂ ಕೆಲವು ದಿನಗಳು ಉರುಳಿದವು. ಒಂದು ದಿನ ಮುಂಜಾನೆ ಅಂತೋಣಿ, ರೋಕಿ, ವೇಲಾಯುಧನ್, ಮುತ್ತಾಯಿ, ಸೈಮನ್ ಎಲ್ಲರೂ ಕೂಡಿ, ಒಂದಾಗುವುದರ ಬಗ್ಗೆ ಆಲೋಚಿಸಿಕೊಂಡು ಫ್ಯಾಕ್ಟರಿಗೆ ಹೋದರು. ಅಪರಿಚಿತರಂತೆ ಕೂಲಿಯಾಳುಗಳು ಆಫೀಸಿನ ಜಗಲಿಯಲ್ಲಿ ಗುಂಪುಗೂಡಿದ್ದರು. ಅವರು ಅಲ್ಲಿಗೆ ಹೋದರು.

ಜಗಲಿಯಲ್ಲಿ ಒಂದು ನೋಟೀಸ್ ಬೋರ್ಡು ಇತ್ತು. ಇಂಗ್ಲಿಷಿನಲ್ಲಿ ಟೈಪ್ ಮಾಡಿದ ಒಂದು ನೋಟೀಸನ್ನು ಅದರಲ್ಲಿ ಹಾಕಿತ್ತು. ರೋಕಿ ಕೇಳಿದ:

"ಅದು ಏನು?"

"ಆ!"

"ಏನದು ಆ ಕಾಗದದಲ್ಲಿ ಬರೆದಿರೋದು?"

"ಆ!"

"ನೀವೆಲ್ಲಾ ಯಾಕ್ರೋ ಅಲ್ಲಿ ಗುಂಪುಗೂಡಿ ನಿಂತಿರೋದು?" ಎಂದು ಘರ್ಜಿಸಿಕೊಂಡು ಮೇಲ್ವಿಚಾರಕ ಬಂದ.

"ಆ ಕಾಗದ ಏನದು ಮೇಲ್ವಿಚಾರಕರೆ?" ವೇಲಾಯುಧನ್ ಕೇಳಿದ.

"ಕಂಪೆನಿ ಮುಚ್ಚಲಾಗುತ್ತದೆ."

"ಯಾಕೆ ಈಗ ಕಂಪೆನಿ ಮುಚ್ಚೋದು?" ಮುತ್ತಾಯಿ ಕೇಳಿದ.

"ಚಿಕ್ಕ ಮಾಲಿಕರಿಗೆ ನಷ್ಟ ಉಂಟಾಗುತ್ತದೆ ಅದಕ್ಕೆ."

"ದೊಡ್ಡ ಮಾಲಿಕರಿಗೆ ಲಾಭವಾಗುತ್ತಿದ್ದುದು, ಚಿಕ್ಕ ಮಾಲಿಕರಿಗೆ ನಷ್ಟವಾಗೋದು ಹೇಗೆ?"

"ಹೇಗೆ, ಏಕೆ ಎಂದು ಕೇಳಲು ನೀನು ಯಾರೊ?"

"ಇವರನ್ನು ಕೇಳಿದರೆ ಏನೊಂದೂ ಗೊತ್ತಾಗುವುದಿಲ್ಲ, ಮುತ್ತಾಯಿ. ನಾವು ಚಿಕ್ಕ ಮಾಲಿಕರನ್ನೇ ಕೇಳುವ" ವೇಲಾಯುಧನ್ ಹೇಳಿದ.

"ಉಂ! ಕೇಳಲು ಹೋಗಿರಿ! ಸಿಕ್ಕೀತು!...... ಕೂಲಿಯಾಳುಗಳಾರೂ

ತಮ್ಮ ಸಂಕಟಗಳನ್ನು ಚಿಕ್ಕ ಮಾಲಿಕರಲ್ಲಿ ಹೇಳಿಕೊಳ್ಳಬಾರದೆಂದೇ ಇದರಲ್ಲಿ ಬರೆದಿರೋದು."

"ನಾವು ಮತ್ತೆ ಯಾರಲ್ಲಿ ನಮ್ಮ ಸಂಕಟಗಳನ್ನು ಹೇಳಿಕೊಳ್ಳಬೇಕು?" ವೃದ್ಧನಾದ ಶೌರಿ ಕೇಳಿದ.

"ಮಾಲಿಕರಲ್ಲಿ ಹೇಳುವ ಅವಶ್ಯವಿಲ್ಲ. ಹೇಳೋದಕ್ಕೇನಾದರೂ ಇದ್ದರೆ ನನ್ನಲ್ಲಿ ಹೇಳಬೇಕು."

"ಕೋಳಿಗಳನ್ನು ಸಾಕುವುದಕ್ಕೆ ನರಿಯ ಕೈಯಲ್ಲಿ ಕೊಟ್ಟಂತಿದೆ" ರೋಕಿ ಹೇಳಿದ.

ಮೇಲ್ವಿಚಾರಕ ರೋಕಿಯನ್ನೊಮ್ಮೆ ದುರುಗುಟ್ಟಿ ನೋಡಿದ. ಅಂತೋಣಿ ಉದಾಸೀನ ಭಾವದಿಂದ ಕೇಳಿದ:

"ಕಂಪೆನಿ ಮುಚ್ಚುವುದೆಂದು ಅಂತಿಮವಾಗಿ ತೀರ್ಮಾನಿಸಿದ್ದೀರಾ?"

"ಅಲ್ಲದೆ ಮತ್ತೆ ಹೇಗೆಂದು? ನಷ್ಟ ಮಾಡಿಕೊಂಡು ಕಂಪೆನಿ ನಡೆಸಲು ಸಾಧ್ಯವಾದೀತೋ?"

"ನಷ್ಟ, ನಷ್ಟವೆಂದು ಸುಮ್ಮನೆ ಹೇಳಿದರೆ ಸಾಲದು" ರೋಕಿ ಕೇಳಿದ.

"ಎಲಾ! ನಷ್ಟ ಲಾಭವೆಂದು ಹೇಳಬೇಕಾದ್ದು ಯಾರು, ನೀನೇನೊ?"

"ಹೇಳಬೇಕಾದ್ದು......" ಮುಂದೆ ರೋಕಿಗೆ ಉತ್ತರ ಬರಲಿಲ್ಲ.

"ಹೇಳಬೇಕಾದ್ದು ಮಾಲಿಕರೊ?" ಅಂತೋಣಿ ನಡುವೆ ಬಾಯಿ ಹಾಕಿದ.

"ಇಲ್ಲ, ನೀನೊ?"

"ಹಗಲನ್ನು ರಾತ್ರಿಯೆಂದು ಮಾಲಿಕರು ಹೇಳಿದರೆ ಅದನ್ನು ಒಪ್ಪಲು ಸಾಧ್ಯವಿಲ್ಲ."

"ನೀನು ಬಿಡು ನಿನ್ನ ಅಪ್ಪ ಒಪ್ಪಲಿಕ್ಕಿಲ್ಲವೊ—ನಿನ್ನಪ್ಪ!...... ಬುದ್ಧಿ ಕಲಿಯಬೇಕೊ ನೀವು ಇನ್ನೂ ಬುದ್ಧಿ ಕಲಿಯಬೇಕು."

"ನಾನು ಬುದ್ಧಿ ಕೆಟ್ಟು ಮಾತಾಡಿದೆನೇನು ಮೇಲ್ವಿಚಾರಕರೆ?

"ಸೂರ್ಯನುದಿಸಬೇಕೋ ಬೇಡವೋ ಎಂದು ತೀರ್ಮಾನಿಸೋದು ಯಾರೆಂದು ಗೊತ್ತೊ ನಿನಗೆ?"

"ಯಾರು?"

"ಅದಕ್ಕೇ ಹೇಳೋದು ಸ್ವಲ್ಪ ವಿಚಾರ ಕಲಿಯಬೇಕೆಂದು...... ಅದನ್ನು ದೇವರು ನಿಶ್ಚಯಿಸೋದು. ಅದೇ ರೀತಿ ಕಂಪೆನಿಯ ಲಾಭನಷ್ಟಗಳನ್ನು ತೀರ್ಮಾನಿಸೋದು ಅದರ ಮಾಲಿಕ."

ಎಲ್ಲರೂ ಮೌನದಿಂದ ನಿಂತರು. ಅಂತೋಣಿಯ ಮುಖದಲ್ಲಿ ಹಾಸ್ಯಸೂಚಕವಾದ ಮಂದಹಾಸ ಕಂಡಿತು. ಮೇಲ್ವಿಚಾರಕ ವಿಜಯೋನ್ಮುಖನಾಗಿ ಎಲ್ಲರ ಕಡೆಗೂ ನೋಡುತ್ತಾ ಹೇಳಿದ:

"ಮಾಲಿಕ, ಮಾಲಿಕ ಎಂದರೆ ಯಾರು?—ಅದು ದೇವರು. ದೇವರು ಹೇಳೋ

ದನ್ನು ಕೇಳಿ ನಡೆದರೆ ನಿಮಗೆ ಒಳ್ಳೆಯದು" ಒಬ್ಬ ಉಪದೇಶಕನ ರೀತಿಯಲ್ಲಿ ಮೇಲ್ವಿಚಾರಕ ಮುಂದುವರಿಸಿದ:

"ಕಂಪೆನಿಯಲ್ಲಿ ನಷ್ಟವಾಗುವುದರಿಂದ ಮಾಲಿಕರು ಅದನ್ನು ಮುಚ್ಚಲು ಹೋಗೋದು. ಮುಚ್ಚಿದರೆ ನೀವು ಉಪವಾಸ! ಮಾಲಿಕರಿಗೆ ಜೀವಿಸಲು ಬೇಕಾದಷ್ಟು ಆಸ್ತಿಯಿದೆ. ಆದರೆ ನೀವು ನಿಮ್ಮ ಹೆಂಡಿರು ಮಕ್ಕಳು ಹೊಟ್ಟೆಗಿಲ್ಲದೆ ಸತ್ತೀರಿ." ಯಾರಾದರೂ ಏನನ್ನಾದರೂ ಕೇಳಬಹುದೆಂದು ಉದ್ದೇಶಿಸಿಯೋ ಎಂಬಂತೆ ಸ್ವಲ್ಪ ಸಮಯ ಮೌನವಾಗಿದ್ದು ಅವನು ಮತ್ತೆ ಮಾತು ಪ್ರಾರಂಭಿಸಿದ:

"ಮಾಲಿಕರ ನಷ್ಟವನ್ನು ತುಂಬಿಕೊಟ್ಟರೆ ಕಂಪೆನಿಯನ್ನು ಮುಚ್ಚಲಾರರೆಂದು ತೋರುತ್ತದೆ. ನಷ್ಟ ಪರಿಹರಿಸಲು ನೀವು ಒಪ್ಪಿಕೊಂಡರೆ, ನಾನು ಹೋಗಿ ಮಾಲಿಕರ ಕಾಲು ಹಿಡಿದಾದರೂ ಹೇಳುವೆನು ಮುಚ್ಚಬಾರದೆಂದು." ಮತ್ತೂ ಪ್ರಶ್ನೆಗಳು ಬರಬಹುದೆಂದು ಗ್ರಹಿಸಿ ಮಾತು ನಿಲ್ಲಿಸಿ, ಆಮೇಲೆ ಮುಂದುವರಿಸಿದ:

"ನೀವೇಕೆ ಏನೂ ಮಾತಾಡೋದಿಲ್ಲ? ನಷ್ಟ ಪರಿಹರಿಸುವ ದಾರಿಯೇನೆಂದು ನೀವೇಕೆ ಕೇಳೋಲ್ಲ?"

"ಮೇಲ್ವಿಚಾರಕರೆ, ನೀವೇ ಹೇಳಿಬಿಡಿ" ವೇಲಾಯುಧನ್ ಹೇಳಿದ.

"ಹಾಗಿದ್ದರೆ ನಾನೇ ಹೇಳುತ್ತೇನೆ. ರೂಪಾಯಿಗೆ ಎಂಟಾಣೆಯಂತೆ ಕೂಲಿ ಕಡಿಮೆ ಮಾಡಬೇಕು. ಸಂಬಳ ಕೊಟ್ರೇ ಮಾಲಿಕ್ರು ದಿವಾಳಿಯಾದದ್ದು...... ನೀವೇನೂ ಮಾತಾಡೋದಿಲ್ಲ?...... ಕೂಲಿ ಕಡಿಮೆಯಾದ್ರೆ ನಿಮ್ಮದೇನೂ ಆಕ್ಷೇಪ ವಿಲ್ಲವಲ್ಲಾ?"

ನಗುವನ್ನು ತಡೆದುಕೊಂಡು ಅಂತೋಣಿ ಹೇಳಿದ:

"ಕಂಪೆನಿ ಮುಚ್ಚಿಬಿಡಿ ಮೇಲ್ವಿಚಾರಕರೆ."

"ಮುಚ್ಚಿದರೆ ಮಾಲಿಕ್ರಿಗೇನೂ ನಷ್ಟವಿಲ್ಲ. ಹೊಟ್ಟೆಗಿಲ್ಲದೆ ಸಾಯೋದು ನೀವು."

"ನಾವು ಸತ್ತರೂ ಚಿಂತೆಯಿಲ್ಲ, ನೀವು ಕಂಪೆನಿ ಮುಚ್ಚಿಬಿಡಿ."

ಮೇಲ್ವಿಚಾರಕನ ಮುಖ ಬಾಡಿತು. ಅಂತೋಣಿ ಹಾಸ್ಯಸೂಚಕವಾಗಿ ನಗುತ್ತಾ ಫ್ಯಾಕ್ಟರಿಯೊಳಗೆ ಹೋದ, ಎಲ್ಲರೂ ಹಿಂಬಾಲಿಸಿದರು.

ಅಂದು ಅರ್ಧರಾತ್ರಿಯಾದರೂ ವರ್ಕಿ ಪತಿಯರು ನಿದ್ರಿಸಲಿಲ್ಲ. ಅವರು ಚಿಂತಾಮಗ್ನರಾಗಿ ದೀಪದ ಮುಂದೆ ಕುಳಿತಿದ್ದರು. ಅನ್ನೆ ತನ್ನ ತಾಯಿಯ ಪಕ್ಕದಲ್ಲಿ ಮುದುರಿಕೊಂಡು ಮಲಗಿ ನಿದ್ರಿಸಿದ್ದಳು. ಕಂಪೆನಿ ಮುಚ್ಚುತ್ತೇ? ಕೂಲಿ ಕಡಿಮೆ ಯಾದೀತೇ?—ಇದೇ ಅವರ ಚಿಂತೆಗೆ ಕಾರಣ. ಅದು ಇದು ಎಂದು ಅವರು ಹಲವು ವಿಷಯ ಮಾತನಾಡಿಕೊಂಡರು. ಕೊನೆಗೆ ಏಲಿ ಹೇಳಿದಳು:

"ಕಂಪೆನಿ ಮುಚ್ಚುತ್ತೇವೆಂದು ಹೇಳೋದು ಕೂಲಿ ಕಡಿಮೆ ಮಾಡಲು ಹೂಡಿದ ತಂತ್ರವೆಂದು ನನಗನಿಸುತ್ತದೆ."

"ಬಹುಶಃ ಹಾಗೇ ಇರಬಹುದು" ವರ್ಕಿ ಒಪ್ಪಿದ. ಸ್ವಲ್ಪ ಆಲೋಚಿಸಿ ಅವನು ಹೇಳಿದ:

"ದೊಡ್ಡ ಮಾಲಿಕರು ಇದೆಲ್ಲಾ ತಿಳಿದಿರಲಿಕ್ಕಿಲ್ಲ."

"ನಿಮಗೆ ಭ್ರಮೆ. ತಂದೆಯೂ ಮಗನೂ ಒಂದಾಗಿ ಆಡುತ್ತಿರುವ ಆಟ ಇದು."

"ಅಯ್ಯೋ, ಹಾಗೆ ಹೇಳಬಾರದು. ದೊಡ್ಡ ಮಾಲಿಕರೆಂದರೆ ದೇವರು."

"ಯಾರು ದೇವರು?" ಎಂದು ಹೇಳುತ್ತಾ ವೃದ್ಧ ಔಸೇಪ್ಪ್ ಹೊಸ್ತಿಲು ದಾಟಿ ಒಳಗೆ ಬಂದ. ಅವನು ಚಾವಡಿಯಲ್ಲಿ ಕುಳಿತುಕೊಂಡು ಹೇಳಿದ:

"ನಿಮಗೆ ದೇವರೂ ಗೊತ್ತಿಲ್ಲ, ಪಿಶಾಚಿಯೂ ಗೊತ್ತಿಲ್ಲ."

"ಅದೇನು ಔಸೇಪ್ಪಣ್ಣ ಹಾಗೆ ಹೇಳೋದು?"

"ಅದೇನೆಂದರೆ—ಅದು ಹೀಗೆ...... ನನಗೆ ಚಿಕ್ಕಂದಿನಿಂದಲೇ ಗೊತ್ತು ದೊಡ್ಡ ಮಾಲಿಕರು ಎಂತಹವರೆಂಬುದು. ಅವರ ಸಕ್ಕರೆಯಂತಹ ಮಾತು ಕೇಳಿದರೆ ಗ್ರಹಿಸಬೇಕು, ದೇವರ ಅಪ್ಪನೆಂದು...... ವೀಳ್ಯ ಹಾಕಲು ಏನಾದರೂ ಇದ್ದರೆ ಸ್ವಲ್ಪ ಇಲ್ಲಿ ಕೊಡು."

ಏಲಿ ವೀಳ್ಯದ ಪೆಟ್ಟಿಗೆಯನ್ನು ಅವನತ್ತ ದೂಡಿದಳು. ಔಸೇಪ್ಪ್ ತಾಂಬೂಲ ಹಾಕುತ್ತಾ ಹೇಳಿದ:

"ನಿಮಗೆ ಗೊತ್ತೊ ದೊಡ್ಡ ಮಾಲಿಕ ಹೇಗೆ ಕಂಪೆನಿ ಪ್ರಾರಂಭಿಸಿದ್ದೆಂದು?...... ಅವನು ಕಂಪೆನಿ ಪ್ರಾರಂಭಿಸಿದಾಗಿನಿಂದ ನಾನಲ್ಲಿ ಕೆಲಸಮಾಡಿದ್ದೇನೆ. ಅವನ ತಂದೆಗೆ ಒಂದು ಚಿಟ್ ಫಂಡು ಬಂತು. ಅದರಲ್ಲಿ ಅವನಿಗೆ ನಾನೂರೋ ಐನೂರೋ ರೂಪಾಯಿ ಸಿಕ್ಕಿತು. ಆ ಹಣದಿಂದ ಕಂಪೆನಿ ಶುರುಮಾಡಿದ್ದ. ಹಸುವನ್ನು ಕಟ್ಟುವ ದೊಡ್ಡಿಯಂತಹ ಒಂದು ಮನೆಯನ್ನೂ ಕಟ್ಟಿ, ನಾಲ್ಕು ಮಗ್ಗಗಳನ್ನು ಇಟ್ಟುಕೊಂಡು ಅವನು ಕಂಪೆನಿ ಪ್ರಾರಂಭಿಸಿದ್ದ. ಈಗ ತಿಂಗಳ ಮೊದಲನೇ ದಿನದಂದು ತೆಂಗಿನಕಾಯಿ ಕೀಳಿಸಲು ಪ್ರಾರಂಭಿಸಿದರೆ ಮೂವತ್ತನೇ ದಿನದಂದು ಮುಗಿಯೋದು. ಅಷ್ಟು ದೊಡ್ಡ ತೆಂಗಿನ ತೋಟ ಅವನಿಗಿದೆ. ಮಾಳಿಗೆಮನೆಯಲ್ಲಿ ವಾಸ. ಕಾರಿನಲ್ಲಿ ಪಯಣ. ಇವೆಲ್ಲಾ ಎಲ್ಲಿಂದ ಬಂದುವು?"

ವರ್ಕಿ ಏಲಿಯರು ಕಣ್ಣುಬಿಟ್ಟು ನೋಡುತ್ತಿದ್ದರು. ಔಸೇಪ್ಪ್ ಮಾತು ಮುಂದುವರಿಸಿದ:

"ಆದರೂ ಈಗ ಹೇಳೋದು ಕಂಪೆನಿಗೆ ನಷ್ಟವಾಗಿದೆ, ಅದಕ್ಕಾಗಿ ಕೆಲಸದವರಿಗೆ ಕೂಲಿ ಕಡಿಮೆ ಮಾಡಬೇಕಾಗಿದೆ, ಇಲ್ಲವಾದರೆ ಫ್ಯಾಕ್ಟರಿಯನ್ನು ಮುಚ್ಚಬೇಕಾಗಿದೆಯೆಂದು."

ಅಂತೋಣಿ ರೋಕಿಯರು ಹೊಸ್ತಿಲು ದಾಟಿ ಬಂದರು. ಔಸೇಪ್ಪ್ ಕೇಳಿದ:

"ಮತ್ತಾಯಿ ಮತ್ತು ಸೈಮನರು ಅಲ್ಲಿಗೆ ಬಂದಿದ್ದರೊ?"

"ಹುಂ. ನಾವು ಒಟ್ಟಾಗಿಯೇ ಬಂದುದು" ಅಂತೋಣಿ ಉತ್ತರಿಸಿದ.

"ನಾನಾಚೆ ಹೋಗಲೇ?" ಔಸೇಪ್ಪ್ ಎದ್ದ. ಅವನು ಕೇಳಿದ:

"ಕಂಪೆನಿ ಮುಚ್ಚುವ ವಿಚಾರ ಏನಾಯ್ತು?"

"ಕಂಪೆನಿ ಮುಚ್ಚಲಿಕ್ಕಿಲ್ಲ. ಕೂಲಿ ಕಡಿಮೆ ಮಾಡಲು ಹೂಡಿದ ತಂತ್ರ ಅದು."

"ಅದೇ ನಾನು ಹೇಳಿದ್ದು" ಏಲಿ ಗೆಲುವು ಹೊಂದಿದವಳಾಗಿ ಹೇಳಿದಳು.

"ಕೂಲಿ ಕಡಿಮೆ ಮಾಡಬಹುದೆಂದು ನೀವು ಒಪ್ಪಿದಿರಾ?" ಔಸೇಪ್ಪ್ ಕೇಳಿದ.

"ಇಲ್ಲ, ಒಪ್ಪಲಾರೆವು."

"ಕಡಿಮೆ ಮಾಡಿದರೊ?"

"ಕಡಿಮೆ ಮಾಡರು—ಎಲ್ಲರೂ ಒಂದಾದರೆ" ಅಂತೋಣಿ ದೃಢ ಸ್ವರದಲ್ಲಿ ಹೇಳಿದ.

"ಒಂದಾಗಲು ಸಾಧ್ಯವಾದೀತೋ?"

"ಒಂದಾಗಿ ನಿಲ್ಲಬೇಕು! ಒಂದಾಗಿ ನಿಲ್ಲಿಸಬೇಕು!" ಅಂತೋಣಿಯ ಧ್ವನಿ ಗಟ್ಟಿಯಾಗಿ ಕೇಳಿಸಿತು.

"ಹಾಂ. ಅದು ಸರಿ."

ಔಸೇಪ್ಪ್ ಮನೆಗೆ ಹಿಂತಿರುಗಿದ.

( ೬ )

ಕಣ್ಣೀರಿಡುತ್ತ, ಏಲಿ ವರ್ಕಿಯ ಎದುರು ಓಡಿದಳು. ಅವಳು ಸಿಂಹಿಣಿಯಂತೆ ಗರ್ಜಿಸಿದಳು:

"ಕೊಂದರೋ? ನನ್ನ ಮಕ್ಕಳನ್ನು ಕೊಂದರೋ?"

"ನೀನು ಸ್ವಲ್ಪ ಸುಮ್ಮನಿರು ಏಲಿ. ಅವರನ್ನು ನಾನು ಕರೆದುಕೊಂಡು ಬರುವೆ." ವರ್ಕಿ ತನ್ನ ಹೆಂಡತಿಯನ್ನು ಸಮಾಧಾನಪಡಿಸಲು ಶ್ರಮಿಸಿದ.

"ಕರೆದುಕೊಂಡು ಬನ್ನಿರಿ—ನನ್ನ ಅಂತೋಣಿ, ರೋಕಿಯರನ್ನು ಕರೆದುಕೊಂಡು ಬನ್ನಿರಿ" ಅವಳು ಮತ್ತೂ ಬೊಬ್ಬಿಟ್ಟಳು.

"ಅಪ್ಪಾ!" ಅನ್ನೆ ದಿನಗಳಂತೆ ತಂದೆಯನ್ನು ಕರೆದು ಕೂಗುತ್ತಿದ್ದಳು.

"ಮಗಳೇ, ನಾನು ಹೋಗಿ ಕರೆದುಕೊಂಡು ಬರುವೆನು, ನೀನು ಸಮಾಧಾನ ದಿಂದಿರು."

"ಕರೆದುಕೊಂಡು ಬನ್ನಿರಿ—ನನ್ನ ಮಕ್ಕಳನ್ನು ಕರೆದುಕೊಂಡು ಬನ್ನಿರಿ. ನಿಮ್ಮ ದೇವರಲ್ಲಿ ಹೇಳಿರಿ, ನನ್ನ ಮಕ್ಕಳನ್ನು ಪೋಲೀಸರು ಹಿಡಿದುಕೊಂಡು ಹೋದರೆಂದು."

ವರ್ಕಿ ಹೊಸ್ತಿಲು ದಾಟಿ ಕೆಳಗಿಳಿದು ಕಿರುದಾರಿಯಲ್ಲಿ ನಡೆದ.

"ನಾನೂ—ನಾನೂ ಬರುತ್ತೇನೆ" ಏಲಿ ವರ್ಕಿಯ ಹಿಂದಿನಿಂದಲೇ ಓಡಿದಳು.

ಸಂಜೆಯಾಯಿತು. ವರೀದು ಸಾಹೇಬನ ಮನೆಯ ಮುಂದಿನ ಗೇಟಿನಲ್ಲಿ ಹೊಸತಾಗಿ ಒಬ್ಬ ಕಾವಲುಗಾರ ನಿಂತಿದ್ದ. ಏಲಿ ಮುಂದಿನಿಂದಲೂ ವರ್ಕಿ ಹಿಂದಿನಿಂದಲೂ ಗೇಟು ದಾಟಿ ಒಳಗೆ ಹೋಗಲು ಪ್ರಯತ್ನಿಸಿದರು. ಕಾವಲುಗಾರ ಸಿಡುಕಿನಿಂದ ಆಜ್ಞಾಪಿಸಿದ:

"ಒಳಗೆ ಹೋಗಕೂಡದು !"

ಏಲಿ ಮುಂದೆ ಇಟ್ಟ ಹೆಜ್ಜೆಯನ್ನು ಹಿಂದಕ್ಕೆಳೆಯಲಿಲ್ಲ. ಅವಳು ಕೇಳಿದಳು:

"ಹೋಗಕೂಡದೊ ! ಯಾರ ಆಜ್ಞೆಯಿದು?"

"ಈಗ ಇದು ನನ್ನ ಆಜ್ಞೆ. ಅಲ್ಲೇ ನಿಲ್ಲಿರಿ !"

"ನಾವು ಒಳಗೆ ಹೋದರೊ?" ವರ್ಕಿ ಸಿಟ್ಟಿನಿಂದ ಕೇಳಿದ.

"ಹೋದರೆ...... ಹೋದರೆ ಜಾಗ್ರತೆ" ಕಾವಲುಗಾರ ಸ್ಪಷ್ಟವಾಗಿ ಹೇಳಿದ.

"ನಾನು ವರ್ಕಿ, ಗೊತ್ತೊ ನಿನಗೆ? ಮಾಲಿಕರನ್ನು ದೇವರಂತೆ ಕಾಣುತ್ತಿರುವ ವರ್ಕಿ."

"ನೀನು ವರ್ಕಿಯಾಗಿರು, ಮತ್ಯಾರೋ ಆಗಿರು, ಆದರೆ ರಸ್ತೆಗಿಳಿದು ದೂರ ನಿಲ್ಲು" ಕಾವಲುಗಾರ ಜೋರಾಗಿ ಹೇಳಿದ.

"ಮಾಲಿಕರನ್ನು ದೇವರಂತೆ ಭಾವಿಸುವವನು ನಾನು."

"ದೇವರಂತೆ ನೀನು ಮಾತ್ರ ಭಾವಿಸಿದರೆ ಸಾಕೊ? ನಿನ್ನ ಮಕ್ಕಳೂ ಭಾವಿಸಬೇಡವೊ?"

"ಪಾಪದವರೆಂದು ದೇವರೂ ಭಾವಿಸಬೇಡವೊ?" ಏಲಿ ಗದ್ಗದ ಕಂಠಿತಳಾಗಿ ಹೇಳಿದಳು.

"ನೀನು ಸುಮ್ಮನಿರು. ನಾನು ಕೇಳಿಕೊಳ್ಳುವೆ" ವರ್ಕಿ ಏಲಿಯನ್ನು ಗದರಿಸಿದ. ಅವನು ಕಾವಲುಗಾರನೊಡನೆ ಹೇಳಿದ:

"ನನಗೆ ನನ್ನ ಯಜಮಾನರನ್ನು ಕಂಡು ನನ್ನ ಸಂಕಟವನ್ನು ಹೇಳಿಕೊಳ್ಳಬೇಕು. ನೀನು ಒಳಗೆ ಹೋಗಿ ಅವರೊಡನೆ ಹೇಳು, ವರ್ಕಿ ಏಲಿಯರು ಬಂದು ನಿಂತಿರುವರೆಂದು."

"ನೀನು ನಿನ್ನ ಪಾಡಿಗೆ ಹೋಗು ಆಚೆ" ಕಾವಲುಗಾರ ನಿಷ್ಠುರವಾಗಿ ಆಜ್ಞಾಪಿಸಿದ.

ವರ್ಕಿಗೆ ಇದೆಲ್ಲವನ್ನು ನಂಬಲಾಗಲಿಲ್ಲ. ತಾನು ದೇವರೆಂದು ನಂಬಿದ್ದ ತನ್ನ ಯಜಮಾನ ! ಆ ದೇವರನ್ನು ಕಂಡು ತನ್ನ ಸಂಕಟಗಳನ್ನು ಹೇಳಿಕೊಳ್ಳಲು ಅವಕಾಶವಿಲ್ಲವೆಂದರೆ, ಎಷ್ಟು ಕಷ್ಟ? ಅವನು ವಿನಯದಿಂದ ಕೇಳಿಕೊಂಡ:

"ನನ್ನ ಮಕ್ಕಳನ್ನು ಪೋಲೀಸರು ಹಿಡಿದುಕೊಂಡು ಹೋದರು. ಯಜಮಾನರಲ್ಲಿ ನಮ್ಮ ಸಂಕಟಗಳನ್ನು ಹೇಳಿಕೊಳ್ಳಲು ಬಂದಿರುವೆವು. ನಾವು ಒಳಗೆ ಹೋಗಲು ಬಿಡು."

"ಇಲ್ಲಿಂದ ಆಚೆ ಹೋಗಲು ಹೇಳಿದ್ದು ನಿಮಗೆ" ಕಾವಲುಗಾರನ ಧ್ವನಿ ಏರಿತು.

"ನಮ್ಮ ಮಕ್ಕಳನ್ನು ಕೊಡದಿದ್ದರೆ ನಾವು ಹೋಗುವುದಿಲ್ಲ" ಏಲಿಯ ಧ್ವನಿಯೂ ಏರಿತು.

"ನೀನಾಚೆ ಹೋಗಿ ನಿಲ್ಲು. ನಾನು ಒಳಗೆ ಹೋಗಿ ನೋಡುತ್ತೇನೆ" ವರ್ಕಿ ಏಲಿಯನ್ನು ಹಿಂದಕ್ಕೆ ತಳ್ಳಿ ತಾನು ಮುಂದೆ ನುಗ್ಗಿದ.

ಕಾವಲುಗಾರನ ಕಬ್ಬಿಣದಂತಹ ಕೈ ವರ್ಕಿಯ ಕುತ್ತಿಗೆಯ ಮೇಲೆ ಬಿತ್ತು. ಒಂದು ದೂಡುವಿಕೆ ಮತ್ತು ಒಂದು ಒದೆತ! ವರ್ಕಿ ರಸ್ತೆಗೆ ಮೊಣಕಾಲೂರಿ ಬಿದ್ದ.

"ಕೊಲ್ಲು!—ನನ್ನನ್ನೂ ಕೊಲ್ಲು!" ಏಲಿ ಗೇಟಿನೊಳಗೆ ಓಡಿಬಂದು ನುಗ್ಗಿದಳು.

ಕಾವಲುಗಾರ ತನ್ನ ಕಬ್ಬಿಣದಂತಹ ಕೈಯಿಂದ ಏಲಿಯನ್ನು ಹಿಡಿದು ಹೊರಗೆ ದಬ್ಬಿದ. ಏಲಿಯೂ ರಸ್ತೆಯ ಮೇಲೆ ಬಿದ್ದಳು.

ದಾರಿಹೋಕರು ಬಂದು ಸೇರಿದರು. ಯಾರೂ ಹತ್ತಿರ ಬರಲಿಲ್ಲ. ಯಾರೂ ಮಾತಾಡಲಿಲ್ಲ.

ವರ್ಕಿ ಹೊರಳಾಡಿ ಎದ್ದ. ಅವನು ಏಲಿಯನ್ನು ಹಿಡಿದು ಎಬ್ಬಿಸಿದ.

"ದೇವರೇ!"

ನೋಡುತ್ತಾ ನಿಂತಿದ್ದವರು ದೀರ್ಘವಾಗಿ ಉಸಿರು ಬಿಟ್ಟರು. ಕಾವಲುಗಾರ ಹೇಳಿದ:

"ಇವರ ಮಕ್ಕಳು ಕಂಪೆನಿಯೊಳಗೆ ನುಗ್ಗಿ ಮೇಲ್ವಿಚಾರಕನನ್ನೂ ಅಲ್ಲಿಯ ಉದ್ಯೋಗಸ್ಥರನ್ನೂ ಹೊಡೆದರು. ಈಗ ತಂದೆತಾಯಿಯರಿಬ್ಬರೂ ಬಂದಿದ್ದಾರೆ ಮಾಲಿಕರಿಗೆ ಹೊಡೆಯಲು."

ಎಲ್ಲರೂ ಈ ಘಟನೆಯನ್ನು ನೋಡುತ್ತಾ ನಿಂತರೇ ಹೊರತು ಯಾರೂ ಏನೂ ಹೇಳಲಿಲ್ಲ.

ವರ್ಕಿ ಮಾಳಿಗೆಯ ಮುಂಭಾಗದ ಕಡೆ ನೋಡಿದ. ಯಾರೋ ಕಿಟಿಕಿಯ ಮೂಲಕ ರಸ್ತೆಯ ಕಡೆಗೆ ನೋಡುತ್ತ ನಿಂತಿದ್ದರು. ವರ್ಕಿ ಕೂಗಿ ಕೇಳಿದ:

"ಯಾರದು ನಿಂತಿರೋದು? ಯಜಮಾನರೋ?" ಅವನ ಸ್ವರದಲ್ಲಿ ಕೋಪವೂ ವ್ಯಸನವೂ ತಿರಸ್ಕಾರವೂ ಸೇರಿಕೊಂಡಿತ್ತು. ಏಲಿ ಅವನ ಪ್ರಶ್ನೆಗೆ ಉತ್ತರಿಸಿದಳು:

"ನಿಮ್ಮ ದೇವರು! ನಿಮ್ಮ ದೇವರು ನಿಂತಿರೋದು!"

"ಬಾ, ನಾವು ಹೋಗುವ" ಅವನು ಏಲಿಯ ಕೈಹಿಡಿದುಕೊಂಡು ನಡೆದ.

"ಹೋಗಿರಿ! ಹೋಗಿ ಪೋಲೀಸರ ಬಾಯಿಗೆ ಬಲಿಯಾಗಿರಿ!" ಕಾವಲುಗಾರ ನಗುತ್ತಾ ಹೇಳಿದ.

ಅದೆಲ್ಲವನ್ನೂ ನೋಡಿಕೊಂಡು ನಿಂತಿದ್ದ ಕೊಚ್ಚುಣ್ಣಿ ವರ್ಕಿಯೊಡನೆ ಕೇಳಿದ:

"ನೀವೀಗ ಎಲ್ಲಿಗೆ ಹೋಗೋದು?"

"ನಮ್ಮ ಅಂತೋಣಿ ರೋಕಿಯರನ್ನು ಪೋಲೀಸರು ಹಿಡಿದುಕೊಂಡುಹೋದರು."

"ನೀವು ಅಲ್ಲಿಗೆ ಹೋಗಬೇಡಿ."

"ಏನು, ಹೋದರೆ?"

"ಹೋದರೊ?...... ಹೋದರೆ ಮತ್ತೆ ಇಲ್ಲಿಗೆ ಬರಲು ಸಾಧ್ಯವಿಲ್ಲ."

"ಅಲ್ಲಿ ಕೊಲ್ಲುತ್ತಾರೆ! ಪೋಲೀಸರು, ಹೊಡೆದು ಹೊಡೆದು ಕೊಲ್ಲುತ್ತಾರೆ. ಪೋಲೀಸ್ ಸ್ಟೇಷನಿನ ಸಮೀಪ ಕಬ್ಬಿಣದ ಸೇತುವೆಯನ್ನು ಸಮೀಪಿಸಿದಾಗ ಕೇಳ ಬಹುದು ರೋದನ."

"ಕೊಂದರೋ—ನನ್ನ ಮಕ್ಕಳನ್ನು ಕೊಂದರು!" ಏಲಿ ಹುಚ್ಚುಹಿಡಿದವಳಂತೆ ಓಡಿದಳು. ವರ್ಕಿ ಹಿಂದಿನಿಂದ ಓಡಿದ.

ಪೋಲೀಸ್ ಸ್ಟೇಶನ್ ಹತ್ತಿರವಾಯ್ತು. ರಸ್ತೆಯ ಪಕ್ಕದಲ್ಲಿದ್ದ ಒಬ್ಬ ಕೂಗಿ ಹೇಳಿದ:

"ಹೋಗಬೇಡ ವರ್ಕಿಯಣ್ಣ! ಅಲ್ಲಿಗೆ ಹೋಗಕೂಡದು."

ವರ್ಕಿ ಏಲಿಯರು ಅದನ್ನು ಗಮನಿಸಲಿಲ್ಲ. ಆಗ ಅವರ ಕಿವಿಗೆ ಏನೊಂದೂ ಕೇಳದು.

"ಕೊಂದರೋ! ನನ್ನ ಮಕ್ಕಳನ್ನು ಕೊಂದರು" ಏಲಿ ಸ್ಟೇಷನ್ನಿನ ಗೇಟಿನೊಳಕ್ಕೆ ಓಡಿಹೋದಳು.

"ಕೊಲ್ಲಿರಿ!—ನಮ್ಮನ್ನೂ ಕೊಲ್ಲಿರಿ!" ವರ್ಕಿಯೂ ಗೇಟಿನೊಳಕ್ಕೆ ನುಗ್ಗಿದ.

ಮೂವರು ಪೋಲೀಸರು ಅವರನ್ನು ಸುತ್ತುಗಟ್ಟಿದರು. ಸ್ಟೇಷನಿನೊಳಗಿನಿಂದ ಒಂದು ಆಜ್ಞೆ:

"ಎಳೆದು ಹಳ್ಳಕ್ಕೆ ಹಾಕಿರಿ ಅವರನ್ನು."

ಅವರನ್ನು ಹಿಡಿದು ಎತ್ತಿ ಬೀಸಿದರು. ಅವರು ಗೇಟಿನ ಮೇಲಿಂದ ಸ್ಟೇಷನಿನ ಮುಂಭಾಗದ ಹಳ್ಳಕ್ಕೆ ಹೋಗಿ ಬಿದ್ದರು. ಹಳ್ಳದ ಆಚೆಗಿನ ರಸ್ತೆಯಲ್ಲಿ ಹೋಗು ತ್ತಿದ್ದವರು ಇದನ್ನು ಕಂಡರು. ಯಾರೂ ಮಾತನಾಡಲಿಲ್ಲ. ಯಾರಿಗೂ ಮಾತನಾ ಡುವ ಧೈರ್ಯ ಇರಲಿಲ್ಲ.

ಏಲಿ ವರ್ಕಿಯನ್ನು ಹಿಡಿದೆಬ್ಬಿಸಿದಳು. ಅವನ ಒಂದು ಕಾಲು ಮುರಿದಿತ್ತು. ಅವಳು ಅವನನ್ನು ಆಧರಿಸಿ ಹಿಡಿದಳು. ಅವನು ಕುಂಟುತ್ತಾ ನಡೆದ.

ಕೂಗಲು ಅವಳಿಗೆ ಶಕ್ತಿಯಿಲ್ಲ. ವರ್ಕಿಯನ್ನು ಬಹಳ ಕಷ್ಟದಿಂದ ಆಧರಿಸಿ ಕೊಂಡು ಅವಳು ಮನೆಯ ಮುಂಭಾಗದ ಕಿರುದಾರಿಯಲ್ಲಿ ಹೋದಳು. ಪಕ್ಕದ ಮನೆಯವರು ಹಲವರು ಬಂದು ಅಲ್ಲಿ ಸೇರಿದರು. ಚಾವಡಿಯಲ್ಲಿ ಉರಿಸಿಟ್ಟಿದ್ದ ದೀಪದ ಮುಂದೆ 'ಂ'ದಂತೆ ಸುರುಟಿ ಅನ್ನೆ ಮಲಗಿದ್ದಳು. ಔಸೇಪ್ಪ್ ಆಕಾಶದ ನಕ್ಷತ್ರಗಳನ್ನು ನೋಡುತ್ತ ಅಂಗಳದಲ್ಲಿ ನಿಂತಿದ್ದ. ವೇಲಾಯುಧನ ತಾಯಿ ಗಲ್ಲಕ್ಕೆ ಕೈಕೊಟ್ಟು ಚಾವಡಿಯಲ್ಲಿ ಕುಳಿತಿದ್ದಳು.

ಹೊಸಿಲು ಮೆಟ್ಟಲಲ್ಲಿ ನಿಂತು ಏಲಿ ಕೂಗಿ ಹೇಳಿದಳು:

"ಹಿಡಿದುಕೊಳ್ಳಿ!"

ಎಲ್ಲರೂ ಓಡಿಬಂದರು. ಎಲ್ಲರೂ ಒಮ್ಮೆಗೇ ರೋದಿಸಿದರು:

"ಕೊಂದರೊ !"

"ಅಪ್ಪಾ !" ಅನ್ನೆ ಓಡಿಹೋಗಿ ವರ್ಕಿಯನ್ನು ತಬ್ಬಿಕೊಂಡಳು. ಎಲ್ಲರೂ ಗೋಳೋ ಎಂದು ಅತ್ತರು. ವರ್ಕಿಯನ್ನು ಹೊಸಿಲು ದಾಟಿಸಿ ಚಾವಡಿಯಲ್ಲಿ ಮಲಗಿಸಿದರು.

"ನನ್ನ ಮಕ್ಕಳನ್ನು ಕೊಂದರೋ?" ಔಸೇಪ್ಪ್ ಕೇಳಿದ.

"ನನ್ನ ಮಗನನ್ನೂ—ನನಗೊಬ್ಬನೇ ಮಗನಿರೋದು" ವೇಲಾಯುಧನ ತಾಯಿ ಎದೆ ಬಡಿದುಕೊಂಡು ಅತ್ತಳು.

ಯಾರೂ ಏನನ್ನೂ ಹೇಳಲಿಲ್ಲ. ಪ್ರಜ್ಞಾಹೀನನಾಗಿ ಕಣ್ಣುಮುಚ್ಚಿ ಮಲಗಿದ್ದ ವರ್ಕಿಯ ಹತ್ತಿರ ಏಲಿ, ಅನ್ನೆಯರು ಕುಳಿತಿದ್ದರು.

ನಾಲ್ಕೈದು ಮಂದಿ ಹೊಸ್ತಿಲು ದಾಟಿ ಬಂದರು. ಎಲ್ಲರೂ ವ್ಯಥೆಯಿಂದ ನೋಡಿದರು. ಅಚ್ಯುತನ್, ಶಂಕು, ಪದ್ಮನಾಭನ್, ಜೋಸೆಫ್, ಪಪ್ಪನ್ ಅಲ್ಲದೆ, ಇನ್ನೊಬ್ಬನಿದ್ದ ಅವರೆಲ್ಲರ ಹಿಂದೆ—ಒಬ್ಬ ತೆಳ್ಳಗಿನ ಮನುಷ್ಯ.

"ನನ್ನ ಮಗನೆಲ್ಲಿ?" ವೇಲಾಯುಧನ ತಾಯಿ ಅಳುತ್ತಾ ಕೇಳಿದಳು.

"ನನ್ನ ಮಕ್ಕಳನ್ನು ಕೊಂದಿದ್ದಾರೊ?" ಔಸೇಪ್ಪ್ ಕೇಳಿದ.

ಅನ್ನೆ ವರ್ಕಿಯ ಹತ್ತಿರದಿಂದ ಎದ್ದಳು. ಅವಳು ಬಿಕ್ಕಿಬಿಕ್ಕಿ ಅಳುತ್ತಾ ಕೇಳಿದಳು:

"ನನ್ನ ಅಣ್ಣಂದಿರು ಬರುವರಾ?"

"ಎಲ್ಲರೂ ಬರುವರು" ಉತ್ತರಿಸಿದ್ದು ಪದ್ಮನಾಭನ್. ಅವನು ಹೇಳಿದ:

"ಅವರ ಮೇಲೆ ಕೇಸು ಮಾಡೋದಿಲ್ಲವೆಂದು ತಿಳಿದುಬಂತು. ಅವರೆಲ್ಲರನ್ನೂ ಬಿಡುವರು—ನಾಳೆಯೊ, ನಾಡಿದ್ದೊ."

"ಅವರಿಗೆ ಹೊಡೆದಿದ್ದಾರೊ?" ಔಸೇಪ್ಪ್ ಕೇಳಿದ.

ಆ ಪ್ರಶ್ನೆಗೆ ಯಾರೂ ಉತ್ತರ ಹೇಳಲಿಲ್ಲ. ಅನ್ನೆ ಇನ್ನೂ ಜೋರಾಗಿ ಅಳುತ್ತಾ ಕೇಳಿದಳು:

"ನನ್ನ ಅಣ್ಣಂದಿರನ್ನು ಹೊಡಿದಿದ್ದಾರೊ?"

ಆ ತೆಳ್ಳಗಿನ ಮನುಷ್ಯ ಮುಂದೆ ಬಂದ. ಅವನು ಅನ್ನೆಯನ್ನು ತೋಳಿನಲ್ಲಿ ಹಿಡಿದುಕೊಂಡು ಹೇಳಿದ:

"ಅಳದಿರು ತಂಗಿ ! ಅವರು ನಾಳೆ ಬರುವರು."

"ಅದು ಯಾರು?" ಔಸೇಪ್ಪ್ ಪದ್ಮನಾಭನೊಡನೆ ಕೇಳಿದ.

"ನಮಗೆ ಸಹಾಯ ಮಾಡಲು ಬಂದ ವ್ಯಕ್ತಿ" ಜೋಸೆಫ್ ಹೇಳಿದ:

"ವಿದ್ಯಾವಂತನಿದ್ದಾನೆ. ಬಡವರಿಗೆ ಸಹಾಯ ಮಾಡಲು ಬಂದಿದ್ದಾನೆ."

ತೆಳ್ಳಗಿನ ಮನುಷ್ಯ ವರ್ಕಿಯ ಹತ್ತಿರ ಕುಳಿತ. ಅವನು ಏಲಿಯೊಡನೆ ಕೇಳಿದ:

"ಕಾಲು ಮುರಿದಿದೆಯೊ?"

"ಹುಂ." ಹೂಂಗುಟ್ಟಲು ಮಾತ್ರ ಅವಳಿಗೆ ಶಕ್ತಿಯಿತ್ತು.

"ಇವನನ್ನು ಈ ಕೂಡಲೇ ಆಸ್ಪತ್ರೆಗೆ ಕೊಂಡುಹೋಗಬೇಕು."

"ಒಂದು ಬೆಂಚು ಬೇಕು" ಪದ್ಮನಾಭನ್ ಔಸೇಪ್ಪನೊಡನೆ ಹೇಳಿದ.

"ನಮ್ಮ ಮನೆಯಲ್ಲಿ ಒಂದು ಬೆಂಚು ಇದೆ. ಹೋಗಿ ತೆಗೆದುಕೊಂದು ಬನ್ನಿ."

ಜೋಸೆಫ್ ಮತ್ತು ಪಪ್ಪನ್ ಔಸೇಪ್ಪನ ಮನೆಗೆ ಹೋಗಿ ಒಂದು ಹುರಿಹಗ್ಗದ ಮಂಚ ತಂದರು. ಎಲ್ಲರೂ ಸೇರಿ ವರ್ಕಿಯನ್ನು ಅದರಲ್ಲಿ ಮಲಗಿಸಿದರು. ಶಂಕು, ಪಪ್ಪನ್, ಜೋಸೆಫ್ ಮತ್ತು ಅಚ್ಯುತನರು ಆ ಮಂಚವನ್ನು ಎತ್ತಿಕೊಂಡು ಹೊರಟರು. ಅವರು ಹೊಸ್ತಿಲು ದಾಟಿ ಕಿರುದಾರಿಗಿಳಿದು ನಡೆದರು.

× × ×

ಎಲ್ಲೆಲ್ಲೂ ದಟ್ಟವಾದ ಕತ್ತಲೆ ಹಬ್ಬಿತ್ತು! ಎಲ್ಲಿಂದಲೋ ಒಂದು ಕಿರುಗಾಳಿ ಬೀಸಿತು. ಚಲನವುಂಟಾಯಿತು; ಆದರೆ ಕತ್ತಲೆ ಚಲಿಸಲಿಲ್ಲ.

ಹೊಸವೊಂದು ಜಾಗ್ರುತಿ! ಒಂದು ಚೈತನ್ಯ! ಒಂದು ಆವೇಶ! ಅದು ಹೇಗೆ ಉಂಟಾಯಿತೆಂದು ಯಾರಿಗೂ ತಿಳಿಯದು. ಫ್ಯಾಕ್ಟರಿಗಳ ಮಗ್ಗಗಳೆಡೆಯಲ್ಲಿ ಆ ಚಲನೆ ಕಾಣಿಸಿಕೊಂಡಿತು. ಚಹದಂಗಡಿಗಳಲ್ಲಿಯೂ ಕಿರುದಾರಿಗಳು ಬಂದು ಸೇರುವ ಹಾದಿಯ ಪಕ್ಕಗಳಲ್ಲಿಯೂ, ಆ ಚೈತನ್ಯ ಹಾಗೂ ಆವೇಶಗಳು ಅಲೆಯಾಡಿದವು. ಕೂಲಿಯಾಳುಗಳ ಮನೆಗಳಲ್ಲಿ ಆ ಚಲನೆಯ, ಆ ಚೈತನ್ಯದ, ಆ ಆವೇಶದ ಪ್ರತಿಧ್ವನಿಯುಂಟಾಯಿತು.

"ಇಂದು ಅವರು, ನಾಳೆ ನಾವು" ಎಲ್ಲರೂ ಪಿಸುಗುಟ್ಟಿದರು.

ಅಂತೋಣಿ, ರೋಕಿ, ಮತ್ತಾಯಿ ಮತ್ತು ಸೈಮನರು ಲಾಕಪ್ಪಿನೊಳಗೆ ಅತಿಯಾಗಿ ಕೆಮ್ಮಿ ಕೆಮ್ಮಿ ಕಷ್ಟಪಟ್ಟು ಅಲ್ಲಿಂದ ಹೊರಗೆ ಬಂದರು.

ವೇಲಾಯುಧನ ಮೃತದೇಹದ ವೈದ್ಯಕೀಯ ಪರೀಕ್ಷೆಯ ನಂತರ ಬಂಧುಗಳಿಗೆ ಬಿಟ್ಟುಕೊಟ್ಟರು. ವೇಲಾಯುಧನ್ ಆತ್ಮಹತ್ಯೆ ಮಾಡಿದ್ದೆಂದು ಡಾಕ್ಟರರು ಸರ್ಟಿಫೈ ಮಾಡಿದ್ದರು.

ವೇಲಾಯುಧನ ಮೃತದೇಹವನ್ನು ವಶಕ್ಕೆ ತೆಗೆದುಕೊಂಡವರು ಅವನ ಸಹೋದರಿಯರು. ಅವನು ಸತ್ತ ಸುದ್ದಿ ಕೇಳಿ ಅವನ ತಾಯಿ ಪ್ರಜ್ಞಾಹೀನಳಾಗಿ ಬಿದ್ದಿದ್ದಳು.

"ಹೊಡೆದು ಕೊಂದುದು" ಎಂದು ಎಲ್ಲರೂ ತಮ್ಮತಮ್ಮೊಳಗೇ ಗುಸುಗುಸು ಮಾತಾಡುತ್ತಿದ್ದರು.

ಆದರೆ ಡಾಕ್ಟರರ ಸರ್ಟಿಫಿಕೇಟು ಇದೆ, ಆತ್ಮಹತ್ಯೆ ಮಾಡಿಕೊಂಡದ್ದೆಂದು. ಬಡ ಕೆಲಸದವರ ಈ ಪಿಸುಮಾತುಗಳಿಗೆಲ್ಲ ಯಾರು ಮಾನ್ಯತೆ ಕೊಡುತ್ತಾರೆ?

"ಹೊಡೆದು ಕೊಂದುದು" ಆ ಪಿಸುಮಾತು ಹಾಗೂ ಹೀಗೂ ರಾತ್ರಿ ಚಲಿಸುವ ಗಾಳಿಯಂತೆ ಊರಲ್ಲೆಲ್ಲಾ ಹಬ್ಬಿತು. ಆ ಗಾಳಿಯಲ್ಲಿ ಒಂದು ಶಬ್ದ ಕೇಳಿಬಂತು:

"ಇಂದು ಅವರು; ನಾಳೆ ನಾವು."

ಸಂಜೆ ಐದು ಗಂಟೆಯಾಯಿತು. ಫ್ಯಾಕ್ಟರಿಗಳಿಂದ ಸಮಯ ಸೂಚಕ ಸಿಳ್ಳು ಕೇಳಿಬಂತು. ಚಿಕ್ಕ ಚಿಕ್ಕ ನದಿಗಳು ಹರಿದುಬರುವಂತೆ, ಫ್ಯಾಕ್ಟರಿಯ ಗೇಟುಗಳ ಮೂಲಕ ಕೆಲಸಗಾರರು, ರಸ್ತೆಗೆ ಇಳಿದು ಬಂದರು—ಗುಳಿಹೊಕ್ಕ ಕಣ್ಣುಗಳು, ಬೊಚ್ಚು ಬಾಯಿಗಳ ಪ್ರೇತದಾಕಾರಗಳು!

ಆದರೆ ಆ ಗುಳಿಹೊಕ್ಕ ಕಣ್ಣುಗಳಲ್ಲಿ ಅಂದು ಚೈತನ್ಯದ ಪ್ರಕಾಶವಿತ್ತು. ಬೊಚ್ಚು ಬಾಯಿಗಳಲ್ಲಿ ಆವೇಶದ ನಡುಕವಿತ್ತು.

ಫ್ಯಾಕ್ಟರಿಗಳಿಂದ ಹೊರಟ ಅವರು ರಸ್ತೆಗಿಳಿದು ಓಡಿದರು, ಒಂದು ಗುರಿ ಮುಟ್ಟುವ ಉದ್ದೇಶದಿಂದ. ಸಂಜೆಗೆ ಮೊದಲೇ ವೇಲಾಯುಧನ ಮನೆಯ ಸುತ್ತೂ ಮಾನವಸಾಗರವೇ ಇತ್ತು. ಚಾವಡಿಯಲ್ಲಿ ಶಸ್ತ್ರಕ್ರಿಯೆಗೊಳಪಡಿಸಿದ ವೇಲಾಯುಧನ ಮೃತದೇಹವನ್ನು ವಸ್ತ್ರ ಹೊದಿಸಿ ಇಡಲಾಗಿತ್ತು. ಆ ಶವದ ಹತ್ತಿರ ವಲಿಯ ತೊಡೆಯ ಮೇಲೆ ತಲೆಯಿಟ್ಟು ಕಣ್ಣುಮುಚ್ಚಿ ಮಲಗಿದ್ದಳು ವೇಲಾಯುಧನ ತಾಯಿ.

ಅಂಗಳದಲ್ಲಿ ಒಂದು ಬೆಂಚಿನ ಮೇಲೆ ನಿಂತುಕೊಂಡು ಆ ತೆಳ್ಳಗಿನ ಮನುಷ್ಯ, ಒಂದು ಮೆಗಫೋನಿನ ಧ್ವನಿಯಂತೆ, ಎತ್ತರದ ಧ್ವನಿಯಲ್ಲಿ ಹೇಳಿದ:

"ಮಿತ್ರರೇ, ಕೂಲಿಕಾರರ ಅವಕಾಶಗಳಿಗೆ ಬೇಕಾಗಿ, ಸ್ವಾತಂತ್ರ್ಯಕ್ಕೆ ಬೇಕಾಗಿ ವೀರ ಸ್ವರ್ಗವನ್ನು ಸೇರಿದ ಕಾಮ್ರೇಡ್ ವೇಲಾಯುಧನ ಶ್ಮಶಾನಯಾತ್ರೆಗೆ ಸಮಯ ವಾಯಿತು."

ಕಿರುದಾರಿಗಳಲ್ಲಿ ದಟ್ಟವಾಗಿ ನಿಂತಿದ್ದ ಜನಸಮೂಹದ ಪೈಕಿ ಒಬ್ಬ, ಹತ್ತಿರ ನಿಂತವನೊಡನೆ ಕೇಳಿದ:

"ಅದೇನು ಆತ ಕಾಮ್ರೇಡ್ ಎಂದು ಹೇಳಿದ್ದು?"

"ಅದೋ? ಅದು...... ಏನೆಂದರೆ, ನಾವೆಲ್ಲ ಗೆಳೆಯರಾಗಿದ್ದೇವೆ; ಅಂತ."

ಆ ಪ್ರಶ್ನೆಯನ್ನು ಇನ್ನೂ ಹಲವರು ಕೇಳಿದರು. ಹಲವರು ಉತ್ತರವನ್ನು ಕೊಟ್ಟರು. ಯಾರಿಗೂ ಏನೆಂದು ಅರ್ಥವಾಗಲಿಲ್ಲ. ತೆಳ್ಳಗಿನ ಮನುಷ್ಯನು ಏರುಧ್ವನಿ ಯಲ್ಲಿ ಹೇಳಿದ:

"ಮಾಲಿಕತ್ವ ನಾಶವಾಗಲಿ!"

ಅಂತೋಣಿ, ರೋಕಿ, ಮತ್ತಾಯಿ, ಸೈಮನ್, ಪದ್ಮನಾಭನ್, ಅಚ್ಚುತನ್ ಮತ್ತು ಪಪ್ಪನರು ಅದನ್ನು ಪ್ರತಿಧ್ವನಿಸಿದರು. ಆ ಮಾನವ ಮಹಾಸಾಗರದಿಂದ ಪ್ರತಿಧ್ವನಿ ಏಳಲಿಲ್ಲ. ತೆಳ್ಳಗಿನ ಮನುಷ್ಯ ಆವೇಶಭರಿತನಾಗಿ ಹೇಳಿದ:

"ಮಾಲಿಕತ್ವವು ಕೂಲಿಯಾಳುಗಳನ್ನು ಮರ್ದಿಸುವುದು. ಆ ಅಧಿಕಾರವೇ ಕಾಮ್ರೇಡ್ ವೇಲಾಯುಧನನ್ನು ಹೊಡೆದು ಕೊಂದದ್ದು...... ಪ್ರಭುತ್ವ ನಾಶವಾಗಲಿ!"

ಆ ಮಾನವಸಾಗರದಿಂದ ದೊಡ್ಡ ಪ್ರತಿಧ್ವನಿಯುಂಟಾಯಿತು:

"ಪ್ರಭುತ್ವ ನಾಶವಾಗಲಿ!"

ಅಂಗಳದಲ್ಲಿ ದಟ್ಟವಾಗಿ ನಿಂತಿದ್ದ ಗುಂಪಿನ ಮಧ್ಯೆ, ಒಬ್ಬನು ಮತ್ತೊಬ್ಬನ ಕಿವಿಯಲ್ಲಿ ಪಿಸುಗುಟ್ಟಿದ:

"ಎಂದರೆ ಧನಿಕರನ್ನೆಲ್ಲಾ ಕೊಲ್ಲಬೇಕೆಂದು ಹೇಳುವುದು—ಅಲ್ಲವೊ?"

"ಮತ್ತಲ್ಲದೆ! ವೇಲಾಯುಧನನ್ನು ಕೊಂದಂತೆ ಮಾಲಕರನ್ನೂ ಕೊಲ್ಲಬೇಕು. ಅದೇ ನಾವು ಮಾಡಬೇಕಾದ್ದು."

ವೇಲಾಯುಧನ ಶವವನ್ನು ಮಂಚದ ಮೇಲಿರಿಸಲಾಯಿತು. ಅದು ನಿಧಾನವಾಗಿ ಕಿರುದಾರಿಯತ್ತ ಸಾಗಿತು.

"ಮಾಲಿಕತ್ವ ನಾಶವಾಗಲಿ!" ಘೋಷಣೆ ಕೇಳಿಸಿತು.

ವೇಲಾಯುಧನ ತಾಯಿ ಕಣ್ಣು ತೆರೆದಳು. ಆದರೆ ಆ ಕಣ್ಣುಗಳು ಮತ್ತೊಮ್ಮೆ ಮುಚ್ಚಲ್ಪಟ್ಟುವು. ಏಲಿ ಆ ಮುದುಕಿಯ ತಲೆಯ ಮೇಲೆ ಮೃದುವಾಗಿ ಕೈಯಾಡಿಸಿದಳು.

ಕೆಮ್ಮು!—ರೋಕಿ ಕೆಮ್ಮುತ್ತಿದ್ದ. ಅವನು ಕೆಮ್ಮಿ ಹೊರಹಾಕಿದ ಉಗುಳು ರಕ್ತದ ಮುದ್ದೆಯಾಗಿತ್ತು!

## ( ೭ )

ವರ್ಕಿ ಆಸ್ಪತ್ರೆಯಲ್ಲಿ ಮಲಗಿದ್ದ. ಮುರಿದ ಅವನ ಕಾಲನ್ನು ಸರಿಪಡಿಸಿ ಕಟ್ಟಲಾಗಿತ್ತು. ಕೆಲವೇ ದಿನಗಳಲ್ಲಿ ಅವನ ಕಾಲು ಗುಣವಾಗುವುದೆಂದೂ ಅವನಿಗೆ ನಡೆಯಲು ತೊಂದರೆಯಾಗದೆಂದೂ ಡಾಕ್ಟರರು ಧೈರ್ಯದ ಮಾತುಗಳನ್ನು ಹೇಳಿದ್ದರು. ಆದರೆ, ಅವನ ಕಾಲಿನ ಗಾಯ ವಾಸಿಯಾದರೂ ಮಾನಸಿಕವಾದ ಗಾಯ ವಾಸಿಯಾಗಲು ಕಷ್ಟವಿತ್ತು.

ಅವನಿಗೂ ಅವನ ಹೆಂಡತಿಗೂ ಇಳಿದುಕೊಳ್ಳಲು ಒಂದು ಮನೆಯಿಲ್ಲದೆ ಕಷ್ಟಪಡುತ್ತಿದ್ದಾಗ, ಆಭಯ ಕೊಟ್ಟವನಾಗಿದ್ದ ವರೀದು ಸಾಹೇಬ ಅಲ್ಲದೆ, ಅವನಿಗೆ ಕೆಲಸವನ್ನೂ ಕೊಟ್ಟಿದ್ದ. ಅಲ್ಲದೆ ಸಾಹೇಬ ನಂಬಿದ್ದ ಧರ್ಮವನ್ನು ಅವನೂ ಅವನ ಹೆಂಡತಿಯೂ ನಂಬಿದ್ದರು. ಎಲ್ಲಕ್ಕೂ ಮೇಲಾಗಿ ಸಾಹೇಬನನ್ನು ಕಣ್ಣೆದುರು ಕಾಣುತ್ತಿರುವ ದೇವರೆಂದು ಅವನು ನಂಬಿದ್ದ. ತನ್ನ ಮಕ್ಕಳೇ ಆಗಿರಲಿ ಮಾಲಿಕನನ್ನು ನಿಂದಿಸಿದರೆ ಅವನು ಸಹಿಸುತ್ತಿರಲಿಲ್ಲ. ಹೀಗಿರಲು ತನ್ನ ಪ್ರತ್ಯಕ್ಷ ದೇವರಾದ ಮಾಲಿಕನನ್ನು ಕಂಡು ತನ್ನ ಸಂಕಟಗಳನ್ನು ಹೇಳಿಕೊಳ್ಳಲು ಮತ್ತು ಮಕ್ಕಳು ಮಾಡಿದ ಹಲವಾರು ತಪ್ಪುಗಳಿಗೆ ಕ್ಷಮೆ ಕೇಳಿಕೊಳ್ಳಲು, ಅವನು ಧಣಿಗಳ ಮನೆಗೆ ಹೋದಾಗ ಗೇಟಿನೊಳಗೆ

ಹೋಗುವುದಕ್ಕೆ ಅನುಮತಿಯಿಲ್ಲವೆಂದರೆ! ಅವನು ಹೇಗೆ ಅದನ್ನು ಸಹಿಸಬೇಕು? ಅವನನ್ನೂ ಅವನ ಹೆಂಡತಿಯನ್ನೂ ರಸ್ತೆಗೆ ದೂಡಿದ್ದನ್ನು, ಮಾಳಿಗೆಯ ಕಿಟಕಿಯ ಮೂಲಕ ಸಾಹೇಬನು ನೋಡುತ್ತಿದ್ದುದನ್ನು ಅವನು ಹೇಗೆತಾನೆ ನಂಬದಿರಬೇಕು? ದೇವರೇ ಭೂತವಾದಂತೆ ಅವನಿಗೆ ತೋರಿತು. ಅಥವಾ ದೇವರೆಂದು ತಾನು ನಂಬಿದ್ದು ಭೂತವನ್ನು ಎಂದು ಭಾಸವಾಯಿತು. ಅತಿಯಾದ ದುಃಖವೂ ಕೋಪವೂ ಅವನ ಮನಸ್ಸಿನಲ್ಲಿತ್ತು. ಅಲ್ಲದೆ, ತನ್ನ ಹೆಂಡತಿಯ ಚುಚ್ಚುಮಾತುಗಳೂ ಅವನ ಕಿವಿಯಲ್ಲಿ ಕೇಳುತ್ತಿದ್ದುವು......

"ನಿಮ್ಮ ದೇವರು!...... ದೇವರು ಅದು ನಿಂತಿರುವುದು!"

ಪ್ರಜ್ಞೆ ಇಲ್ಲದೆಯೇ ಅವನು ಪೋಲೀಸ್ ಸ್ಟೇಷನ್ನಿಗೆ ಓಡಿದ್ದು. ಪೋಲೀಸರು ಅವನನ್ನು ಎತ್ತಿ ಹಳ್ಳಕ್ಕೆ ಬೀಸಾಕಿದ್ದು, ಕಾಲು ಮುರಿದದ್ದು ಇವೆಲ್ಲಾ ಅರ್ಧ ಪ್ರಜ್ಞಾ ಸ್ಥಿತಿಯಲ್ಲಾಗಿತ್ತು. ಆದ್ದರಿಂದ ಕಾಲು ಮುರಿದುದರ ಬಗ್ಗೆ ಅವನಿಗೆ ಯಾವ ಅರಿವೂ ಉಂಟಾಗಿರಲಿಲ್ಲ. ಆಸ್ಪತ್ರೆಯಲ್ಲಿ ಮಂಚದ ಮೇಲೆ ಅವನು ಬುದ್ಧಿಭ್ರಮಣೆಯಿಂದ ಮಲಗಿದ್ದ. ಪಲಿಯ ಮಾತುಗಳು ಯಾವಾಗಲೂ ಅವನ ಕಿವಿಯಲ್ಲಾಡುತ್ತಿದ್ದುವು. ಕಿಟಕಿಯ ಮೂಲಕ ಭೂತದ ಬಿರುನೋಟ ಅವನಿಗೆ ಯಾವಾಗಲೂ ಕಾಣುತ್ತಿತ್ತು. ವಿಶ್ವಾಸ ಮುರಿದಿತ್ತು; ಆ ಬಿರುಕನ್ನು ಸಹಿಸಲು ಅವನಿಗೆ ತ್ರಾಣವಿಲ್ಲವಾಗಿತ್ತು. ಅದು ತನಗೆ ಮಾತ್ರವಲ್ಲ, ತನ್ನ ಇಡೀ ಕುಟುಂಬಕ್ಕೆ ಬಿದ್ದ ದೊಡ್ಡ ಹೊಡೆತ. ಅದು ಎಂತಹ ಭಯಂಕರ ಹೊಡೆತ!

ಪಲಿ ಅನ್ನೆಯರು ವರ್ಕಿಯ ತಲೆಯ ಮತ್ತು ಕಾಲಿನ ಬಳಿ ಮಂಚದ ಮೇಲೆ ಕುಳಿತಿದ್ದರು. ಅಂತೋಣಿ ರೋಕಿಯರು ಬಲಾತ್ಕರಿಸಿದರೆ ಮಾತ್ರ ಮನೆಯ ಕಡೆಗೆ ಹೋಗುತ್ತಿದ್ದರು. ಹೀಗೆ ಹತ್ತಿಪ್ಪತ್ತು ದಿನಗಳು ಕಳೆದ ಮೇಲೆ ವರ್ಕಿಯನ್ನು ಆಸ್ಪತ್ರೆಯಿಂದ ಮನೆಗೆ ಕರೆತಂದರು. ಅವನು ಹೆಚ್ಚು ಪ್ರಯಾಸವಿಲ್ಲದೆ ನಡೆಯುವಂತಾಗಿದ್ದ. ಆದರೆ ನಡೆಯುವುದಕ್ಕಾಗಲೀ ನಿಲ್ಲುವುದಕ್ಕಾಗಲೀ ಅವನು ಪ್ರಯತ್ನಿಸುತ್ತಿರಲಿಲ್ಲ. ಅರೆನಿದ್ರೆಯೋಪಾದಿಯಲ್ಲಿ ಯಾವಾಗಲೂ ಅಂಗಾತ ಮಲಗಿಕೊಂಡೇ ಇರುತ್ತಿದ್ದ.

ಹೀಗಿರಲು ಒಂದು ದಿನ ವರೀದು ಸಾಹೇಬನ ಫ್ಯಾಕ್ಟರಿಯ ಮೇಲ್ವಿಚಾರಕ ಔಸೇಪ್ಪನ ಮನೆಗೆ ಹೋದ. ಮತ್ತಾಯಿ ಮತ್ತು ಸೈಮನರು ಅಲ್ಲಿ ಇರಲಿಲ್ಲ. ಔಸೇಪ್ಪ ಎದ್ದು ಅವನನ್ನು ಉಪಚರಿಸಿದ. ಗೆಲುಮುಖನಾಗಿ ಮೇಲ್ವಿಚಾರಕ ಕೇಳಿದ:

"ಈಗ ಅರಿತಿರೋ?"

"ಅರಿತೆವು! ಕಣ್ಣಿನಲ್ಲಿ ರಕ್ತವಿಲ್ಲದ ಜಾತಿ ನೀವೆಂದು ಅರಿತೆವು."

"ಈಗಷ್ಟೇ ಅರಿಯಲು ಪ್ರಾರಂಭವಾಗಿದೆ ಔಸೇಪ್ಪಣ್ಣ—ಈಗಿನ್ನೂ ಅದು ಶುರುವಾಗಿದೆ."

"ಇನ್ನೇನಿದೆ ಸ್ವಾಮಿ ಕಲಿಯೋದಕ್ಕೆ? ನನ್ನ ಮಕ್ಕಳಿಬ್ಬರನ್ನೂ ಗುದ್ದಿಗುದ್ದಿ ಹಣ್ಣುಗಾಯಿನೀರುಗಾಯಿ ಮಾಡಿಯಾಗಿದೆ. ಇನ್ನೂ ಅರಿಯುವಂತಹುದೇನಿದೆ?"

"ಹೊಡೆದು ಕೊಲ್ಲದೆ ಅವರನ್ನು ಏಕೆ ಬಿಟ್ಟೆವೆಂಬುದು ನಿನಗೆ ಗೊತ್ತೊ? ಹೊಡೆದು ಕೊಂದುಬಿಡಿಯೆಂದು ಸಾಹೇಬರು ಹೇಳಿದ್ದರೆ ಕೊಂದೇಬಿಡುತ್ತಿದ್ದೆವು. ಯಾಕೆ ಅವರು ಹಾಗೆ ಹೇಳಲಿಲ್ಲವೆಂದು ಗೊತ್ತೊ ನಿನಗೆ?"

"ಏಕೆ?"

"ಏಕೆಂದರೆ ನಾವೆಲ್ಲಾ ಕ್ರಿಸ್ತಾನಿಗಳು; ಸತ್ಯವನ್ನು ನಂಬುವವರು. ಆದುದರಿಂದ ಸಾಹೇಬರು ಅವರನ್ನು ಕೊಲ್ಲಬೇಡವೆಂದು ಹೇಳಿದರು. ಅದು ಗೊತ್ತೊ?"

"ಹಾಗಿದ್ದರೆ ಅವರಿಗೇಕೆ ಹೊಡೆದದ್ದು?"

"ಹೊಡೆದದ್ದೊ?...... ಹೊಡೆದದ್ದು ದೇವರು—ದೇವರು ಮೆಚ್ಚದ ಮಾತು ಗಳನ್ನು ಹೇಳಿದ್ದರಿಂದ, ಗೊತ್ತಾಯಿತಾ?"

ಈ ಮಾತುಗಳನ್ನು ಕೇಳುತ್ತಾ ನಿಂತಿದ್ದ ಸೈಮನ್ ಕೇಳಿದ:

"ಹೊಡೆಯುವ ದೇವರು! ಅದು ಎಂಥ ದೇವರು?"

"ಕೇಳಿದೆಯಾ ಔಸೇಪ್ಪಣ್ಣ, ದೇವರ ಮೇಲೆ ದೂರು ಹೇಳೋದು?" ಮೇಸ್ತ್ರಿಯ ಧ್ವನಿ ಏರಿತು.

"ದೇವರು ಹೊಡೆಯುವನೆಂದು ಹೇಳಿದರಲ್ಲವೆ ದೇವರು ಮೆಚ್ಚದ ಮಾತು! ಮೇಸ್ತ್ರಿಯಲ್ಲವೆ ದೇವರು ಮೆಚ್ಚದ ಮಾತುಗಳನ್ನು ಹೇಳಿದ್ದು" ಸೈಮನನ ಧ್ವನಿ ಏರಿತು.

"ನೀನು ಸುಮ್ಮನಿರು" ಔಸೇಪ್ಪ್ ಮಗನಿಗೆ ಆಜ್ಞಾಪಿಸಿದ.

ಮೇಸ್ತ್ರಿಯು ತನ್ನ ಮಾತಿನ ಧಾಟಿಯನ್ನು ಬದಲಾಯಿಸಿ, ಸ್ನೇಹಪರನಾಗಿ ಮಾತಾಡಿದ:

"ನೀವಿನ್ನೂ ಹುಡುಗಬುದ್ಧಿಯವರು; ತಿಳುವಳಿಕೆಯಿಲ್ಲದೆ ಮಾತಾಡುತ್ತಿದ್ದೀರಿ. ಮಾಲಿಕರೆಂದರೆ ದೇವರು. ಅದು ಗೊತ್ತೋ ನಿನಗೆ?...... ಅವರು ಹೇಳೋದೆಲ್ಲಾ ವೇದವಾಕ್ಯಗಳು. ಗೊತ್ತುಂಟೊ?"

"ಹಾಗಿದ್ದರೆ ಮಾಲಿಕರು ಹೇಳೋದನ್ನೆಲ್ಲ ವೇದಗ್ರಂಥದಲ್ಲಿ ಬರೆದಿಟ್ಟುಕೋ ಮೇಸ್ತ್ರಿ."

"ಸುಮ್ಮನಿರು ಎಂದು ಹೇಳಲಿಲ್ಲವೆ ನಿನಗೆ?" ಔಸೇಪ್ಪ್ ಮಗನನ್ನು ಗದರಿಸಿದ.

"ಅದು ಹೋಗಲಿ; ನೀವೆಲ್ಲ ಯಾಕೆ ಕೆಲಸಕ್ಕೆ ಬರುತ್ತಿಲ್ಲ?" ಸೈಮನನೊಡನೆ ಮೇಸ್ತ್ರಿ ನಗುತ್ತಾ ಕೇಳಿದ.

"ಏಕೆ ಬರುತ್ತಿಲ್ಲ?...... ಅದು ನಿನಗೇ ಗೊತ್ತಿರಬೇಕಲ್ಲ."

"ನೀವು ಬರದಿರುವುದು ಏಕೆಂದು ನನಗೇನು ಗೊತ್ತು?"

"ಬೆಣ್ಣೆಯಲ್ಲಿ ಕೂದಲೆಳೆದಂತೆ ಮೇಸ್ತ್ರಿ ನಯವಾಗಿ ಈಗ ಮಾತಾಡೋದು. ಪೋಲೀಸರಿಗೆ ಹೇಳಿ ಸಾಯುವಂತೆ ಹೊಡೆಸಿ ಈಗ ಕೇಳೋದು ನೋಡು, ಕೆಲಸಕ್ಕೆ ಏಕೆ ಬರುತ್ತಿಲ್ಲವೆಂದು!"

"ನೀನು ಸುಮ್ಮನಿರೋ" ಔಸೇಪ್ಪ್ ಮತ್ತೊಮ್ಮೆ ಹೇಳಿದ.

"ಈಗ ಕೆಲಸಕ್ಕೆ ಬರುವಂತೆ ಕರೆಯುತ್ತಿರುವುದು, ಇನ್ನೂ ಹೊಡೆಸೋದಕ್ಕೆ ಅಪ್ಪಾ."

ಮೋಸ್ತಿ ಹೇಳಿದ:

"ಬರುವಂತೆ ಕರೆಯುತ್ತಿರುವುದು ಕೆಲಸಕ್ಕಾಗಿ. ಕೆಲಸ ಮಾಡಿದರೆ ಸಂಬಳ ಸಿಗುತ್ತದೆ. ಕೆಲಸ ಮಾಡಿ ಕೂಲಿ ತೆಗೆದುಕೊಂಡು ಹೋಗುವವರು ನೀವು; ದೂಷಣೆ ಮಾತುಗಳನ್ನು ಹೇಳೋದಕ್ಕೂ, ದೇವರ ಮೇಲೆ ದೂರು ಹೇಳೋದಕ್ಕೂ ಪ್ರಾರಂಭಿಸಿದರೆ......"

"ಇನ್ನು ಹೊಡೆತ ತಿನ್ನಲು ಒಪ್ಪಲಾರೆವು ಮೋಸ್ತಿ" ಸೈಮನ್ ದೃಢವಾಗಿ ಹೇಳಿದ.

"ಹೊಡೆತ ತಿನ್ನಬೇಕೆಂದು ನಾನು ಹೇಳಿದೆನೋ?...... ನೀವೆಲ್ಲಾ ಉಪವಾಸ ಇದ್ದೀರೆಂದು ತಿಳಿದು ಸಾಹೇಬರು ಕನಿಕರಗೊಂಡು ನನ್ನನ್ನು ಇಲ್ಲಿಗೆ ಕಳಿಸಿದ್ದಾರೆ."

"ಹುಂ" ಸೈಮನ್ ಅರ್ಥಸೂಚಕವಾಗಿ ಹೂಂಗುಟ್ಟಿದ. ಅವನು ಹೇಳಿದ:

"ನೀನು ಈಗ ಹೋಗು ಮೋಸ್ತಿ. ನಾವು ಆ ಬಗ್ಗೆ ಸ್ವಲ್ಪ ಆಲೋಚಿಸಬೇಕು."

"ಏನನ್ನು ಆಲೋಚಿಸೋದು? ಯಾರೊಡನೆ ಆಲೋಚಿಸೋದು?...... ಆ ಬಿಲ್ಲವರೊಡನೆ ಆಲೋಚಿಸಿ ಅವರ ಉಪದೇಶದಂತೆ ನಡೆದರೆ ನಿಮಗೆ ಒಳ್ಳೆಯದಾಗದು. ನಾನು ಹೇಳಿಬಿಡುತ್ತೇನೆ. ಕ್ರಿಸ್ತಾನಿಗಳು ಧನಿಕರಾಗೋದನ್ನು ಕಂಡರೆ ಬಿಲ್ಲವರಿಗೆ ಹೊಟ್ಟೆಕಿಚ್ಚು."

"ಅದಿರಲಿ. ನೀನು ಹೋಗು. ನಾವು ಆಲೋಚಿಸುತ್ತೇವೆ."

"ನಾಳೆ ಬರುತ್ತೀರಾ?"

"ಹುಂ."

ಮೋಸ್ತಿ ಹೊರಟುಹೋದ. ಔಸೇಪ್ಪ್ ಹೇಳಿದ:

"ಅವನು ಹೇಳಿದ್ದು ಸರಿ. ನಾವು ಕ್ರಿಸ್ತಾನಿಗಳಾದ್ದರಿಂದಲೇ ಸಾಹೇಬರು ದಯೆ ತೋರಿಸಿದ್ದು."

"ಅಪ್ಪನಿಗೇನು ಇಷ್ಟೂ ತಿಳಿಯದೊ? ಹಡಗು ಬರುವಾಗ ಸರಕು ಕೊಡಬೇಕು. ಅದಕ್ಕಾಗಿ ಈಗ ಕ್ರಿಸ್ತಾನಿಗಳೆಂದು ಹೇಳಿಕೊಂಡು ಹೊರಟಿರೋದು."

ಔಸೇಪ್ಪ್ ಮತ್ತೇನೂ ಹೇಳಲಿಲ್ಲ.

ಅಂದು ಅರ್ಧ ರಾತ್ರಿ ವರೆಗೆ ಕುಟ್ಟಪ್ಪನ ಚಹದಂಗಡಿಯಲ್ಲಿ ದೀಪ ಉರಿಯುತ್ತಿತ್ತು. ಆ ತೆಳ್ಳಗಿನ ಮನುಷ್ಯನ; ಅಂತೋಣಿ, ರೋಕಿ, ಸೈಮನ್, ಮತ್ತಾಯಿ, ಪದ್ಮನಾಭನರ ಧ್ವನಿಗಳನ್ನು ಅಲ್ಲಿಂದ ಕೇಳಬಹುದಾಗಿತ್ತು. ತೆಳ್ಳಗಿನ ಮನುಷ್ಯ ಹೇಳಿದ:

"ಕೂಲಿಕಾರ ವರ್ಗದವರಿಗೆ ಜಾತಿಯಿಲ್ಲ, ಮತವಿಲ್ಲ, ದೇವರಿಲ್ಲ, ರಾಜ್ಯವಿಲ್ಲ."

"ಮಾಲಿಕ ವರ್ಗದವರಿಗಿರೋದು ಅದೆಲ್ಲಾ. ದೇವರೆಂದರೆ ಮಾಲಿಕ ವರ್ಗದವರ ಮುಖಂಡ."

"ಅವನಿಗೆ ಹೊಡೆಯಬೇಕು. ಅದು ಈಗ ನಾವು ಮಾಡಬೇಕಾದ ಕೆಲಸ" ರೋಕಿ ಘರ್ಜಿಸಿದ.

ಅಂತೋಣಿ ಸಾವಧಾನವಾಗಿ ಹೇಳಿದ:

"ಹೊಡೆತ ಬಡಿತ ಎಲ್ಲಾ ಆಮೇಲೆ ಯೋಚಿಸುವ. ನಾಳೆ ಕೆಲಸಕ್ಕೆ ಹೋಗಬೇಕೋ ಬೇಡವೋ ಎಂಬುದನ್ನು ಈಗ ತೀರ್ಮಾನಿಸಬೇಕು."

ತೆಳ್ಳಗಿನ ಮನುಷ್ಯ ಉಪದೇಶವಿತ್ತ:

"ಎಲ್ಲರೂ ಕೆಲಸಕ್ಕೆ ಹೋಗಬೇಕು. ಕೂಲಿಯವರಿಗೆ ಕೆಲಸ ಕೊಡೋದು ಮಾಲಿಕರ ಕಾರುಣ್ಯದಿಂದಲ್ಲ, ಕ್ರಿಸ್ತಾನಿಗಳಾದುದರಿಂದಲೂ ಅಲ್ಲ. ಬಿಲ್ಲವರಾದುದರಿಂದ ಕೆಲಸ ಕೊಡದೆಯೂ ಇರೋದಿಲ್ಲ. ಮಾಲಿಕರು ಕೆಲಸ ಮಾಡಿಸೋದು ತಮ್ಮ ಅವಶ್ಯಕ್ಕಾಗಿ. ಕೆಲಸ ಮಾಡೋದು ಕೂಲಿಯವರ ಅವಶ್ಯಕತೆಗಾಗಿಯೂ ಇದೆ."

ಕೊನೆಗೆ ಎಲ್ಲರೂ ಕೆಲಸಕ್ಕೆ ಹೋಗುವುದೆಂದೇ ಅಲ್ಲಿ ತೀರ್ಮಾನವಾಯ್ತು.

× × ×

ಅರ್ಧರಾತ್ರಿಯಾಯಿತು. ಏಲಿ ಅನ್ನೆಯರ ಸಂತೋಷಕ್ಕೆ ಪಾರವೇ ಇಲ್ಲ. ಅಂದು ಆ ಕುಟುಂಬ ಉಪವಾಸ ಇತ್ತು. ಇದರಿಂದ ಅವರಿಗೆ ಬೇಸರವಿಲ್ಲ. ಅವರಿಗೆ ತಮ್ಮ ಅಂತೋಣಿ, ರೋಕಿಯರು ಸಿಕ್ಕಿದರೆ ಸಾಕು. ಮಲಗಿದ್ದ ವರ್ಕಿ ಅರೆನಿದ್ರೆಯಲ್ಲಿ ಆಗಾಗ ಕೇಳುತ್ತಿದ್ದ, "ಬಂದರೊ?" ಎಂದು. ಏಲಿ ಅನ್ನೆಯರು ಕಿರುದಾರಿಗಿಳಿದು ನಿಂತರು. ಅನ್ನೆ ಕೇಳಿದಳು:

"ನಡುರಾತ್ರಿಯಾದರೂ ಅವರು ಇನ್ನೂ ಏಕೆ ಬಂದಿಲ್ಲವಮ್ಮಾ?"

"ಬರುವರು ಮಗಳೇ, ಬರುವರು."

"ಇನ್ನೂ ಪೋಲೀಸರು......"

"ಇಲ್ಲ ಮಗಳೇ, ಅವರೀಗ ಬರುವರು."

"ಬಂದರೇನೆ?" ಒಳಗಿನಿಂದ ವರ್ಕಿ ಕೂಗಿ ಕೇಳಿದ.

"ಇಲ್ಲ, ಈಗ ಬರುವರು" ಏಲಿ ಹೇಳಿದಳು.

ಔಸೇಪ್ಪನ ಮನೆಯಲ್ಲಿ ದೀಪ ಉರಿಯುತ್ತಿತ್ತು. ಅವನು ಕಿರುದಾರಿಗೆ ಬಂದು ಕೇಳಿದ:

"ಬಂದರೋ?"

"ಇನ್ನೂ ಇಲ್ಲವಲ್ಲ."

"ಮೇಸ್ತ್ರಿ ಬಂದು ಹೋದುದು ಗೊತ್ತಾಯಿತೊ?"

"ಇಲ್ಲ. ಏಕೆ ಅವನು ಬಂದಿದ್ದ?"

"ಕೆಲಸಕ್ಕೆ ಹೋಗಬೇಕೆಂದು ಹೇಳಲು ಬಂದಿದ್ದ."

"ಹೌದಾ ! ಮತ್ತೇನಾಯ್ತು?"

"ಅವರೆಲ್ಲರೂ ಸೇರಿ ಆಲೋಚಿಸುತ್ತಿರುವರು, ಕೆಲಸಕ್ಕೆ ಹೋಗುವರೆಂದು ತೋರುತ್ತದೆ."

"ಅದೇ ಸರಿ."

"ಎಲ್ಲಿದ್ದಾರೆ; ಬಂದರೋ?" ವರ್ಕಿ ಒಳಗಿನಿಂದ ಕೂಗಿ ಹೇಳಿದ.

"ಈಗ ಬಂದಾರು" ಏಲಿ ಹೇಳಿದಳು.

ಔಸೇಪ್ಪ್ ಹೇಳಿದ:

"ನಾವೆಲ್ಲಾ ಕ್ರಿಸ್ತಾನಿಗಳಾದ್ದರಿಂದ ಹೊಡೆದು ಕೊಲ್ಲಲಿಲ್ಲವೆಂದು ಮೇಸ್ತ್ರಿ ಹೇಳಿದ. ಇಲ್ಲದಿದ್ದರೆ ಹೊಡೆದು ಕೊಂದರೂ ಕೇಳುವವರು ಯಾರೆಂದು ಕೇಳಿದ."

"ಆ ! ಅದು ಸರಿಯೇ ಅನ್ನು."

"ತಾಯಿಯೂ ತಂಗಿಯೂ ಕಿರುದಾರಿಗಿಳಿದು ಬಂದು ನಿಂತಿರುವುದೇಕೆ?" ಎಂದು ಕೇಳುತ್ತಾ ಅಂತೋಣಿಯೂ, ಅವನ ಹಿಂದೆ ರೋಕಿಯೂ, ಮತ್ತು ಮತ್ತಾಯಿ ಮತ್ತು ಸೈಮನರೂ ಬಂದರು.

"ಬಂದರೇನೇ?" ವರ್ಕಿ ಕೂಗಿ ಕೇಳಿದ.

"ಬಂದರು, ಬಂದರು...... ನೀವು ಒಳಗೆ ಹೋಗಿ ಮಕ್ಕಳೇ, ಬೇಗ ಹೋಗಿರಿ." ಅಂತೋಣಿ ರೋಕಿಯರು ಮನೆಯೊಳಗೆ ಧಾವಿಸಿ ಹೋದರು. ಏಲಿ ಅನ್ನೆಯರು ಅವರನ್ನು ಹಿಂಬಾಲಿಸಿದರು.

( ೮ )

ಮಾಲಿಕ ಕುಂಜುಶಂಕರನ ಹುರಿಹಗ್ಗದ ಫ್ಯಾಕ್ಟರಿಯು ಕೇವಲ ಫ್ಯಾಕ್ಟರಿಯಷ್ಟೇ ಅಲ್ಲ. ಅದು ಹಲವು ತರದ ವ್ಯವಹಾರಗಳಿಗೂ ವ್ಯಾಪಾರಗಳಿಗೂ ಕೇಂದ್ರಸ್ಥಾನವಾಗಿತ್ತು. ತೆಂಗಿನಕಾಯಿಯ ಸಿಪ್ಪೆಯನ್ನು ಕೊಳೆಯ ಹಾಕುವುದು, ಅದನ್ನು ಗುದ್ದಿ ನಾರು ಮಾಡುವುದು, ರಾಟೆಯಲ್ಲಿ ಹುರಿಹಗ್ಗ ತಯಾರಿಸುವುದು: ವಿವಿಧ ಸಾಮಾನುಗಳ ಅಂಗಡಿ, ಚಹದಂಗಡಿ ಮುಂತಾದುವೂ ಅವನ ಅಧೀನದಲ್ಲಿ ಇದ್ದುವು. ಇವೆಲ್ಲಾ ಹುರಿಹಗ್ಗದಿಂದ ಚಾಪೆ ಹೆಣೆಯುವ ಕೆಲಸಕ್ಕೆ ಶುರು ಮಾಡಿದ ನಂತರ ಒಂದೊಂದಾಗಿ ಸೇರಿದ್ದವು.

ಮೊದಲು ತೆಂಗಿನಕಾಯಿಯ ಹಸಿ ಸಿಪ್ಪೆಯನ್ನು ತೆಗೆದು ಕೊಳೆಯ ಹಾಕಿ, ಆ ಕೊಳೆತ ಸಿಪ್ಪೆಯನ್ನು ಮಾರುವುದು ಅವನ ಕೆಲಸವಾಗಿತ್ತು. ಆಗ ಒಂದು ಆಲೋಚನೆ

ಅವನಿಗೆ ಬಂತು. ಕೂಲಿಯಾಳುಗಳಿಗೆ ಕೊಡುವ ಕೂಲಿಹಣವನ್ನು ತನ್ನ ಪೆಟ್ಟಿಗೆಯಲ್ಲಿ ಬೀಳುವಂತೆ ಮಾಡಬೇಕೆಂಬುದೇ ಆ ಆಲೋಚನೆ. ಅದಕ್ಕಾಗಿ ಒಂದು ಚಹದಂಗಡಿಯನ್ನೂ ಒಂದು ಸಂಬಾರದ ಅಂಗಡಿಯನ್ನೂ ಆರಂಭಿಸಿದ. ಇನ್ನು ಮುಂದೆ ಕೊಡುವ ಕೂಲಿಯೆಲ್ಲಾ ಹಣದ ಬದಲು ಅಕ್ಕಿ, ಸಾಮಾನು ಮತ್ತು ಚಹದ ರೂಪದಲ್ಲಿ ಇರುವುದೆಂದು ಹೇಳಿದ. ಅದಕ್ಕೆ ಒಪ್ಪುವವರು ಮಾತ್ರ ತನ್ನ ಕೆಲಸಕ್ಕೆ ಬರಬಹುದೆಂದು ತಿಳಿಸಿದ. ಅದಕ್ಕೆ ಒಪ್ಪಿಗೆಯಿಲ್ಲವೆಂದು ಹೇಳಲು ಯಾರಿಗೂ ಧೈರ್ಯವಿರಲಿಲ್ಲ. ಅಲ್ಲದೆ ಸಮ್ಮತವಿಲ್ಲವೆಂದು ಅವರ ಬಾಯಿಯಿಂದ ಬಾರದ ರೀತಿಯಲ್ಲಿ ಮಾಲಿಕನು ಬಹಳ ಉಪಾಯವಾಗಿ ಕೂಲಿಯವರೊಡನೆ ಮಾತಾಡುತ್ತಿದ್ದ:

"ನಿಮಗೆ ಹಣವೇಕೆ? ಅಕ್ಕಿ ಮತ್ತು ಇತರ ಸಾಮಾನುಗಳನ್ನು ತರುವುದಕ್ಕೆ ಮತ್ತು ಚಹ ಕುಡಿಯುವುದಕ್ಕಲ್ಲವೆ? ಅದಕ್ಕಾಗಿಯೇ ನಾನು ಸಂಬಾರದ ಅಂಗಡಿ, ಚಹದಂಗಡಿಗಳನ್ನು ಪ್ರಾರಂಭಿಸಿದ್ದೇನೆ. ಅಕ್ಕಿ ಸಾಮಾನುಗಳನ್ನು ತೆಗೆದುಕೊಳ್ಳಿ, ಚಹ ಕುಡಿಯಿರಿ, ಇನ್ನೂ ಬಾಕಿಯಿದ್ದರೆ, ಹಣ ತೆಗೆದುಕೊಳ್ಳಿರಿ."

ಕುಂಜುಶಂಕರನ ದಿನಸಿ ಅಂಗಡಿಯಿಂದ ಅಕ್ಕಿ ಸಾಮಾನುಗಳನ್ನು ತೆಗೆದುಕೊಂಡು ಅವನ ಚಹದಂಗಡಿಯಲ್ಲಿ ಚಹವನ್ನೂ ಕುಡಿದರೆ ಕೂಲಿಯವನಿಗೆ, ಅವನ ಕೂಲಿಹಣದಲ್ಲಿ ಮತ್ತೇನೂ ಉಳಿಯುವಂತಿರಲಿಲ್ಲ.

ಆಗ ಮಾಲಿಕನಿಗೆ ಕಂಡಿತು ಕೊಳೆತ ಸಿಪ್ಪೆಯನ್ನು ಮಾರುವುದಕ್ಕಿಂತ ಅವನ್ನು ಗುದ್ದಿ ಸಿಂಬು ತಯಾರಿಸಿ, ಹುರಿಹಗ್ಗ ಮಾಡಿ ಮಾರಿದರೆ ಹೆಚ್ಚು ಲಾಭ ಸಿಗುವುದೆಂದು. ಅಲ್ಲದೆ ಸಿಂಬು ತಯಾರಕರು, ಹುರಿಹಗ್ಗ ತಯಾರಕರು ಎಂದು ಕೆಲಸದವರ ಸಂಖ್ಯೆಯೂ ಹೆಚ್ಚಾಗುವುದು. ಜನ ಹೆಚ್ಚಾಗುವುದರಿಂದ ದಿನಸಿ ಅಂಗಡಿಯಲ್ಲೂ ಚಹದಂಗಡಿಯಲ್ಲೂ ವ್ಯಾಪಾರ ಜಾಸ್ತಿಯಾಗಿ ಬಹಳ ಲಾಭ ದೊರಕುವುದು. ಆದುದರಿಂದ ಸಿಪ್ಪೆ ಗುದ್ದುವ ಹುರಿಹಗ್ಗ ತಯಾರಿಸುವ ಕೆಲಸಗಳೂ ಪ್ರಾರಂಭವಾದುವು. ಜೊತೆಗೇ ದಿನಸಿ ಮತ್ತು ಚಹದಂಗಡಿಗಳನ್ನೂ ದೊಡ್ಡದು ಮಾಡಿದ. ಇಷ್ಟೇ ಅಲ್ಲ, ಸಾಮಾನುಗಳ ಕ್ರಯವನ್ನೂ ಹೆಚ್ಚಿಸಿದ. ಮಾಲಿಕನು ತನ್ನ ಎಲ್ಲಾ ತರಹದ ಕೆಲಸದವರೊಡನೆ ಒಂದು ದಿನ ಹೇಳಿದ:

"ಆಲಪ್ಪಿಯ ಮಾರ್ಕೆಟ್ಟಿನಲ್ಲಿ ಅಕ್ಕಿಯ ಕ್ರಯ, ನೆರೆನೀರು ಏರುವಂತೆ ಏರುತ್ತಿದೆ. ಮೆಣಸಿಗಾದರೂ ಬೆಂಕಿಯಂತೆ ಬೆಲೆ. ಇನ್ನು ಮುಂದೆ ಯಾರೂ ಚಹ ಕುಡಿಯದಿರುವುದೇ ಒಳ್ಳೆಯದು. ಚಹ ಪುಡಿಯ ಕ್ರಯ ಭಯಂಕರ, ಅದನ್ನು ಕೊಂಡುಕೊಳ್ಳಬೇಕಿದ್ದರೆ ಮನೆ ಹಿಂಭಾಗ ಮಾರಬೇಕು."

ಹೀಗೆ ಅವನ ಅಂಗಡಿಯಲ್ಲಿ ಸಂಬಾರದಿಂದ ಹಿಡಿದು ಎಲ್ಲಾ ಪದಾರ್ಥಗಳಿಗೂ ಬೆಲೆ ಜಾಸ್ತಿ. ಅವನು ಹೇಳುವ ರೀತಿ ನೋಡಿದರೆ ಯಾವ ಸಾಮಾನಿಗೂ ಒಮ್ಮೆಯಾದರೂ ಕ್ರಯ ಕಡಿಮೆಯಾಗುವ ಸೂಚನೆಯಿಲ್ಲ.

ಅವನ ಖಜಾಂಚಿ ಮತ್ತು ಲೆಕ್ಕಪತ್ರಗಳನ್ನಿಡುವುದು ಅವನ ಹೆಂಡತಿ ಕಾಳಿಕುಟ್ಟಿ

ಬಿಲ್ಲವೆತ್ತಿ. ತೆಂಗಿನಕಾಯಿಯ ಹಸಿ ಸಿಪ್ಪೆಯನ್ನು ಕೊಂಡುಕೊಳ್ಳುವುದರಿಂದ ಮೊದಲ್ಗೊಂಡು ಹಗ್ಗ ತಯಾರಿಸುವ ವರೆಗಿನ ಲೆಕ್ಕಗಳು; ದಿನಸಿ ಅಂಗಡಿಯ, ಜವಳಿದಂಗಡಿಯ ಮ್ಯಾನೇಜ್‌ಮೆಂಟ್ ಕಾಳಿಕುಟ್ಟಿ ಬಿಲ್ಲವೆತ್ತಿಯದಾಗಿತ್ತು. ಕೆಲವೊಮ್ಮೆ ಲೆಕ್ಕಾಚಾರ ತಪ್ಪುವುದಿತ್ತು. ಆದರೆ ಲೆಕ್ಕ ತಪ್ಪಿದರೂ ಕೂಲಿಯವರಿಗೆ ಅನುಕೂಲವಾಗಿ ಒಮ್ಮೆಯೂ ಬರುವಂತಿಲ್ಲ. ತೆಂಗಿನ ಸಿಪ್ಪೆ ಗುದ್ದುವ ಹೆಂಗುಸರಲ್ಲೂ ಗಂಡು ಕೂಲಿಯಾಳುಗಳಲ್ಲೂ ಕೂಲಿಯನ್ನು ಸಾಮಾನುಗಳ ರೂಪದಲ್ಲಿ ಪಡೆಯುವುದರ ಪ್ರಯೋಜನವನ್ನು ಅವಳು ಹೇಳುತ್ತಿದ್ದಳು.

"ಕೂಲಿ ಹಣ ತೆಗೆದುಕೊಂಡು ಹೆಂಗುಸರು ಸಂತೆಯಲ್ಲೂ ಅಂಗಡಿಗಳ ಮುಂದೆಯೂ ನಡೆಯೋದು ಎಷ್ಟೊಂದು ಅಯೋಗ್ಯತನ? ನಾನು ಯಜಮಾನರಲ್ಲಿ ಹೇಳಿ ಈ ವ್ಯಾಪಾರ ತೊಡಗಿಸಿದ್ದಾಗಿದೆ. ಇಲ್ಲಿನ ಸೌಕರ್ಯವೆಂದರೇನು? ಕೆಲಸ ಮುಗಿಸಿ ಸಾಮಾನು ತೆಗೆದುಕೊಂಡು ನೇರವಾಗಿ ಮನೆಗೆ ಹೋಗಬಹುದು."

ಗಂಡು ಕೂಲಿ ಆಳುಗಳ ಹೆಂಡತಿಯರೊಡನೆ ಕಾಳಿಕುಟ್ಟಿ ಬಿಲ್ಲವೆತ್ತಿ ಹೇಳುತ್ತಿದ್ದಳು:

"ನಿಮ್ಮ ಗಂಡಂದಿರು ದುಡ್ಡು ಕೇಳಿದರೂ ಯಜಮಾನರು ಕೊಡೋದಿಲ್ಲ. ಯಾಕೆಂದು ಗೊತ್ತೊ? ಹಣ ಬೇಡಿ ತೆಗೆದುಕೊಂಡು ಹೋಗೋದು ಕಳ್ಳು ಕುಡಿಯುವುದಕ್ಕೆ. ಗಂಡಸರ ಕೈಯಲ್ಲಿರುವ ಹಣವನ್ನು ಸುಲಿಗೆ ಮಾಡೋದಕ್ಕೆ ಅಲ್ಲಲ್ಲಿ ಕೆಲವು ಹೆಂಗುಸರೂ ಇದ್ದಾರೆ. ಅವರು ಹಾಗೆ ಕಳ್ಳು ಕುಡಿದು ಹೆಂಗುಸರನ್ನು ಹಿಡಿದು ತಿರುಗಾಡಿದರೆ ನಿಮ್ಮ ಗತಿಯೇನು? ನೀವು ಉಪವಾಸ ಬೀಳಬೇಕು. ಆದ್ದರಿಂದ ಹಣ ಕೈಯಲ್ಲಿ ಕೊಡಕೂಡದು."

ಹೀಗೆ ಕುಂಜುಶಂಕರನ್ ಹಲವು ವಿಧಗಳಿಂದ ಲಾಭಗಳಿಸಿ, ಹಣ ಸಂಪಾದಿಸಿ ಬಹು ಬೇಗನೆ ದೊಡ್ಡ ಮನುಷ್ಯನಾದ. ಆಗ ಅವನಿಗೆ ತೋರಿತು, ತಯಾರಿಸಿದ ಮುರಿಯಿಂದ ಚಾಪೆ ಹೆಣೆದು ಮಾರಿದರೆ ಇನ್ನಷ್ಟು ಲಾಭ ಸಿಗಬಹುದೆಂದು. ಅದಕ್ಕಾಗಿ ಕೆಲವು ಮಗ್ಗಗಳನ್ನು ಸಿದ್ಧಪಡಿಸಿ ಚಾಪೆ ಹೆಣೆಯಲು ಪ್ರಾರಂಭಿಸಿದ. ಆಗ ಅವನ ದಿನಸಿ ಮತ್ತು ಜವಳಿದಂಗಡಿಗಳು ಮತ್ತೊಮ್ಮೆ ದೊಡ್ಡ ಮಟ್ಟಕ್ಕೇರಿದುವು.

ಇದೇ ವೇಳೆ ಅವನು ಒಂದು ಜವಳಿ ಅಂಗಡಿಯನ್ನೂ ಒಂದು ಬಾರ್ಬರ್ ಶಾಪನ್ನೂ ಪ್ರಾರಂಭಿಸಿದ. ಅವನ ಕೂಲಿ ಆಳುಗಳು ಅವರಿಗೆ ಬೇಕಾದ ವಸ್ತ್ರಗಳನ್ನು ಕೊಂಡುಕೊಳ್ಳಲು ಮತ್ತು ಅವುಗಳನ್ನು ಹೊಲಿಸಲು ಬೇರೆ ಕಡೆಗೆ ಹೋಗುವುದೇಕೆ? ಹಾಗೇ ಅವನ ಕೆಲಸದವರು ಕೂದಲು ತೆಗೆಸುವುದಕ್ಕೂ ಮೀಸೆ–ಗಡ್ಡ ಬೋಳಿಸುವುದಕ್ಕೂ ಸೆಲೂನ್ ಹುಡುಕಿಕೊಂಡು ಅಲ್ಲಿ ಇಲ್ಲಿ ನಡೆಯುವುದೇಕೆ?–ಅವನು ಹೇಳುತ್ತಿದ್ದ:

"ನನ್ನ ಕೆಲಸದವರಿಗೆ ಬೇಕಾದದ್ದನ್ನೆಲ್ಲಾ ನಾನು ಕೊಡುವೆ. ತಂದೆತಾಯಿಯರನ್ನು ಹೊರತು ನಿಮಗೇನು ಬೇಕೋ ಕೇಳಿರಿ."

ಸ್ವಲ್ಪ ತುಂಟನಾದ ಒಬ್ಬ ಕೆಲಸದವ ಏನೋ ಕೇಳಲು ಭಾವಿಸಿದ. ಆದರೆ ಅವನು ಅದನ್ನು ಕೇಳಲಿಲ್ಲ !

ಬೇರೆ ಅಂಗಡಿಗಳಲ್ಲಿರುವ ಕ್ರಯಕ್ಕಿಂತ ಇಮ್ಮಡಿಯೂ ಕೆಲವೊಮ್ಮೆ ಅದಕ್ಕೂ ಹೆಚ್ಚೂ ಕ್ರಯ ಕೊಟ್ಟು ಮಾಲಿಕನ ಅಂಗಡಿಯಿಂದ ಸಾಮಾನುಗಳನ್ನು ಕೊಂಡು ಕೊಳ್ಳಲು ಕೂಲಿಯವರಿಗೆ ಮನಸ್ಸಿರಲಿಲ್ಲ. ಆದರೆ ಕೆಲಸ ಹೋದೀತೆಂಬ ಭಯದಿಂದ ಮಾತ್ರ ಅವರು ಅದಕ್ಕೆಲ್ಲಾ ಒಪ್ಪಿದ್ದರು. ಆದರೆ ಇದನ್ನು ವಿರೋಧಿಸಬೇಕೆಂದು ಎಲ್ಲರಿಗೂ ಹಂಬಲ. ಕೊನೆಗೂ ಈ ಹಂಬಲವನ್ನು ಹತ್ತಿಕ್ಕಿದರೂ, ಕೆಲವೊಮ್ಮೆ ಮೇರೆ ಮೀರಿ ಪಿಸುಮಾತುಗಳಾಗಿ ಬೆಳೆದು ಪ್ರತ್ಯಕ್ಷವಾಗಿ ಕಾಣುತ್ತಿದ್ದುವು. ಹೀಗೆ ವಿರೋಧಾಭಿಪ್ರಾಯವುಂಟಾಗಿದೆಯೆಂದು ಯಜಮಾನನಿಗೆ ಗೊತ್ತಾದರೂ ಗೊತ್ತಾಗ ದಂತೆ ಅವನು ನಟಿಸುತ್ತಿದ್ದ.

ಕೂಲಿಕಾರರ ಪಿಸುಮಾತುಗಳನ್ನು ತಡೆಗಟ್ಟಲು ಮಾಲಿಕ ಹಾಗೂ ಕಾಳಿಕುಟ್ಟಿ ಬಿಲ್ಲವತ್ತಿಯರು ಆಲೋಚನೆ ನಡೆಸಿ ಒಂದು ಮಾರ್ಗ ಕಂಡುಹಿಡಿದರು. ಚಹಮಂಗ ಡಿಯ ಮ್ಯಾನೇಜರ್ ಆಗಿ ತಮ್ಮ ಹಿರಿಯ ಮಗಳು ಸುಮತಿಯನ್ನೂ ಜವುಳಿ ಅಂಗಡಿಯ ಮ್ಯಾನೇಜರ್ ಆಗಿ ಎರಡನೇ ಮಗಳಾದ ನಳಿನಿಯನ್ನೂ ನೇಮಿಸುವುದೆಂದು ಅವರು ತೀರ್ಮಾನಿಸಿದರು. ಹೊಸ ಮ್ಯಾನೇಜರರುಗಳು ಬಂದಾಗ ಕೆಲವು ದಿನಗಳ ಮಟ್ಟಿಗೆ ಕೆಲಸದವರ ಪಿಸುಮಾತುಗಳು ಕಡಿಮೆಯಾದುವು.

ಸುಮತಿ ನಳಿನಿಯರು, ತಮ್ಮ ತಂದೆತಾಯಿಯವರ ಮಾತಿನಂತೋ ಅಥವಾ ತಮ್ಮ ಇಚ್ಛಾನುಸಾರವಾಗಿಯೋ ಕೆಲಸದವರೊಡನೆ ಮಾತನಾಡುವುದಕ್ಕೂ ನಗುವು ದಕ್ಕೂ ಪ್ರಾರಂಭಿಸಿದರು. ಅದುವೇ ಬೆಳೆದು ಕೆಲವು ಪ್ರಣಯ ಚೇಷ್ಟೆಗಳೂ ನಡೆದವು. ಆದರೆ ಅದೊಂದೂ ಗಣನೀಯ ವಿಷಯವೆಂದು ಯಾರೂ ಪರಿಗಣಿಸಲಿಲ್ಲ.

ಒಂದು ದಿನ ಬಹಳ ಮಂದಿ ಚಹ ಕುಡಿಯುತ್ತಾ ಕುಳಿತಿದ್ದಾಗ, ಸುಮತಿ ಒಂದು ಗ್ಲಾಸು ಚಹ ತಂದು ಕುಂಜುಮಿಗೆ ಕೊಟ್ಟಳು. ಅವನು ಗ್ಲಾಸನ್ನು ಹಿಡಿಯದೆ ಅವಳ ಕೈಯನ್ನು ಹಿಡಿದು ಎಳೆದ. ಚಹದ ಗ್ಲಾಸು ಕೆಳಗೆ ಬಿದ್ದು ಒಡೆಯಿತು. ಅವಳು ಅವನ ಕೈಯಿಂದ ಬಿಡಿಸಿಕೊಂಡಳು. ಅವನಿಗೆ ಸಿಟ್ಟು ಬಂದು ಕೆಟ್ಟ ಮಾತನಾಡಿದ. ಈ ಕಾರಣವನ್ನು ಮುಂದಿಟ್ಟುಕೊಂಡು ಕೂಲಿ ಆಳುಗಳ ಮಧ್ಯೆ ದೊಡ್ಡ ಗಲಭೆಯಾಯಿತು. ಅದನ್ನು ಪರಿಹರಿಸಲು ಧಣಿಗಳೇ ಮಧ್ಯೆ ಪ್ರವೇಶಿಸಬೇಕಾಯಿತು. ಅವನು ಹೀಗೆಂದು ಹೇಳಿದ:

"ಅವನು ಅವಳ ಕೈ ಹಿಡಿದುದರಿಂದ ದೇವರ ಶಾಪವೇನೂ ಬಾರದು. ಆದರೆ ಅವನಿಗೆ ಕೈಹಿಡಿಯಬೇಕೆಂದಿರುತ್ತಿದ್ದರೆ ಯಾರೂ ಕಾಣದಂತೆ ಹಿಡಿಯಬಹು ದಿತ್ತಲ್ಲಾ?".

ಜವುಳಿ ಅಂಗಡಿಯಲ್ಲೂ ಕೆಲವು ಪ್ರಣಯ ಚೇಷ್ಟೆಗಳು ನಡೆಯುತ್ತಿದ್ದುವು. ಪ್ರೇಮಪತ್ರಗಳ ಕಾರಣ ಆರಂಭವಾದ ಈ ಕಲಹ ಜವುಳಿ ಅಂಗಡಿಯವರಿಗೂ ಫ್ಯಾಕ್ಟರಿ ಕೆಲಸದವರಿಗೂ ಮಾತಿನ ಜಗಳದ ವರೆಗೆ ಮುಟ್ಟಿತು. ಅದೇ ಮುಂದೆ ಬೆಳೆದು ಹೊಡೆದಾಟ ಬಡಿದಾಟಗಳಲ್ಲಿ ಕೊನೆಗೊಂಡಿತು. ಕೊನೆಗೆ ಎಲ್ಲಿಂದಲೋ

ಹೇಗೋ ಎಂಬಂತೆ ಒಂದು ಪಿಸುಮಾತು ಹೊರಟಿತು; ಇದೆಲ್ಲಾ ಮಾಲಿಕ ಮತ್ತು ಕಾಳಿಕುಟ್ಟಿ ಬಿಲ್ಲವೆತ್ತಿಯರ ವ್ಯಾಪಾರದ ತಂತ್ರವಾಗಿದೆಯೆಂದು.

ಈ ಸಮಯದಲ್ಲೇ ಕೆಲವು ಹುರಿಹಗ್ಗದ ಫ್ಯಾಕ್ಟರಿಗಳಲ್ಲಿಯ ಕೆಲಸದವರು ಆಂದೋಲನಕ್ಕೆ ತೊಡಗಿದ್ದು. ಮರೀದು ಸಾಹೇಬನ ಫ್ಯಾಕ್ಟರಿಯಲ್ಲಿ ಆದ ಗಲಾಟೆಯ ಸಂಬಂಧವಾಗಿ ಅಂತೋಣಿ ಮತ್ತು ಇತರರನ್ನು ಪೋಲೀಸರು ಹಿಡಿದುಕೊಂಡು ಹೋದದ್ದು, ವೇಲಾಯುಧನನ್ನು ಕೊಂದುದು ಮುಂತಾದ ವಿಷಯಗಳು ಕುಂಜು ಶಂಕರನಿಗೆ ಗೊತ್ತಾಗಿ ಅವನು ಮರೀದು ಸಾಹೇಬನ ಮಗ, ಚಿಕ್ಕ ಮಾಲಿಕನನ್ನು ಅಭಿನಂದಿಸಿದನು. ಈ ಸಂದರ್ಭದಲ್ಲಿ ಸಣ್ಣ ಮಾಲಿಕ ಮತ್ತು ಮೇಸ್ತ್ರಿಗಳು ಸೇರಿ ಕೆಲಸದವರಲ್ಲಿ ಕ್ರಿಸ್ತಾನಿಗಳೆಂದೂ, ಬಿಲ್ಲವರೆಂದೂ ಎರಡು ಜಾತೀಯ ಗುಂಪುಗಳಾಗಿ ವಿಭಾಗಿಸಿದರು.

× × ×

ಕುಟ್ಟಿಪ್ಪನ ಚಹದಂಗಡಿಯ ಆಚೆ ಇರುವುದು ಸಣ್ಣಿಯ ಚಹದಂಗಡಿ. ಮರೀದು ಸಾಹೇಬನ ಫ್ಯಾಕ್ಟರಿಯ ಮೇಸ್ತ್ರಿಗಳು ಮತ್ತು ಗುಮಾಸ್ತರೇ ಮೊದಲಾದ ಉದ್ಯೋಗಸ್ಥರು ಅಲ್ಲಿ ಚಹ ಕುಡಿಯುವುದಾಗಿತ್ತು. ಕುಟ್ಟಿಪ್ಪನ ಚಹದಂಗಡಿಯಲ್ಲಿ ಕೆಲಸದವರು ಚಹ ಕುಡಿಯುವುದು, ಪೇಪರು ಓದುವುದು, ದೇಶವಿದೇಶ ವಾರ್ತೆಗಳ ಬಗ್ಗೆ ಮಾತಾಡುವುದು ಮುಂತಾದುವು ಸಣ್ಣಿಯ ಚಹದಂಗಡಿಗೆ ಬರುವವರಿಗೆ ಸಣ್ಣವಿಷಯವಾಗಿತ್ತು. ಕುಟ್ಟಿಪ್ಪನ ಚಹದಂಗಡಿಯತ್ತ ನೋಡಿಕೊಂಡು ವ್ಯಂಗ್ಯ ಮಾತುಗಳನ್ನು ಹೇಳಿ ನಗುವುದು ಸಣ್ಣಿಗೆ ಒಂದು ಅಭ್ಯಾಸವಾಗಿತ್ತು. ಕೆಲವೊಮ್ಮೆ ಕುಟ್ಟಿಪ್ಪನೂ ಏನಾದರೂ ಹೇಳುತ್ತಿದ್ದ, ಅವನಿಗೆ ಕೇಳುವಂತೆ.

ವೇಲಾಯುಧನ ಮರಣ, ಶವಸಂಸ್ಕಾರ ಇವೆಲ್ಲಾ ಕಳೆದ ಮೇಲೆ ಸಣ್ಣಿಯ ಚಹದಂಗಡಿಯಿಂದ ಹೊರಡುತ್ತಿದ್ದ ಪರಿಹಾಸದ ಮಾತುಗಳಿಗೆ ಒಂದು ವರ್ಗೀಯ ಬಣ್ಣ ಬಂದಿತ್ತು. ಕ್ರಮೇಣ ಆ ಮಾತುಗಳು ಬಿಸಿಯಾಗಿಯೂ ತೀಕ್ಷ್ಣವಾಗಿಯೂ ಬರತೊಡಗಿದುವು. ಒಂದು ದಿನ ಸಣ್ಣಿ, ಗಟ್ಟಿಯಾಗಿ ಹೇಳಿದ:

"ಬಿಲ್ಲವರಿಗೆ ಮತ್ಸರ !—ಕ್ರಿಸ್ತಾನಿಗಳು ಧನಿಕರಾಗೋದನ್ನು ಕಂಡರೆ, ಬಿಲ್ಲವರಿಗೆ ಹೊಟ್ಟೆಕಿಚ್ಚು ! ಅದಕ್ಕಾಗಿ ಕ್ರಿಸ್ತಾನಿಗಳ ಕಂಪೆನಿಗಳಲ್ಲಿ ಕೆಲಸ ಮಾಡೋರಿಗೆ ಹೇಳಿ ಉದ್ರೇಕಿಸಿ ಗಲಾಟೆಯೆಬ್ಬಿಸೋದು."

ಬೀಡಾದಂಗಡಿಯ ವಾಸು ಅಡಿಕೆ ಕತ್ತರಿಸುವ ಚೂರಿಯನ್ನು ಹಿಡಿದುಕೊಂಡು ಹೇಳಿದ:

"ಬಿಲ್ಲವರೊಡನೆ ಆಡುವ ಆಟ ನಿಮಗ ಒಳ್ಳೆಯದಲ್ಲ ! ಬಿಲ್ಲವರಿಂದ ಕಲಸ ಮಾಡಿಸಿ ಕ್ರಿಸ್ತಾನಿಗಳು ಧನಿಕರಾಗಬೇಕೆಂದು ಗ್ರಹಿಸಿದರೆ, ಅದು ನಡೆಯುವ ಕೆಲಸ."

ಕುಟ್ಟಪ್ಪನ ಚಹದಂಗಡಿಯಲ್ಲೂ ಪಕ್ಕದ ದಿನಸಿ ಅಂಗಡಿಯಲ್ಲೂ ವೈದ್ಯಾಲಯ ದಲ್ಲೂ ವಾಸುವಿನ ಮಾತು ಪ್ರತಿಧ್ವನಿಗೊಂಡುವು. ಅವರೊಂದಿಗೆ ಸಣ್ಣಿಯ ಮಾತು ಗಳು ಮೊದಲಿಗಿಂತಲೂ ತೀಕ್ಷ್ಣವಾಗಿದ್ದುವು. ಅಷ್ಟೇ ಗಡುಸಾದ ಮಾತುಗಳು ಎದುರುಭಾಗದವರಿಂದಲೂ ಬರುತ್ತಿದ್ದುವು. ಯಾವುದೇ ಸಂದರ್ಭದಲ್ಲಿ ಒಂದು ವರ್ಗೀಯ ಕಲಹವುಂಟಾಗಬಹುದಾದ ಪರಿಸ್ಥಿತಿಗೆ ಅದು ಮುಟ್ಟಿತು.

ಕುಂಜು ಶಂಕರನ್ ಈ ಸಂಗತಿಗಳನ್ನೆಲ್ಲಾ ತಿಳಿದುಕೊಂಡ. ಅವನು ಹೇಳಿದ:

"ಕ್ರಿಸ್ತಾನಿ ಮಾಲಿಕರು ಹಣ ಸಂಪಾದಿಸಲು ಕ್ರಿಸ್ತಾನಿ ಜಾತಿಯ ಕೂಲಿ ಆಳು ಗಳಿಂದ ಕೆಲಸ ಮಾಡಿಸಬೇಕು, ಬಿಲ್ಲವ ಜಾತಿಯ ಮಾಲಿಕರು ಬಿಲ್ಲವ ಜಾತಿಯ ಕೂಲಿ ಯವರಿಂದ ಕೆಲಸ ಮಾಡಿಸಬೇಕು. ಅದು ನ್ಯಾಯ. ನಾನು ಹಾಗೇ ಮಾಡುತ್ತಿರು ವುದು. ನನ್ನ ಕೆಲಸದವರೆಲ್ಲಾ ಬಿಲ್ಲವರಾಗಿದ್ದಾರೆ. ಆದರೆ ಅವರಿಗೆ ಜಾತಿಪ್ರೇಮ ವಿಲ್ಲ. ಏಕೆಂದರೆ ನಾನು ಧನಿಕನಾಗೋದು ನನ್ನ ಜಾತಿಯವರಿಗೇ ಮತ್ಸರ."

ಕ್ರಿಸ್ತಾನಿ ಕೂಲಿ ಆಳುಗಳು ಅವರ ಜಾತಿಯ ಧಣಿಗಳಲ್ಲಿ ಪ್ರೀತಿಯುಳ್ಳವರಾಗಿರ ಬೇಕೆಂದು ವರೀದು ಸಾಹೇಬರ ಫ್ಯಾಕ್ಟರಿಯ ಉದ್ಯೋಗಸ್ಥರೂ ಚಹದಂಗಡಿಯ ಸಣ್ಣಿಯೂ ಪ್ರಚಾರ ಮಾಡುತ್ತಿದ್ದರು. ಬಿಲ್ಲವ ಜಾತಿಯ ಕೆಲಸದವರೆಲ್ಲಾ ಅವರ ಜಾತಿಯ ಮಾಲಕರಲ್ಲಿ ಪ್ರೀತಿಯುಳ್ಳವರಾಗಿರಬೇಕೆಂದು ಕುಂಜುಶಂಕರ ಮಾಲಿಕನೂ ಕಾಳಿಕುಟ್ಟಿ ಬಿಲ್ಲವತ್ತಿಯೂ ದರ್ಜಿಯ ವಾಸುವೂ ಪ್ರಚಾರ ಮಾಡುತ್ತಿದ್ದರು. ಬಿಲ್ಲವ ಕೂಲಿ ಆಳುಗಳು ಕ್ರಿಸ್ತಾನಿ ಮಾಲಿಕರ ಕೆಲಸಕ್ಕೆ ಹೋದರೆ ಹೆಚ್ಚು ಕೂಲಿ ಪಡೆಯ ಬೇಕೆಂದು ಅವರು ವಾದಿಸಿದರು. ಕುಂಜುಶಂಕರ ಮಾಲಿಕನು ಎರಡು ಮೂರು ಸಲ ಬಿಲ್ಲವ ಸಮಾಜದವರ ಸಮ್ಮೇಳನದಲ್ಲಿ ಭಾಗವಹಿಸಿದ. ಮನೆಯಲ್ಲಿ ಎಲ್ಲರಿಗೂ ಕಾಣುವಂತೆ ಶ್ರೀ ನಾರಾಯಣಗುರು ಸ್ವಾಮಿಗಳ ಪಟವನ್ನೂ ತಂದಿಟ್ಟ. ಸಮಾಜದ ಉದ್ಧಾರಕ್ಕೆಂದು ಸಂಘಕ್ಕೆ ಎರಡು ರೂಪಾಯಿಯನ್ನೂ ಕೊಟ್ಟ. ವರೀದು ಸಾಹೇಬನ ಮನೆಗೆ ಧರ್ಮಗುರುಗಳು ಆಗಾಗ ಬರುವುದಕ್ಕೆ ಪ್ರಾರಂಭಿಸಿದರು.

ಕುಟ್ಟಪ್ಪನ ಅಂಗಡಿಯಲ್ಲಿ ಕುಳಿತ ಆ ತೆಳ್ಳಗಿನ ಮನುಷ್ಯ ಹೇಳಿದ:

"ಕೂಲಿ ಕೆಲಸದವರಿಗೆ ಜಾತಿಯಿಲ್ಲ, ಮತವಿಲ್ಲ, ರಾಜ್ಯವಿಲ್ಲ."

ಅಂತೋಣಿ ಮೆಲುದನಿಯಲ್ಲಿ ಹೇಳಿದ:

"ಮಾಲಿಕ ಕ್ರಿಸ್ತಾನಿಯಾದರೂ ಬಿಲ್ಲವನಾದರೂ ಮಾಲಿಕ ಮಾಲಿಕನೆ. ಹಾಗೇ ಕೆಲಸದವರು ಯಾರೇ ಆದರೂ ಅವರು ಕೆಲಸದವರೇ ಆಗಿದ್ದಾರೆ."

ಆ ಮಾತು ಎಲ್ಲಾ ಚಹದಂಗಡಿಗಳಲ್ಲೂ ದಾರಿಬದಿಗಳಲ್ಲೂ ಕೂಲಿ ಆಳುಗಳ ಮನೆಗಳಲ್ಲೂ ಪ್ರತಿಧ್ವನಿಸಿತು. ಪಿಲಿಯ ಮನೆಗೆ ಬಂದಿದ್ದ ವೃದ್ಧ ಔಸೇಪ್ಪಾ ಅವ ಳೊಡನೆ ಹೇಳಿದ:

"ನಿನ್ನ ಮಕ್ಕಳೂ ನನ್ನ ಮಕ್ಕಳೂ ಚಹದಂಗಡಿಯಲ್ಲಿ ಕುಳಿತುಕೊಂಡು ಹೇಳೋ ದೇನೆಂದು ಗೊತ್ತೋ? ಕೂಲಿ ಆಳುಗಳಿಗೆ ಜಾತಿ ಮತ ಒಂದೂ ಬೇಡೆಂದು. ಮಾಲಿಕ

ಕ್ರಿಸ್ತ್ಯಾನಿಯಾದರೂ, ಬಿಲ್ಲವನಾದರೂ, ನಾಯರ್ ಆದರೂ ಕೆಲಸದವರಿಗೆ ಸರಿಯಾಗಿ ಕೂಲಿ ಕೊಡಲಾರರೆಂದು."

"ಅದು ಸತ್ಯ" ಏಲಿ ಒಪ್ಪಿದಳು.

"ಜಾತಿ ಮತವೊಂದೂ ಇಲ್ಲದಿದ್ದರೆ......"

"ಇಲ್ಲದಿದ್ದರೇನು?"

"ನಾವು ಕ್ರಿಸ್ತ್ಯಾನಿಗಳಲ್ಲವೇ?"

"ಮಾಲಿಕನೂ ಕ್ರಿಸ್ತ್ಯಾನಿಯಲ್ಲವೇ? ಅವನ ಮನೆಯನ್ನು ಕಾಯುವ ಕಾವಲುಗಾರನೂ ಕ್ರಿಸ್ತ್ಯಾನಿಯಲ್ಲವೇ? ಆ ಕ್ರಿಸ್ತ್ಯಾನಿಯೇ ಅಲ್ಲವೆ ಅಂತೋಣಿಯ ತಂದೆಯನ್ನೂ ನನ್ನನ್ನೂ ರಸ್ತೆಗೆ ದೂಡಿ ಹಾಕಿದ್ದು? ಕ್ರಿಸ್ತ್ಯಾನಿ ಮಾಲಿಕನೆ ಅಲ್ಲವೆ ಮಾಳಿಗೆಯ ಮೇಲೆ ನಿಂತುಕೊಂಡು ಅದನ್ನು ನೋಡಿದ್ದು? ಆದರೂ ಅವನು ಅಲ್ಲಿಂದ ಚಕಾರ ಶಬ್ದ ಎತ್ತಿದನೋ?"

ವರ್ಕಿ ಒಳಗೆ ಮಲಗಿಕೊಂಡಿದ್ದಲ್ಲಿಂದಲೇ ಕೇಳಿದ:

"ಅವರು ಬಂದರೋ?"

"ಈಗ ಬಂದಾರು."

## ( ೯ )

ಪ್ರತಿ ವಾರದಲ್ಲೂ ಕೆಲಸದವರು ಸಾಲ ತೀರಿಸಲು ಸಂಬಳ ಬೇಡಿ ತೆಗೆದುಕೊಳ್ಳುತ್ತಿದ್ದರು. ಆದರೆ ಒಮ್ಮೆಯಾದರೂ ಅವರ ಸಾಲ ಸಂಪೂರ್ಣ ತೀರುತ್ತಿರಲಿಲ್ಲ. ಸಂಪೂರ್ಣ ಸಾಲ ತೀರಿಸುವುದಕ್ಕೆ ಬೇಕಾದಷ್ಟು ಹಣ ಅವರಿಗೆ ಸಿಗುತ್ತಲೂ ಇರಲಿಲ್ಲ. ಹೇಗಾದರೂ ಮಾಡಿ ಎಲ್ಲಾ ಸಾಲವನ್ನು ತೀರಿಸಲು ಅವರು ತಯಾರಾದರೂ ವ್ಯಾಪಾರಿಗಳು ಅದಕ್ಕೆ ಸಮ್ಮತಿಸುತ್ತಿರಲಿಲ್ಲ.

ಸ್ವಲ್ಪ ಸಾಲ ಉಳಿಯಬೇಕು. ಎಂದರೇನೇ ಅವರು ಮತ್ತೂ ಸಾಲ ಪಡೆಯುತ್ತಿದ್ದರು. ಸಾಲ ತೆಗೆದುಕೊಂಡರೆ ಮಾತ್ರ ಸುಳ್ಳು ಲೆಕ್ಕ ಬರೆಯಲು ಸಾಧ್ಯವಾಗುತ್ತಿತ್ತು. ಹೀಗಿದ್ದುದರಿಂದ ಕೂಲಿಯಾಳುಗಳು ದಿನಸಿ ಅಂಗಡಿಗಳಲ್ಲಿ ಮತ್ತು ಬೀಡಿ ಅಂಗಡಿಗಳಲ್ಲಿ ನಿತ್ಯ ಸಾಲ ಪಡೆಯುವವರಾಗಿದ್ದರು. ಅವರು ಕೆಲಸ ಮಾಡುವುದು ಹಣ ಪಡೆಯುವುದು ಸಾಲ ತೀರಿಸುವ ಉದ್ದೇಶವಾಗಿತ್ತು.

ಅಂದು ಶನಿವಾರ, ಕೂಲಿ ಪಡೆಯುವ ದಿನ. ಅಂತೋಣಿ ರೋಕಿಯರಿಗೆ ಅಂದು ಕೂಲಿಯಿಲ್ಲ. ಅವರು ತಮ್ಮ ಪಾಲಿನ ಕೆಲಸ ಮುಗಿಸಿರಲಿಲ್ಲ. ಮತ್ತಾಯಿ ಸೈಮನ

ರಿಗೆ ಏನೋ ಅಲ್ಪ ಸ್ವಲ್ಪ ಸಿಗಬಹುದು. ಅವರು ಮತ್ತು ಇತರ ನಾಲ್ವರು ಫ್ಯಾಕ್ಟರಿಯ ಅಂಗಳದಲ್ಲಿ ನಿಂತಿದ್ದರು. ಎಲ್ಲಾ ಕೆಲಸದವರ ಕೈಗಳಲ್ಲೂ ಬುಟ್ಟಿಗಳು ಮತ್ತು ಚಿಕ್ಕ ಕುಕ್ಕೆಗಳು ಇದ್ದುವು. ಅಂದು ಅವರಿಗೆ ಅಂಗಡಿಯಿಂದ ಸಾಲ ಸಿಗುವುದು. ಅದಕ್ಕಾಗಿಯೇ ಅವರು ಬುಟ್ಟಿಗಳನ್ನೂ ಕುಕ್ಕೆಗಳನ್ನೂ ತಂದಿರುವುದು.

ಆದರೆ ಅಂದು ಪ್ರತಿಯೊಬ್ಬರ ಮುಖದಲ್ಲೂ ಒಂದು ರೀತಿಯ ಮ್ಲಾನತೆ— ಒಂದು ಉರಿಗೊಳ್ಳಿಯ ನೆರಳಿನಂತೆ. ಹಿಂದಿನ ರಾತ್ರಿ ಕೋಳಿ ಕೂಗುವ ವರೆಗೂ ಕುಟ್ಟಪ್ಪನ ಚಹದಂಗಡಿಯಲ್ಲಿ ಆಲೋಚನಾ ಸಭೆ ನಡೆದಿತ್ತು. ಆ ತೆಳ್ಳಗಿನ ಮನುಷ್ಯ, ಪದ್ಮನಾಭನ್, ಅಚ್ಯುತನ್, ಪಪ್ಪನ್, ಅಂತೋಣಿ, ರೋಕಿ, ಮತ್ತಾಯಿ, ಸೈಮನ್ ಎಲ್ಲರೂ ಆ ಸಭೆಯಲ್ಲಿ ಭಾಗವಹಿಸಿದ್ದರು. ಅಂದು ಫ್ಯಾಕ್ಟರಿಯ ಮಗ್ಗಗಳ ಅಕ್ಕಪಕ್ಕದಲ್ಲಿ ದ್ವೇಷಪೂರಿತ ಗೊಣಗಾಟ, ಗುಸುಗುಸು ಮಾತುಗಳು ನಡೆಯುತ್ತಿದ್ದುವು.

ಅಂದು ಆಫೀಸಿನ ಒಳಗೂ ಏನೋ ಮಂತ್ರಾಲೋಚನೆಗಳು ನಡೆಯುತ್ತಿದ್ದುವು. ಮಧ್ಯಾಹ್ನದ ಹೊತ್ತಿಗೆ ಪೋಲೀಸ್ ಇನ್ಸ್‌ಪೆಕ್ಟರರು ಆಫೀಸಿಗೆ ಬಂದು ಬಹಳ ಹೊತ್ತಿನ ವರೆಗೆ ಚಿಕ್ಕ ಮಾಲಿಕನಲ್ಲಿ ಮಾತನಾಡಿ ಹೋದರು. ಮೇಸ್ತ್ರಿ ಅಂತ್ಯಕಾಲದ ರುದ್ರನಂತೆ ಕೂಲಿಕಾರರನ್ನು ದೃಷ್ಟಿಸಿ ನೋಡುತ್ತಿದ್ದ. ಕ್ಲಾರ್ಕರು ಕ್ಯಾಷಿಯರ್ ಮೊದಲಾದವರು ಏನೋ ನಡೆಯಲಿದೆ ಎಂಬ ರೀತಿ ಅಲ್ಲಿ ಇಲ್ಲಿ ನಿಂತಿದ್ದರು. ಕೂಲಿ ಕೊಡುವ ಸಮಯವಾಯಿತು. ಮೇಸ್ತ್ರಿ ಅಂಗಳದಲ್ಲಿ ನಿಂತು ಆಜ್ಞಾಪಿಸಿದ. "ಹಣ ತೆಗೆದುಕೊಳ್ಳಲು ಒಬ್ಬೊಬ್ಬರಾಗಿ ಬನ್ನಿರಿ."

"ಅದೇನು ಮೇಸ್ತ್ರಿ ಇಂದು ಇಷ್ಟು ಸಿಟ್ಟು?" ಸೈಮನ್ ಕೇಳಿದ.

"ಮತ್ತೇನು, ನಿಮ್ಮನ್ನೆಲ್ಲಾ ಪೂಜೆ ಮಾಡಬೇಕೊ?"

ಸೈಮನ್ ಏನೋ ಹೇಳಲು ಉದ್ದೇಶಿಸಿದ. ಮತ್ತಾಯಿ ಅವನನ್ನು ತಡೆದ.

ಕ್ಯಾಷಿಯರನ ಹತ್ತಿರ ಕುಳಿತಿದ್ದ ಗುಮಾಸ್ತನು ಒಂದು ಹೆಸರನ್ನು ಕೂಗಿದ. ಮೇಸ್ತ್ರಿ ಅದನ್ನು ಗಟ್ಟಿಯಾಗಿ ಕೂಗಿ ಹೇಳಿದ:

"ವರ್ಕಿ ಶೌರಿ. ಇದ್ದಾನೊ?"

"ಇದ್ದೇನೆ" ವೃದ್ಧ ಶೌರಿ ಗುಂಪಿನ ಹಿಂದಿನಿಂದ ಕೂಗಿ ಹೇಳಿದ. ಮಡಲಿನ ಕುಕ್ಕೆಯನ್ನು ಮಡಚಿ ಕಂಕುಳಲ್ಲಿ ಇಟ್ಟುಕೊಂಡು ಕ್ಯಾಷಿಯರನ ಮೇಜಿನ ಹತ್ತಿರ ಹೋದ. ಅವನು ಒಂದು ಬೆಳ್ಳಿಯ ರೂಪಾಯಿಯನ್ನೂ ಸ್ವಲ್ಪ ಚಿಲ್ಲರೆ ಹಣವನ್ನೂ ಎಣಿಸಿ ಮೇಜಿನ ಮೇಲೆ ಇಟ್ಟ. ಅವನು ಅದನ್ನು ತೆಗೆದು ಲೆಕ್ಕ ಮಾಡಿ ನೋಡಿದ. ಅವನ ಮುಖ ಕಪ್ಪಾಯಿತು.

"ಇದು ಯಾರ ಲೆಕ್ಕ ! ಇದು ಎಲ್ಲಿಯ ಲೆಕ್ಕ !"

"ಬೇಕಿದ್ದರೆ ತೆಗೆದುಕೊಂಡು ಹೋಗು !" ಮೇಸ್ತ್ರಿ ಗರ್ಜಿಸಿದ.

"ಬೇಕಿದ್ದರೆ ತೆಗೆದುಕೊಂಡು ಹೋಗಬೇಕೇ? ಯಾರದ್ದೂ ನನಗೆ ಪುಕ್ಕಟೆಯಾಗಿ ಬೇಕಿಲ್ಲ" ಶೌರಿ ಹಣವನ್ನು ಮೇಜಿನ ಮೇಲೆ ಇಟ್ಟು ಹೇಳಿದ:

"ನನಗೆ ನನ್ನ ಕೂಲಿಹಣವನ್ನು ಕೊಟ್ಟರೆ ಸಾಕು."

"ಅದೇ ನಿನ್ನ ಕೂಲಿಹಣ" ಕ್ಯಾಶಿಯರ್ ಗಟ್ಟಿಯಾಗಿ ಹೇಳಿದ.

"ಹಾಗಿದ್ದರೆ ಲೆಕ್ಕ ತಪ್ಪಿರಬೇಕು, ಸಾರ್."

"ನೀನು ನನಗೆ ಲೆಕ್ಕ ಕಲಿಸಲು ಬಂದಿದ್ದೀಯಾ?"

"ಕಲಿಸಲು ಅಲ್ಲ ಸಾರ್, ಕಲಿಯಲು. ನನ್ನ ಲೆಕ್ಕದಲ್ಲಿ ನನಗೆ ಐದು ರೂಪಾಯಿ ಸಿಗಬೇಕು."

"ಎಲ್ಲರಿಗೂ ಕೊಟ್ಟು ಆದಮೇಲೆ ನಿನ್ನ ಲೆಕ್ಕ ಹೇಳಬಹುದು. ಸ್ಥಳ ಬಿಟ್ಟು ಆಚೆ ನಿಲ್ಲು."

"ಶೌರಿ ದೂರ ನಿಂತ. ಗುಮಾಸ್ತನು ಮತ್ತೊಂದು ಹೆಸರುಹಿಡಿದು ಕೂಗಿದ:

"ಕಂಡನ್ ಕೊಚ್ಚಯ್ಯಪ್ಪನ್."

"ಕಂಡನ್ ಕೊಚ್ಚಯ್ಯಪ್ಪನ್ ಇದ್ದಾನೊ?" ಮೇಸ್ತ್ರಿ ಕೂಗಿ ಕೇಳಿದ.

"ಇದ್ದೇನೆ" ಕೈಯಲ್ಲಿರುವ ಕುಕ್ಕೆಯನ್ನು ಅಂಗಳದಲ್ಲಿಟ್ಟು, ಅವನು ಒಂದು ಪ್ರೇತದಾಕಾರದಲ್ಲಿ ಕ್ಯಾಶಿಯರನ ಮೇಜಿನ ಹತ್ತಿರ ಹೋದ.

ಕೊಚ್ಚಯ್ಯಪ್ಪ ವೃದ್ಧ. ಶೌರಿಗಿಂತಲೂ ವೃದ್ಧ ಮತ್ತು ಆ ಕಂಪೆನಿಯಲ್ಲಿ ಹಳಬನಾಗಿದ್ದ. ಫ್ಯಾಕ್ಟರಿಯ ಆರಂಭಕಾಲದಿಂದಲೇ ಅಲ್ಲಿ ಕೆಲಸ ಮಾಡುತ್ತಿದ್ದವನಾಗಿದ್ದ. ವೃದ್ಧನಾಗಿದ್ದರೂ, ಕೆಲಸ ಮಾಡಲು ಸಾಕಷ್ಟು ಶಕ್ತಿಯಿಲ್ಲದಿದ್ದರೂ ಅವನು ಅದರಿಂದ ನಿವೃತ್ತನಾಗಲಿಲ್ಲ. ಅವನು ಕೆಲಸ ಮಾಡದಿದ್ದರೆ ಅವನ ಕುಟುಂಬ ಉಪವಾಸ ಬೀಳಬೇಕು. ಮುದುಕಿ ಹೆಂಡತಿ, ವಿಧವೆ ಮಗಳು ಮತ್ತು ಮೂವರು ಮಕ್ಕಳೂ ಇದ್ದರು. ಆ ಮುದುಕನನ್ನೇ ಆಶ್ರಯಿಸಿ. ಮುದಿತನ ಮತ್ತು ಸಾವಿನೊಂದಿಗೆ ಹೋರಾಡಿಕೊಂಡು ಕೆಲಸ ಮಾಡುತ್ತಿದ್ದ ಅವನು.

ಕ್ಯಾಶಿಯರ್ ಒಂದು ಬೆಳ್ಳಿಯ ರೂಪಾಯಿ ಮತ್ತು ಕೆಲವು 'ಚಕ್ರ'[೧]ಗಳನ್ನು ತೆಗೆದು ಮೇಜಿನ ಮೇಲಿಟ್ಟ. ಕೊಚ್ಚಯ್ಯಪ್ಪನ್ ಅದನ್ನು ತೆಗೆದು ಲೆಕ್ಕ ಮಾಡಿ ನೋಡಿದ. ಅವನ ಶರೀರವಿಡೀ ನಡುಗಿತು. ಕೈಯಲ್ಲಿದ್ದ ಹಣ ಮೇಜಿನ ಮೇಲೂ, ಅದರ ಸುತ್ತರೂ ಚೆಲ್ಲಾಪಿಲ್ಲಿಯಾಗಿ ಬಿತ್ತು.

"ನನ್ನ ಚೇರ್ತಲೆ[೨] ಭಗವತೀ !" ಅವನು ಎದೆಗೆ ಹೊಡೆದುಕೊಂಡ.

"ನಿನ್ನ ಭಗವತಿಯನ್ನು ತೆಗೆದುಕೊಂಡು ಹೋಗೊ ಇಲ್ಲಿಂದ" ಮೇಸ್ತ್ರಿ ಗದರಿಸುತ್ತಾ ಕೊಚ್ಚಯ್ಯಪ್ಪನ ಹತ್ತಿರ ಬಂದ. ಅವನ ಕಬ್ಬಿಣದಂತಹ ಕೈ ಕೊಚ್ಚಯ್ಯಪ್ಪನ ಹೆಗಲ ಮೇಲೆ ನೇರವಾಗಿ ಏರಿತು.

---

೧. ಒಂದು ಚಕ್ರ ಎಂದರೆ ಹದಿನಾರು ಕಾಸು. ಮಲೆಯಾಳ ನಾಡಿನಲ್ಲಿ ಪ್ರಚಾರದಲ್ಲಿತ್ತು.

೨. ಕೇರಳ ಪ್ರಾಂತ್ಯದ ಆಲಪ್ಪಿಯ ಸಮೀಪ "ಚೇರ್ತಲೆ" ಎಂಬುದು ಒಂದು ಊರು. ಅಲ್ಲಿ ಒಂದು ಪ್ರಸಿದ್ಧ ದೇವೀಕ್ಷೇತ್ರವಿದೆ—ಚೇರ್ತಲೆ ಭಗವತಿಯೆಂದು ಪ್ರಖ್ಯಾತವಾಗಿದೆ.

"ಮುಟ್ಟಿದರೆ ಜಾಗ್ರತೆ" ಕಟುವಾದ ಒಂದು ಆಜ್ಞೆ !

ಮೇಸ್ತ್ರಿ ಹೌಹಾರಿ ಹಿಂದೆ ತಿರುಗಿದ.

"ಯಾರೋ ಅದು?"

"ನಾನು, ಮೇಸ್ತ್ರಿ—ರೋಕಿ" ರೋಕಿ ಮುಂದೆ ಬಂದು ನಿಂತ. ಅವನನ್ನು ಹಿಂದಕ್ಕೆ ಸರಿಸಿ ಅಂತೋಣಿ ಎದುರು ಬಂದು ನಿಂತ. ಅವನು ಸಾವಧಾನವಾಗಿ ಹೇಳಿದ:

"ಕ್ಯಾಷಿಯರ್ ಅವರೇ, ಕೆಲಸ ಮಾಡಿದ್ದಕ್ಕೆ ನೀವು ಹಣ ಕೊಡೋದು. ಲೆಕ್ಕ ಕೇಳುವಾಗ ಮುಖವೇಕೆ ಚೇಳು ಕುಟುಕಿದಂತಾಗುತ್ತೆ ಅಲ್ಲದೆ ಕತ್ತು ಹಿಚುಕಿ ದಂತಾಗುತ್ತೆ."

"ಅದೇ ನಾನೂ ಕೇಳೋದು" ಶೌರಿ ಅಂತೋಣಿಯ ಮಾತನ್ನೆ ಉಚ್ಚರಿಸಿದ.

"ಒಬ್ಬೊಬ್ಬರಿಗೂ ಲೆಕ್ಕ ಹೇಳಿ ಹಣ ಕೊಡೋದಾದರೆ ಮಧ್ಯರಾತ್ರಿಯಾಗುತ್ತೆ ಅಷ್ಟೆ !" ಕ್ಯಾಷಿಯರ್ ತಿರಸ್ಕಾರವಾಗಿ ಹೇಳಿದ.

ಆಫೀಸಿನ ಒಳಗಿನಿಂದ ಒಬ್ಬ ಗುಮಾಸ್ತ ಹೊರಗೆ ಬಂದ. ಕ್ಯಾಷಿಯರನ ಕಿವಿ ಯಲ್ಲೇನೋ ಹೇಳಿದ. ಅವನ ಮುಖಭಾವ ಬದಲಾಯಿತು. ಅವನು ಹೇಳಿದ:

"ಹಾಗಿದ್ದರೆ ಶೌರಿ ಈಚೆ ನಿಲ್ಲು. ನಿನ್ನ ಲೆಕ್ಕವನ್ನೇ ಮೊದಲು ಹೇಳೋಣ" ಲೆಕ್ಕ ಪುಸ್ತಕವನ್ನು ನೋಡುತ್ತಾ ಅವನು ಹೇಳಿದ:

"ಈ ವಾರ ನಿನ್ನ ಕೂಲಿಹಣ ನಾಲ್ಕು ರೂಪಾಯಿ ಇಪ್ಪತ್ತೆರಡು ಚಕ್ರ."

"ಹುಂ" ಶೌರಿ ಒಪ್ಪಿದ.

"ಅದರಲ್ಲಿ ಮೇಸ್ತ್ರಿಯ ಕಮೀಶನ್ ಒಂದೂಕಾಲು ರೂಪಾಯಿ ಹಿಡಿದಿದ್ದೇವೆ."

"ಅದೆಂತಹ ಕಮೀಶನ್ ಸಾರ್?"

"ರೂಪಾಯಿಗೆ ನಾಲ್ಕಾಣೆಯಂತೆ ಕಮೀಶನ್ ಹಿಡಿಯಲಾಗಿದೆ."

"ರೂಪಾಯಿಗೆ ನಾಲ್ಕು ಚಕ್ರವಲ್ಲವೇ ಸಾರ್, ಇದುವರೆಗೆ ತೆಗೆದುಕೊಳ್ಳು ತ್ತಿದ್ದುದು?"

"ಇನ್ನುಮೇಲೆ ನಾಲ್ಕಾಣೆ ಹಿಡಿಯಲಾಗುವುದು."

"ಹುಂ ! ಇದು ಸುಲಿಗೆ."

"ಅದೇಕೋ ಸುಲಿಗೆಯೆಂದು ಹೇಳುತ್ತೀ?" ಮೇಸ್ತ್ರಿ ಘರ್ಜಿಸಿದ.

"ಅಲ್ಲದೆ ಮತ್ತೇನು ಹೇಳಬೇಕು?"

ಅಂತೋಣಿ ಹೇಳಿದ:

"ನಾವು ದುಡಿದ ಹಣವನ್ನು ಮೇಸ್ತ್ರಿ ಹೀಗೆ ದೋಚಿಕೊಂಡರೆ ಸುಲಿಗೆಯೆಂದಲ್ಲದೆ ಮತ್ತೇನು ಹೇಳಬೇಕು, ಮೇಸ್ತ್ರಿಯವರೆ?"

"ನಿನ್ನನ್ನಲ್ಲ ಕೇಳಿದ್ದು."

"ಸುಲಿಗೆ ಮಾಡುತ್ತಿರುವುದನ್ನು ಹೇಳೋದಕ್ಕೆ ಅನ್ಯರ ಅನುಮತಿಯೇಕೆ?"

"ನೀನಿನ್ನು ಮಾತೆತ್ತಿದರೆ......"

"ಮಾತೆತ್ತಿದರೇನು?" ರೋಕಿ ಮುಂದೆ ಬಂದ. ಅಂತೋಣಿ ತಮ್ಮನನ್ನು ಹಿಂದಕ್ಕೆ ದೂಡಿದ. ಕ್ಯಾಶಿಯರ್ ಸಮಾಧಾನದಿಂದ ಹೇಳಿದ:

"ನೀನು ಸ್ವಲ್ಪ ಸುಮ್ಮನಿರು ಮೇಸ್ತ್ರಿ" ಅವನು ಆಮೇಲೆ ಶೌರಿಯೊಡನೆ ಹೇಳಿದ:

"ಈಗ ರೂಪಾಯಿಗೆ ನಾಲ್ಕಾಣೆ ಮೇಸ್ತ್ರಿ ಕಮಿಶನ್ ಹಿಡಿದುಕೊಂಡೇ ಕೂಲಿ ಕೊಡೋದು. ಇಷ್ಟವಿಲ್ಲದವರು ಹಣ ತೆಗೆದುಕೊಳ್ಳಬೇಕಾಗಿಲ್ಲ."

"ಅದಕ್ಕೇ ಹೇಳೋದು ಸುಲಿಗೆಯೆಂದು, ಹೋಗಲಿ ಮತ್ತೂ ಇದೆಯಲ್ಲ ಸಾರ್, ಮೂರುವರೆ ರೂಪಾಯಿ ಮತ್ತು ಚಿಲ್ಲರೆ?"

"ಅದರಿಂದ ಹದಿನಾಲ್ಕು ಚಕ್ರ ಕಡಿಮೆ ಮಾಡಿದೆ."

"ಅದೇಕೆ?"

ಮೇಸ್ತ್ರಿ ಅರಸಿನ ಬಣ್ಣದ ಒಂದು ಕಾಗದದ ತುಂಡು ತೆಗೆದುಕೊಂಡು ಶೌರಿಯ ಮುಂದೆ ನೀಡಿದ:

"ಇದೋ, ಇದನ್ನು ತೆಗೆದುಕೊ."

"ಏನದು?"

"ಇದು...... ಇದು ನಾಟಕದ ಟಿಕೇಟು."

"ಯಾವ ನಾಟಕ? ಯಾರ ನಾಟಕ?"

"ಒಂದು ನೃತ್ಯನಾಟಕ. ನೀನದನ್ನು ಮೊದಲು ನೋಡು."

"ನಾನದನ್ನು ನೋಡಿದ್ದೇನೆ. ಇನ್ನೂ ನೋಡಬೇಕಿಲ್ಲ."

"ನೀನು, ಮತ್ತಾಯಿ ಆಶಾನನ ನೃತ್ಯನಾಟಕವನ್ನು ನೋಡಿರುವೆಯಾ?"

"ನನಗೆ ಅದನ್ನು ನೋಡುವ ಇಚ್ಛೆಯಿಲ್ಲ."

"ನಿನಗೆ ನೋಡಲು ಇಷ್ಟವಿಲ್ಲವಾದರೆ ನೀನು ನೋಡಬೇಡ. ಆದರೆ ಇದನ್ನು ತೆಗೆದುಕೊ."

"ನನಗದು ಬೇಡವೆಂದಲ್ಲವೆ ಹೇಳಿದ್ದು?"

"ಎಲ್ಲರೂ ತೆಗೆದುಕೊಳ್ಳುವಾಗ ನೀನೊಬ್ಬ ಬೇಡವೆಂದು ಹೇಳಿದರೆ?......"

"ಎಲ್ಲರೂ ತೆಗೆದುಕೊಳ್ಳುತ್ತಾರೆಂದು ಯಾರು ಹೇಳಿದರು?" ಹಿಂದಿನಿಂದ ಮತ್ತಾಯಿ ಕೂಗಿ ಕೇಳಿದ.

"ನೀನು ಬಾಯಿ ಮುಚ್ಚಿ ಕುಳಿತುಕೊ" ಮೇಸ್ತ್ರಿ ಗದರಿಸಿದ.

"ನಿನಗೆ ಇದನ್ನು ತೆಗೆದುಕೊಳ್ಳಲು ಮನಸ್ಸಿದೆಯೋ ಇಲ್ಲವೋ?" ಕ್ಯಾಶಿಯರ್ ಸಿಡುಕಿನಿಂದ ಶೌರಿಯೊಡನೆ ಕೇಳಿದ.

"ಹುಂ! ಇದೂ ಒಂದು ರೀತಿಯ ಸುಲಿಗೆ! ಆದರೂ ಇದೆಯಲ್ಲ ಮೂರು ರೂಪಾಯಿ ಮತ್ತು ಚಿಲ್ಲರೆ ಹಣ."

"ಅದರಿಂದ ಒಂದು ರೂಪಾಯಿ ಹಿಡಿಯಲಾಗಿದೆ."

"ಅದೇಕೆ?"

"ಸಂಭಾವನೆ."

"ಅದೇಕೆ ಈಗ ಸಂಭಾವನೆ?"

"ಹೆಡ್ ಕ್ಲಾರ್ಕನ ಮಗಳ ಮದುವೆಗೆ."

"ದೇವರೇ!" ಶೌರಿ ಎದೆಗೆ ಹೊಡೆದುಕೊಂಡ. ಕ್ಯಾಶಿಯರ್ ಹೇಳಿದ:

"ನೀನು ದೇವರನ್ನು ಕರೆಯಬೇಕಿಲ್ಲ. ನಿನಗೆ ಇಷ್ಟವಿಲ್ಲವಾದರೆ ಬೇಡ. ನಾನು ಅವರಲ್ಲಿ ಹೇಳಿಬಿಡುತ್ತೇನೆ, ಅವನು ಕೊಡಲಿಲ್ಲವೆಂದು."

"ಕೊಡಿ ಸಾರ್ ಕೊಡಿ! ಉಳಿದ ಹಣವನ್ನಾದರೂ ಇಲ್ಲಿ ಕೊಡಿ."

"ಅದರಲ್ಲಿ ಶೇಕಡಾ ಇಪ್ಪತ್ತೈದು ಭಾಗದಷ್ಟು ಕೂಲಿ ಕಡಮೆ ಮಾಡಿದ್ದೇವೆ. ಕಡಿಮೆ ಮಾಡುವ ಅಂಶವನ್ನು ಕಳೆದು ಉಳಿದ ಹಣವನ್ನು ನಿನಗೆ ಕೊಟ್ಟದ್ದು."

ಇದನ್ನು ಕೇಳಿ ಕೊಚ್ಚೆಯ್ಯಪ್ಪನ್ "ನನ್ನ ಚೇರ್ತಲೆ ಭಗವತೀ" ಎಂದು ಉದ್ಗಾರ ವೆತ್ತಿದ. ಅವನ ಶರೀರ ನಡುಗಿತು. ಮೇಜನ್ನು ಆಧರಿಸಿ ಹಿಡಿದು ಕೆಳಗೆ ಕುಳಿತು ಕೊಂಡ.

"ಸಂಬಳ ಕಡಿಮೆ ಮಾಡಲು ಸಾಧ್ಯವಿಲ್ಲ" ಹಿಂದೆ ನಿಂತಿದ್ದ ಸೈಮನ್ ಕೂಗಿ ಹೇಳಿದ.

"ಯಾರೋ ಅದು, ಹಾಗೆ ಹೇಳಿದ್ದು?" ಮೇಸ್ತ್ರಿ ಗರ್ಜಿಸಿದ.

"ಕೆಲಸ ಮಾಡೋರು ಹೇಳಿದ್ದು" ರೋಕಿ ಹೇಳಿದ.

"ಹಾಗಿದ್ದರೆ ನೀವೆಲ್ಲಾ ಹೊರಟು ಹೋಗಿರಿ! ಕಂಪೆನಿ ಮುಚ್ಚಲಾಗುವುದು."

"ನಮಗೆ ಕೊಡಬೇಕಾದ್ದನ್ನು ಕೊಟ್ಟು ಮುಚ್ಚಿಕೊಳ್ಳಿ!" ಹಿಂದೆ ನಿಂತಿದ್ದ ಜಾನು ಕೂಗಿ ಹೇಳಿದಳು.

"ಯಾರೇ ನೀನು ಹಾಗೆ ಹೇಳಲು?" ಮೇಸ್ತ್ರಿಯ ಮುಖದಲ್ಲಿ ಹಾಸ್ಯಭಾವ ಮೂಡಿತ್ತು.

ಜಾನು ಮುಂದೆ ಬಂದು ನಿಂತು ಕಟುವಾಗಿ ಹೇಳಿದಳು:

"ಮೇಸ್ತ್ರಿಗೆ ನಾನು ಗೊತ್ತಿಲ್ಲವೇ? ಜಾನು ಯಾರೆಂಬುದು ಗೊತ್ತಿಲ್ಲವೇ? ಈ ಕಡೆಗೆ ಒಮ್ಮೆ ನೋಡು, ಗೊತ್ತಾಗುತ್ತದೆ."

"ನಿನ್ನ...... ನಿನ್ನನ್ನು......" ಮೇಸ್ತ್ರಿಯ ಕೈ ಅವಳ ಕೊರಳನ್ನು ಹಿಡಿಯಿತು.

"ಹೂಂ" ರೋಕಿ ಮುಷ್ಟಿಯಿಂದ ಮೇಸ್ತ್ರಿಯ ಎದೆಗೆ ಗುದ್ದಿದ.

ಮೇಸ್ತ್ರಿಯ ಹಿಡಿತ ತಪ್ಪಿತು. ಜಾನು ಅವನ ಕೆನ್ನೆಗೆ ಒಂದೇಟು ಬಿಗಿದಳು.

ಆಫೀಸಿನ ಒಳಗಿನಿಂದ ಐದಾರು ಮಂದಿ ಧಾಂಡಿಗರು ಹೊರಗೆ ಬಂದರು. ಚಹ ದಂಗಡಿಯ ಸಣ್ಣೆ ಗೇಟಿನ ಹತ್ತಿರ ನಿಂತು ಕೂಗಿ ಹೇಳಿದ:

"ನುಗ್ಗಿರಿ, ಮುನ್ನುಗ್ಗಿರಿ!"

ಹೊರಗಿನಿಂದ ಕೆಲವರು ಕೂಲಿ ಆಳುಗಳ ಗುಂಪಿನ ಮಧ್ಯಕ್ಕೆ ನುಗ್ಗಿದರು. ಹೊಡೆತ! ಗುದ್ದು! ಒದೆತ!...... ಅಟ್ಟಹಾಸಗಳು! ರೋದನಗಳು!

"ನೋಡುವುದೇನು, ಹೊಡೆಯಿರೊ, ಹೊಡೆಯಿರಿ" ರೋಕಿ ಗಟ್ಟಿಯಾಗಿ ಕೂಗಿ ಹೇಳಿದ.

ಮತ್ತಾಯಿ, ಸೈಮನ್, ಜಾನು, ರೋಕಿ, ಶೌರಿ, ಕೊಚ್ಚೆಯ್ಯಪ್ಪನ್ ಎಲ್ಲರೂ ಹೊಡೆಯುತ್ತಿದ್ದರು. ಅವರಿಗೂ ಹೊಡೆತ ಬೀಳುತ್ತಿತ್ತು.

ಅಂತೋಣಿ ಕೈಕಟ್ಟಿ ನಿಂತಿದ್ದ. ಅವನಿಗೂ ಹೊಡೆತಗಳು ಬೀಳುತ್ತಿದ್ದುವು.

ಆಫೀಸಿನ ಒಳಗೂ ಅಟ್ಟಹಾಸಗಳು, ರೋದನಗಳು ಕೇಳುತ್ತಿದ್ದುವು. ಮೇಜುಗಳು ಮಗುಚಿಬಿದ್ದುವು. ಕುರ್ಚಿಗಳು ಮುರಿದು ಚೆಲ್ಲಲ್ಪಟ್ಟುವು.

"ಕೊಲ್ಲಿರೊ, ಕೊಲ್ಲಿ !" ಅತಿ ಗಟ್ಟಿಯಾಗಿ ರೋಕಿಯ ಧ್ವನಿ ಹೊರಟಿತು.

"ಪೋಲೀಸರು ಬರುತ್ತಾರೆ!" ಯಾರೋ ಕೂಗಿ ಹೇಳಿದರು. ಅಂತೋಣಿ ಮಂದಹಾಸ ಬೀರಿದ.

× × ×

ಅರ್ಧರಾತ್ರಿ ಕಳೆದಿತ್ತು. ವರ್ಕಿಯ ಮನೆಯಲ್ಲಿ ಏಲಿ ಮತ್ತು ಅನ್ನೆ ಚಾವಡಿಯಲ್ಲಿ ಮಲಗಿದ್ದರು. ಚಾವಡಿಯ ಮಧ್ಯದಲ್ಲಿ ಎಣ್ಣೆ ಕಡಿಮೆಯಾಗಿ ಕುಂದಿದ್ದ ಚಿಮಣಿ ಎಣ್ಣೆಯ ದೀಪ ಪ್ರೇತದಂತೆ ಮಿನುಗುತ್ತಿತ್ತು !

"ಅವರು ಬಂದರೇ?" ಒಳಗಿನಿಂದ ವರ್ಕಿ ಕೂಗಿ ಕೇಳಿದ.

ಉತ್ತರವಿಲ್ಲ.

"ಕೂಹೂ !—ಕುಕ್ಕು ಕುಕ್ಕುಕ್ಕೂ !" ದೂರದ ಎತ್ತರವಾದ ಯಾವುದೋ ಮರದಿಂದ ದುಃಶ್ಶಕುನ ಸೂಚಕವಾಗಿ ಒಂದು ಹಕ್ಕಿ ಕೂಗುತ್ತಿತ್ತು.

"ಬಂದರೇನೇ?" ನಿದ್ರೆಯಲ್ಲಿ ನಡೆಯುವಂತೆ ವರ್ಕಿ ಚಾವಡಿಗಿಳಿದ.

"ಬಂದರೇನೇ?" ಅವನು ಅಂಗಳಕ್ಕಿಳಿದು ಮೆಲ್ಲಮೆಲ್ಲನೆ ಹೆಜ್ಜೆಯಿಟ್ಟು ನಡೆದ.

"ಬಂದರೋ?" ಕಿರುದಾರಿಯಿಂದ ಆ ಪ್ರಶ್ನೆ ಕೇಳಿಬಂತು.

ಏಲಿ ಹೊಡೆದೆಬ್ಬಿಸಿದಂತೆ ಎದ್ದಳು. ಅವಳು ಹುಚ್ಚುಹಿಡಿದವರಂತೆ ಕೂಗಿ ಕೇಳಿದಳು:

"ಎಲ್ಲಿ?...... ಎಲ್ಲಿ ಹೋದಿರಿ?"

ಅವಳು ಓಡಿಹೋಗಿ ಅಂಗಳಕ್ಕಿಳಿದಳು.

"ಬಂದರೋ?"

"ಎಲ್ಲಿ ಹೋದಿರಿ?"

"ಕೂಹೂ !...... ಕುಕ್ಕು, ಕುಕ್ಕುಕ್ಕೂ !" ಆ ಹಕ್ಕಿಯು ದೂರದಿಂದ ಕೂಗರೆಯುತ್ತಿತ್ತು.

## ( ೧೦ )

"ಹೋಗಬೇಡಿ, ಅಯ್ಯೋ ಹೋಗಬೇಡಿ !" ಎಂದು ರೋದಿಸುತ್ತ ಏಲಿ ವರ್ಕಿಯನ್ನು ತಡೆದಳು.

"ನೀನಾಚೆ ತೊಲಗು. ನನಗೆ ನನ್ನ ಮಕ್ಕಳನ್ನು ಕಾಣಬೇಕು" ವರ್ಕಿ ಮುಂದೆ ಹೋದ.

"ಹೋಗಬೇಡಿ !" ಏಲಿ ವರ್ಕಿಯನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಅವಳು ದೈನ್ಯದಿಂದ ಹೇಳಿದಳು:

"ಅವರು ಬರುತ್ತಾರೆ, ನೀವು ಹೋಗಬೇಡಿ."

ವರ್ಕಿಗೆ ನಿತ್ರಾಣ ಬಂತು. ಅವನು ದಾರಿಯಲ್ಲೇ ಕುಳಿತ. ಏಲಿ ಅವನನ್ನು ಆಧರಿಸಿ ಹಿಡಿದುಕೊಂಡಳು.

"ನನ್ನ ಮಕ್ಕಳು ಬರುವರೋ?" ಅವನು ಆಕಾಶ ನೋಡಿಕೊಂಡು ಕೇಳಿದ.

"ಬರುತ್ತಾರೆ—ಈಗ ಬರುತ್ತಾರೆ."

"ಅವರು ಬರುವ ವರೆಗೆ...... ನಾನು ಸ್ವಲ್ಪ ಮಲಗುತ್ತೇನೆ" ಅವನು ಅಲ್ಲೇ ಮಲಗಿದ. ಏಲಿ ಅವನ ತಲೆಯನ್ನೆತ್ತಿ ತನ್ನ ತೊಡೆಯಲ್ಲಿಟ್ಟುಕೊಂಡಳು.

"ಏಲಿ, ಅವರು...... ಅ–ವ–ರು ಬ–ರು–ವಾ–ಗ......" ಅವನು ಅವಳ ಕೈಯನ್ನು ಹಿಡಿದು ಎದೆಗೆ ಒತ್ತಿಕೊಂಡ.

"ದೇ–ವ–ರೇ !" ಅವನೊಮ್ಮೆ ಹೊರಳಾಡಿದ. ಬಾಯಿ ತೆರೆಯಿತು. ಕಣ್ಣು ಮುಚ್ಚಿತು.

"ದೇವರೇ !" ಏಲಿಯು ವೇದನೆಯಿಂದ ನರಳಿದಳು. ಕೊರಳು ಉಬ್ಬಿತು, ಅವಳು ಹಿಂದಕ್ಕೆ ಬಿದ್ದಳು.

"ಅಮ್ಮಾ ! ಅಪ್ಪಾ !" ಎಂದು ಕೂಗುತ್ತಾ ಅನ್ನೆ ಓಡಿಬಂದಳು.

ಅವಳು ಗಟ್ಟಿಯಾಗಿ ಬೊಬ್ಬೆ ಇಟ್ಟಳು. ಅವಳ ಆಕ್ರಂದನ ಕೇಳಿ ನೆರೆಮನೆಯವರೆಲ್ಲಾ ಎಚ್ಚತ್ತು ಓಡಿ ಬಂದರು. ವರ್ಕಿಯ ಮೃತದೇಹದೊಡನೆ ಬಿದ್ದಿದ್ದ ಏಲಿಯನ್ನು ಮನೆಗೆ ತಂದು ಚಾವಡಿಯಲ್ಲಿ ಮಲಗಿಸಿದರು. ಬೆಳಗ್ಗಿನ ಜಾವದ ವರೆಗೆ ಅವಳಿಗೆ ಮೈಯಲ್ಲಿ ಎಚ್ಚರವಿರಲಿಲ್ಲ. ಅನ್ನೆ ತನ್ನ ತಂದೆಯ ಮೃತದೇಹದ ಕಾಲಿನ ಬಳಿಯಲ್ಲಿ ಗಲ್ಲಕ್ಕೆ ಕೈಕೊಟ್ಟು ಕುಳಿತಿದ್ದಳು. ಅವಳು ಕೂಗಲಿಲ್ಲ. ಏಲಿಗೆ ಆಗಾಗ ಹೊಡೆದೆಬ್ಬಿಸಿದಂತೆ ಎಚ್ಚರವಾಗುತ್ತಿತ್ತು. ಸ್ವಪ್ನದಲ್ಲೋ ಎಂಬಂತೆ ಅವಳು ಕೇಳಿದಳು:

"ಹೋದಿರಾ? ಹೋಗಿಬಿಟ್ಟಿರಾ?"

ತಂದೆತಾಯಿಯರನ್ನೂ ಬಂಧುಗಳನ್ನೂ ಉಪೇಕ್ಷಿಸಿ ಜಾತಿಯವರನ್ನೂ ಊರವರನ್ನೂ ಧಿಕ್ಕರಿಸಿ, ಅರ್ಧರಾತ್ರಿಯಲ್ಲಿ ಅವನೊಂದಿಗೆ ಹೊರಟು ಬಂದಿದ್ದಳು, ಅವಳು.

ಅವನ ಕೈಹಿಡಿದು ಅವಳು ಬಹುದೂರ ನಡೆದಿದ್ದಳು. ದುಃಖ ಪ್ರವಾಹವನ್ನೂ ಪ್ರತಿಕೂಲ ಪರಿಸ್ಥಿತಿಗಳನ್ನೂ ಎದುರಿಸಿ ಆ ಆತ್ಮಗಳೆರಡು ಒಂದಾಗಿದ್ದುವು. ಅವರು ಅನುಭವಿಸಿದ ದುಃಖಗಳಿಗೆ ಮಾಧುರ್ಯವುಂಟಾಗಿತ್ತು.

"ಹೋದಿರಾ? ಹೊರಟುಹೋದಿರಾ?" ಅವಳು ಶೂನ್ಯತೆಯತ್ತ ನೋಡಿ ಕೇಳುತ್ತಿದ್ದಳು.

ಯಾರೂ ಉತ್ತರಿಸಲಿಲ್ಲ. ಅನ್ನೆ ಆಗಲೂ ಗಲ್ಲಕ್ಕೆ ಕೈಯಿಟ್ಟು ಕುಳಿತಿದ್ದಳು. ಜೀವನದ ಒಂದು ಅಲೆಯೆದ್ದು ಕೆಳಗೆ ಉರುಳಿತ್ತು. ಮತ್ತೊಂದು ಅಲೆ ಏರಲು ಹವಣಿಸುತ್ತಿದೆ.

× × ×

ಅಂತೋಣಿ, ರೋಕಿ, ಮತ್ತಾಯಿ, ಸೈಮನ್‌ರನ್ನೂ ವೃದ್ಧರಾದ ಕೊಚ್ಚೆಯ್ಯಪ್ಪನ್, ಶೌರಿಯರನ್ನೂ ಅಲ್ಲದೆ ಇನ್ನೂ ಕೆಲವರನ್ನು ಪೋಲೀಸರು ಲಾಕಪ್ಪಿನಲ್ಲಿ ಹಾಕಿದ್ದರು. ಸ್ಟೇಶನಿನ ಪಕ್ಕದಲ್ಲಿ ವಾಸಿಸುವವರು ಹೇಳಿದರು, ಬೆಳಗಾಗುವ ತನಕ ಅಲ್ಲಿಂದ ರೋದನ ಕೇಳುತ್ತಿತ್ತೆಂದು.

ಸೂರ್ಯೋದಯವಾದೊಡನೆ ಆಲಪ್ಪಿ ಪಟ್ಟಣದ ಪರಿಸರಗಳಿಂದ ಪಟ್ಟಣದೆಡೆಗೆ ಒಂದು ಬಿರುಗಾಳಿ ಬೀಸಲು ಪ್ರಾರಂಭವಾಯಿತು.

"ಸಾಯೋಣ, ನಾವೆಲ್ಲರೂ ಸಾಯೋಣ!" ಕಿರುದಾರಿಗಳಿಂದ ರಸ್ತೆಗೆ ಬಂದ ಕೂಲಿ ಆಳುಗಳಲ್ಲಿ ಒಬ್ಬನು ಆವೇಶಭರಿತನಾಗಿ ತನ್ನನ್ನು ತಾನೇ ಮರೆತು ಕೂಗಿ ಹೇಳಿದ.

"ಸ್ವಲ್ಪ ಸ್ವಲ್ಪ ಜನರು ಸಾಯೋದಕ್ಕಿಂತ ಎಲ್ಲರೂ ಒಂದಾಗಿ ಸಾಯೋದು ಒಳ್ಳೆಯದು" ಮತ್ತೊಬ್ಬ ಕೂಲಿ ಆಳು ಹೇಳಿದ.

"ನಾವೆಲ್ಲಾ ಒಂದಾದರೆ ನಮ್ಮನ್ನು ಕೊಲ್ಲುವವರು ಯಾರು?" ಇನ್ನೊಬ್ಬ ಕೇಳಿದ.

"ಒಂದಾಗೋಣ, ನಾವೆಲ್ಲಾ ಒಂದಾಗೋಣ!" ಬೇರೊಬ್ಬನು ಪ್ರಚೋದನಾಪೂರ್ವಕವಾಗಿ ಜೋರಾಗಿ ಹೇಳಿದ.

"ಒಂದಾಗೋಣ, ನಾವು ಒಂದಾಗೋಣ!" ಎಲ್ಲರೂ ಒಟ್ಟಾಗಿ ದನಿಗೂಡಿದರು.

ಎಲ್ಲಾ ರಸ್ತೆಗಳಿಂದಲೂ ಕೂಲಿಕಾರರು ಪ್ರವಾಹದೋಪಾದಿಯಲ್ಲಿ ಬಂದರು. ದಾರಿಯು ಸಂದುಗೊಂದುಗಳಿಂದ ಸಾವಿರಗಟ್ಟಲೆ ಬಿಸಿಯುಸಿರು ಹೊರಟು ಒಂದಾಯಿತು, ಸಾವಿರಾರು ಕಂಠಗಳಿಂದ ಉದ್ಭವಿಸಿದ ಪ್ರತಿಜ್ಞೆಗಳು ಒಂದಾಗಿ, ಅಂತರಿಕ್ಷದಲ್ಲಿನ ಗುಡುಗುಗಳಂತೆ ಪ್ರತಿಧ್ವನಿಸಿದವು.

ಆ ಮನುಷ್ಯ!—ಆ ತೆಳ್ಳಗಿನ ಮನುಷ್ಯ! ಅವನು ಆ ಪ್ರವಾಹಗಳ ಮಧ್ಯದಲ್ಲಿ ಮಿಂಚಿನಂತೆ ಆಚೀಚೆ ಓಡಾಡುತ್ತಿದ್ದ. ವರೀದು ಸಾಹೇಬನ ಫ್ಯಾಕ್ಟರಿಯ ಗೇಟಿನ ಬಳಿ

ನಿಂತಿದ್ದ ಮೇಸ್ತ್ರಿ, ಆ ತೆಳ್ಳಗಿನ ಮನುಷ್ಯನೆಡೆಗೆ ಬೆರಳು ತೋರಿಸಿಕೊಂಡು ಕಿರಿಯ ಮಾಲಿಕನಿಗೆ ಹೇಳಿದ:

"ಅವನು !—ಅವನೇ ಆ ಬಂಡುಗಾರ."

ಫ್ಯಾಕ್ಟರಿಗಳ ಗೇಟುಗಳು ತೆರೆದಿದ್ದುವು. ಆದರೆ ಕೆಲಸದವರು ಒಳಗೆ ಪ್ರವೇಶಿಸ ಲಿಲ್ಲ. ಮಗ್ಗಗಳು ಅಲುಗಾಡಲಿಲ್ಲ. ರಸ್ತೆಗಳು ಸಂಧಿಸುವೆಡೆಗಳಲ್ಲೂ ಅಂಗಡಿಗಳ ಮುಂದೆಯೂ ಸಾಲು ವೃಕ್ಷಗಳ ಕೆಳಗೂ ಬೋಟು ರೇವುಗಳಲ್ಲೂ ಬಸ್–ಸ್ಟ್ಯಾಂಡು ಗಳಲ್ಲೂ ಕೂಲಿಕಾರರು ಗುಂಪುಗುಂಪುಗಳಾಗಿ ನಿಂತಿದ್ದರು.

"ವರ್ಕಿ ಸತ್ತ." ಅದೊಂದು ಪಿಸುಮಾತಿನ ಶಬ್ದವಾಗಿತ್ತು. ಅದು ಬಹು ಬೇಗನೆ ವ್ಯಾಪಿಸಿತು. ಅದು ವ್ಯಾಪಿಸುವುದರೊಂದಿಗೆ ಆ ಮಾತಿನ ರೂಪವೂ ಬದಲಾ ಯಿತು.

"ವರ್ಕಿಯನ್ನು ಕೊಂದರು !"

"ಯಾರದು ಆ ವರ್ಕಿ?" ಒಬ್ಬ ಕೆಲಸದವನು ಕೇಳಿದ.

"ವರ್ಕಿಯೊ? ಅಂತೋಣಿ ರೋಕಿಯರ ತಂದೆ ಆ ವ್ಯಕ್ತಿ !"

ಅಂತೋಣಿ ರೋಕಿಯರು ಎಲ್ಲರಿಗೂ ಗೊತ್ತು. ಅವರ ತಂದೆಯನ್ನು ಕೊಂದದ್ದು ಯಾರು?

"ಅಂತೋಣಿಯ ತಂದೆಯನ್ನು ಕೊಂದದ್ದು ಯಾರು?"

ಎಲ್ಲರೂ ಆ ಪ್ರಶ್ನೆಯನ್ನು ಕೇಳಿದರು. ಯಾರೂ ಉತ್ತರಿಸಲಿಲ್ಲ.

"ಎಲ್ಲರೂ ನಡೆಯಿರಿ ಅಂತೋಣಿಯ ಮನೆಗೆ !" ಅದು ಒಂದು ಪಿಸುಮಾತಿನ ಶಬ್ದವಾಗಿತ್ತು. ಅದು ಬಹುಬೇಗನೆ ವ್ಯಾಪಿಸಿತು.

"ನಾವಿನ್ನು ಸುಮ್ಮನಿದ್ದರೆ ನಮ್ಮನ್ನೆಲ್ಲಾ ಒಬ್ಬೊಬ್ಬರನ್ನಾಗಿ ಕೊಂದಾರು" ಒಬ್ಬ ಕೂಲಿಯವ ಹೇಳಿದ. ಅವನ ಹತ್ತಿರವಿದ್ದ ಮತ್ತೊಬ್ಬ ಕೇಳಿದ:

"ಸುಮ್ಮನಿರದೆ ಮತ್ತೇನು ಮಾಡೋದು?"

"ಮಾಡೋದಾ?...... ಮಾಡೋದು...... ನಾವಾಚೆ ಹೋಗುವ."

"ಅಲ್ಲಿ ಹೋಗಿ?"

"ಹೋಗಿಯಾ?...... ಅಲ್ಲಿ ಹೋದ ಮೇಲೆ ಹೇಳುವೆ."

ಅಂತೋಣಿಯ ಮನೆ ಮತ್ತು ಅದರ ಪರಿಸರ ಒಂದು ಮಾನವ ಮಹಾಸಾಗರ ವಾಯಿತು. ಮತ್ತೂ ಕೆಲವು ಪ್ರವಾಹಗಳು ಆ ಮಹಾಸಾಗರಕ್ಕೆ ಬಂದು ಸೇರಿದುವು.

"ಅಂತೋಣಿ ರೋಕಿಯರ ತಂದೆಯನ್ನು ಕೊಂದುಹಾಕಿದ್ದಾರೆ" ಎಲ್ಲರೂ ಗುಸು ಗುಸು ಮಾತಾಡುತ್ತಿದ್ದರು.

"ಯಾರು?"

"ಯಾರೆಂದು ಪ್ರತ್ಯೇಕ ಹೇಳಬೇಕಾ?...... ಇಲಿಯನ್ನು ಕೊಲ್ಲೋದು ಯಾವುದು? ಕೋಳಿಯನ್ನು ಹಿಡಿದುಕೊಂಡು ಹೋಗೋದು ಯಾವುದು?"

ಅನೆ ಎಚ್ಚತ್ತು ಕಣ್ಣು ತೆರೆದು ನೋಡಿದಳು. ಅಷ್ಟು ದೊಡ್ಡ ಜನಸಮೂಹ ವನ್ನು ಅವಳು ಹಿಂದೆಂದೂ ಕಂಡಿಲ್ಲ. ಏನೊಂದು ಕೂಗಾಟ! ಇವರು ಯಾಕೆ ಹೀಗೆ ಕೂಗಿಕೊಳ್ಳುವುದು? ಅನ್ನೆಗೆ ತೋರಿತು, ತನ್ನ ತಂದೆಯ ಮೃತದೇಹದಿಂದ ಸಾವಿರ ಗಟ್ಟಲೆ ಪಿಶಾಚಿಗಳು ಶರೀರ ಧರಿಸಿಕೊಂಡು ಬಂದಿವೆಯೆಂದು.

ಅವಳು ಅಂಗಳಕ್ಕಿಳಿದು ಜನಸಮೂಹದ ಮಧ್ಯೆ ಮುನ್ನುಗ್ಗಿದಳು. ಒಬ್ಬ ಕೂಲಿಯಾಳು ಹೇಳಿದ:

"ಅದು ಅಂತೋಣಿ ರೋಕಿಯರ ಸಹೋದರಿ."

ಮತ್ತೊಬ್ಬ ಅವಳ ತಲೆಯನ್ನು ನೇವರಿಸಿ ಕೇಳಿದ:

"ಮಗಳೇ ನೀನೆಲ್ಲಿಗೆ ಹೋಗೋದು?"

"ನಾನು ಹೋಗುತ್ತೇನೆ, ನನ್ನ ಅಣ್ಣಂದಿರನ್ನು ಕರೆದುಕೊಂಡು ಬರೋದಕ್ಕೆ."

ಅವಳ ಮಾತುಗಳನ್ನು ಕೇಳುತ್ತ ನಿಂತಿದ್ದವರು ಅನುಕಂಪದ ನಗೆ ಸೂಸಿದರು. ಒಬ್ಬ ಅವಳೊಡನೆ ಕೇಳಿದ:

"ಮಗಳೇ, ನೀನಲ್ಲಿ ಹೋದರೆ ಅವರು ಬರುವರೋ?"

"ಬರುವರು. ನಾನು ಹೋಗಿ ಕರೆದರೆ, ಅಣ್ಣಂದಿರು ಬರುವರು."

"ಪೋಲೀಸರು ಅವರನ್ನು ಬಿಡುವರೆ ಮಗಳೆ?"

"ಬಿಡುವರು. ನಾನು ಹೋಗಿ ಹೇಳಿದರೆ ಪೋಲೀಸರು ಬಿಡುವರು. ನಾನು ಹೇಳುವೆನು, ಅವರು ನನ್ನ ಅಣ್ಣಂದಿರೆಂದು, ನನ್ನ ತಂದೆ ಸತ್ತು ಮಲಗಿದ್ದಾರೆಂದು."

ಅವಳ ಮಾತು ಕೇಳುತ್ತ ನಿಂತವರು ಮತ್ತಷ್ಟು ನಕ್ಕರು. ಅನ್ನೆ ಮುಂದುವರಿದಳು.

ಅಲ್ಲೆಲ್ಲಾ ಒಂದು ಚಲನೆ! ಒಂದು ಪಿಸುಮಾತು.

"ಬಂದರು. ಅವರು ಬಂದರು."

"ಬಂದರಾ?...... ನನ್ನ ಮಕ್ಕಳು ಬಂದರಾ?" ಏಲಿ ಗಡಿಬಿಡಿಯಿಂದ ಎದ್ದಳು. ಅವಳು ಅಂಗಳಕ್ಕೆ ಓಡಿದಳು.

"ಬಂದರಾ?...... ಎಲ್ಲಿ? ಬಂದರಾ?"

ಎಲ್ಲರೂ ದಾರಿ ಬಿಟ್ಟುಕೊಟ್ಟರು. ಅಂತೋಣಿ ತನ್ನ ತಾಯಿಯನ್ನು ಆಧರಿಸಿ ಹಿಡಿದುಕೊಂಡ. ರೋಕಿ ಅನ್ನೆಯ ಕೈ ಹಿಡಿದುಕೊಂಡು ಅವರೆಲ್ಲಾ ಮನೆಗೆ ಬಂದರು. ಅವರ ಹಿಂದೆ ಇದ್ದಾನೆ ಆ ತೆಳ್ಳಗಿನ ಮನುಷ್ಯ. ಅವರು ಮನೆಯ ಚಾವಡಿಗೆ ಕಾಲಿಟ್ಟಾಗ, ಅವನು ಜನಸಮೂಹದಲ್ಲಿ ಮರೆಯಾದ.

ಏಲಿ ಅನ್ನೆಯರು ಮೃತದೇಹವನ್ನು ತಬ್ಬಿಕೊಂಡು ಅತ್ತರು. ರೋಕಿ ಕಣ್ಣೀರು ಒರಸಿದ. ಅಂತೋಣಿ ನೆಟ್ಟ ದೃಷ್ಟಿಯಿಂದ ನೋಡಿದನಷ್ಟೆ.

"ಪೋಲೀಸರು ಅವರನ್ನು ಬಿಟ್ಟರೋ?" ಒಬ್ಬ ಕೇಳಿದ.

"ಪೋಲೀಸರು ಅಲ್ಲಿ ಕಾದು ನಿಂತಿದ್ದಾರೆ. ಶವವನ್ನು ನೋಡೋದಕ್ಕಾಗಿ

ಅವರನ್ನು ಬಿಟ್ಟಿದ್ದಾರೆ. ಶವವನ್ನು ನೋಡಿ ಆದಮೇಲೆ ಅವರನ್ನು ಹಿಡಿದುಕೊಂಡು ಹೋಗುವರು."

ಪಾದ್ರಿಗಳು ಬಂದರು. ಕರ್ಮಗಳು ಮುಗಿದುವು. ಶವವನ್ನು ಎತ್ತಿ ಶವದ ಪೆಟ್ಟಿಗೆಯಲ್ಲಿ ಇಟ್ಟರು.

"ಹೋದಿರಾ?...... ನನ್ನನ್ನು ಬಿಟ್ಟು ಹೋದಿರಾ?" ಏಲಿ ಮೈಮರೆತು ಬಿದ್ದಳು. ಅನ್ನೆ ತಾಯಿಯನ್ನು ಹಿಡಿದುಕೊಂಡಳು.

ರಾಜೋಚಿತವಾದ ಗೌರವದಿಂದ ಕೂಡಿದ್ದಾಗಿತ್ತು, ಆ ಶ್ಮಶಾನಯಾತ್ರೆ. ಶವದ ಪೆಟ್ಟಿಗೆಯ ಹಿಂದಿನಿಂದ, ದುಃಖದ ಆಘಾತದಿಂದ, ದುಃಖಾಗ್ನಿಯ ಕಿಡಿಗಳನ್ನು ಉದು ರಿಸಿಕೊಂಡು, ಒಂದು ಮಾನವ ಮಹಾನದಿ ಹರಿಯುತ್ತಿತ್ತು. ದಾರಿಯ ಪಕ್ಕದಲ್ಲಿ ನಿಂತಿದ್ದ ಒಬ್ಬನು ಮೆರವಣಿಗೆಯಲ್ಲಿ ಭಾಗವಹಿಸಿದವನೊಡನೆ ಕೇಳಿದ:

"ಯಾರು ಸತ್ತದ್ದು?"

"ಅಂತೋಣಿಯ ತಂದೆ."

"ಅಂತೋಣಿ ಯಾರು?"

"ಅವನು ಗೊತ್ತಿಲ್ಲವೊ?" ಕೂಲಿಯುವ ಆಶ್ಚರ್ಯದಿಂದ ಕೇಳಿದ.

"ಮಾಲಿಕನೊ?"

"ಮಾಲಿಕ ಬಿಡು, ಅವನ ಅಪ್ಪ ಸತ್ತರೂ ನಾವು ಹೀಗೆ ಅವರ ಹಿಂದೆ ಹೋಗಲಾರೆವು."

"ಹಾಗಿದ್ದರೆ ಯಾರವನು?"

"ಅದಾ? ನಮ್ಮ ಕೂಲಿವರ್ಗದವರ ಮುಂದಾಳು ಆ ಅಂತೋಣಿ. ಅವನ ತಂದೆ ಸತ್ತದ್ದು."

ಶ್ಮಶಾನಯಾತ್ರೆಯು ಮರೀದು ಸಾಹೇಬನ ಮನೆಯ ಮುಂದಿನಿಂದ ದಾಟಿ ಹೋಯಿತು. ಅಂಗಳದಲ್ಲಿ ನಿಂತಿದ್ದ ಅವನು ಅದನ್ನು ನೋಡಿ ಒಳಗೆ ಹೋದ. ಕಿರಿಯ ಮಾಲಿಕ ಅಲ್ಲಿಯೇ ನಿಂತಿದ್ದ. ಅವನು ಹಲ್ಲು ಮಸೆದುಕೊಂಡು ಅಂಗಳದಲ್ಲಿ ನಿಂತಿದ್ದ. ಮೇಸ್ತ್ರಿಯೊಡನೆ ಏನೇನೋ ಹೇಳಿದ.

ಮೆರವಣಿಗೆಯ ಹಿಂದಿನಿಂದ ಆ ತೆಳ್ಳಗಿನ ಮನುಷ್ಯ ಏಕಾಂಗಿಯಾಗಿ ನಡೆಯು ತ್ತಿದ್ದ. ಅವನ ಕಡೆ ಬೆರಳು ತೋರಿಸಿ ಕಿರಿಯ ಮಾಲಿಕನಿಗೆ ಮೇಸ್ತ್ರಿ ಹೇಳಿದ:

"ಅವನು—ಅವನೇ ಆ ದಂಗೆ ಎಬ್ಬಿಸುವವನು!"

## ( ೧೧ )

ಆ ಮನುಷ್ಯ ಯಾರು?—ಆ ತೆಳ್ಳಗಿನ ಮನುಷ್ಯ?

ಕವಿಹೃದಯವುಳ್ಳ ಒಬ್ಬ ಕೂಲಿ ಹೇಳಿದ, ಅವನೊಬ್ಬ ಬಿಸಿ ಗಾಳಿಯೆಂದು! ಮತ್ತೊಬ್ಬ ಹೇಳಿದ ಅವನೊಬ್ಬ ಬೆಂಕಿಯ ಕಿಡಿಯೆಂದು.

ಗಾಳಿಯಂತೆಯೇ ಅವನು ಕಿರುದಾರಿಗಳಲ್ಲಿ ಮೆಲ್ಲಮೆಲ್ಲಗೆ ಸಾಗುವುದನ್ನು ಕಾಣಬಹುದಿತ್ತು. ಕೂಲಿ ಆಳುಗಳ ಮನೆಗಳಿಗೂ ಹೋಗುವುದನ್ನು ಕಾಣಬಹುದಿತ್ತು. ಚಹದಂಗಡಿ, ಬೀಡದಂಗಡಿಗಳಲ್ಲೂ ತಡೆತಡೆದು ನಿಲ್ಲುವುದನ್ನು ಕಾಣಬಹುದಿತ್ತು. ಆದರೆ ಆ ಗಾಳಿಗೆ ತಂಪಿಲ್ಲ. ಆದುದರಿಂದ ಯಾರೂ ತೊಂದರೆಗೊಳಗಾಗಲಿಲ್ಲ.

ಆ ಗಾಳಿಗೊಂದು ಕಾವಿದೆ. ನಿದ್ರಿಸುವವರನ್ನು ಜಾಗ್ರತಗೊಳಿಸುವುದು, ಉರಿಯುತ್ತಿರುವ ಬೆಂಕಿಯನ್ನು ಜೋರಾಗಿ ಉರಿಸುವುದು, ಕೆಳಗಿದ್ದವರನ್ನು ಮೇಲೆತ್ತುವುದು, ನೆಮ್ಮದಿಯಲ್ಲಿ ಅಶಾಂತತೆಯನ್ನು ಬೀರುವುದು, ತೃಪ್ತಿಯಲ್ಲಿ ಅತೃಪ್ತಿಯನ್ನುಂಟುಮಾಡುವುದು.

ಇನ್ನು ಕೆಲವೊಮ್ಮೆ ಬೆಂಕಿ ಕಿಡಿಯಂತೆ ಸಿಡಿದು ಹಾರುವುದು.

ಯಾರವನು?—ಆ ತೆಳ್ಳಗಿನ ದೇಹವುಳ್ಳ ಮನುಷ್ಯ !

ಅವನ ಊರು ಕೇರಿ ಇತ್ಯಾದಿ ಯಾರಿಗೂ ಗೊತ್ತಿಲ್ಲ. ಅವನನ್ನೇ ಕೇಳಿದರೆ, ಏನಾದರೂ ಉಪಾಯ ಹೇಳಿ ತಪ್ಪಿಸಿಕೊಂಡು ಆ ಪ್ರಶ್ನೆಗಳಿಂದ ದೂರ ನಿಲ್ಲುತ್ತಿದ್ದ. ಕೊನೆಗೆ ಅವನನ್ನು ಎಲ್ಲರೂ ಗಾಳಿಯೆಂದೇ ಕರೆಯಲು ಪ್ರಾರಂಭಿಸಿದರು. ಅದು ಅವನಿಗೆ ಒಪ್ಪುವ ಹೆಸರಾಗಿದೆ. ಗಾಳಿ !—ಬಿಸಿಗಾಳಿ ! ಬಿರುಗಾಳಿಯನ್ನು ಸೃಷ್ಟಿಸುವುದಕ್ಕೆ ಬಂದಿರುವ ಕಿರುಗಾಳಿ !

ಕುಂಜುಶಂಕರನ್ ಮಾಲಿಕನ ಫ್ಯಾಕ್ಟರಿಯೊಳಗೂ ಆ ಗಾಳಿ ಕೆಲವೊಮ್ಮೆ ನಿಧಾನವಾಗಿ ಪ್ರವೇಶಿಸುತ್ತಿತ್ತು. ಒಂದು ದಿನ ಕಾಳಿಕುಟ್ಟಿ ಬಿಲ್ಲವತ್ತಿ ಕುಂಜುವೆಂಬ ಕೂಲಿ ಯುವನೊಡನೆ ಕೇಳಿದಳು:

"ಅದು ಯಾರೊ ಕುಂಜು ಕೆಲವೊಮ್ಮೆ ಇಲ್ಲಿ ಬರುತ್ತಿರೋದು?"

"ಇಲ್ಲಿಗೆ ಯಾರು ಬರುತ್ತಿದ್ದಾರೆ?"

"ಕಾಣಲು ಹುಚ್ಚನಂತಿದ್ದಾನೆ, ಆಗಾಗ ಇಲ್ಲಿ ಬರುತ್ತಿರುತ್ತಾನಲ್ಲ? ಯಾರು?

"ಅವನೋ? ಅವನು...... ಅವನು ಸುಮ್ಮನೆ ಬರುತ್ತಿರೋದು."

"ಸುಮ್ಮನೆ ಬರೋದಾದರೆ, ನೀವೇಕೆ ಮರೆಯಾಗಿ, ಒಳಗೊಳಗೇ ಅವನೊಡನೆ ಮಾತಾಡೋದು?"

"ಅವನು ಏನೇನೋ ಹುಚ್ಚುಹುಚ್ಚು ಮಾತಾಡುತ್ತಿರುತ್ತಾನೆ. ಅದನ್ನು ಕೇಳೋದಕ್ಕಾಗಿ ಹೋಗೋದು."

"ಅವನ ಹುಚ್ಚು ಮಾತು ಕೇಳಬೇಕಿದ್ದರೆ, ಕೆಳಗೆ ದಾರಿಗಿಳಿದು ನಿಂತು ಕೇಳಬೇಕು. ಕೆಲಸದ ಸಮಯದಲ್ಲಲ್ಲ ಕೇಳೋದು."

"ಅವನು ಬಂದು ಹೇಳುತ್ತಾನೆ: ಅದಕ್ಕೆ ನಾವೇನು ಮಾಡೋದು?"

"ನೀವು ಕಿವಿಗೊಟ್ಟು ನಿಲ್ಲೋದರಿಂದಲ್ಲವೆ, ಅವನು ಹೇಳೋದು?"

"ಪಾಪ, ಏನೋ ಹೇಳುತ್ತಾನೆಂದು ಸುಮ್ಮನೆ ಕೇಳುತ್ತೇವೆ ಅಷ್ಟೆ."

"ಹಾಗಿದ್ದರೆ ಅವನಿಗೆ ಹೇಳಬೇಕು, ಇನ್ನು ಮುಂದೆ ಇಲ್ಲಿಗೆ ಬರಬೇಡವೆಂದು."

"ಅವನು ಬಂದರೇನಂತೆ?"

"ಬಂದರೋ?...... ಬಂದರೇನೆಂದು ಆಮೇಲೆ ಹೇಳುವೆ."

ಅಂದೂ ಅವನು ಬಂದ—ಬಿಸಿಯಾದ ಆ ಗಾಳಿ! ಕೆಲಸದವರು ಅವನ ಸುತ್ತಲೂ ಸೇರಿದರು—ಗಂಡುಸರೂ ಹೆಂಗುಸರೂ. ಪ್ರತಿಯೊಬ್ಬ ಕೂಲಿಯವನಿಗೂ ಅವನಿಗೆ ಏನೇನೋ ಹೇಳಬೇಕಾಗಿದೆ. ಪ್ರತಿಯೊಬ್ಬನೊಡನೆಯೂ ಹಲವು ಸಂಗತಿಗಳನ್ನು ಅವನು ಹೇಳುತ್ತಿದ್ದ. ಕೂಲಿಯವರು ಹೇಳುವುದನ್ನೆಲ್ಲಾ ಅವನು ಕೇಳಿದ. ಅವನು ಹೇಳುವುದನ್ನು ಅವರೂ ಶ್ರದ್ಧಾಪೂರ್ವಕವಾಗಿ ಕೇಳುತ್ತಿದ್ದರು. ಅವನು ಹೋದಮೇಲೆ ಕಾಳಿಕುಟ್ಟಿಯು ಮಾಧವಿಯನ್ನು ಕರೆದು ಕೇಳಿದಳು:

"ಅದು ಯಾರೆ ಮಾಧವಿ?"

"ಅದೇ? ಅದು ಗಾಳಿ."

"ಗಾಳಿಯೆ?...... ಅಲ್ಲ, ಇಲ್ಲಿಗೆ ಬಂದ ಮನುಷ್ಯನ ಬಗ್ಗೆ ನಾನು ಕೇಳಿದ್ದು."

"ಅದೇ, ನಾನೂ ಹೇಳಿದ್ದು. ಅವನನ್ನು ಎಲ್ಲರೂ ಗಾಳಿಯೆಂದು ಕರೆಯೋದು."

"ಅವನೇಕೆ ಇಲ್ಲಿ ಬರೋದು?"

"ಸುಮ್ಮನೆ ಬರುತ್ತಿದ್ದಾನೆ."

"ನಿಮಗೇಕೆ ಅವನಲ್ಲಿ ಅಷ್ಟು ಸ್ನೇಹ? ನೀನೂ ಅವನ ಹತ್ತಿರ ಹೋಗಿ ತೋಳಿಗೆ ಒರಗಿಕೊಂಡೇ ನಿಂತದ್ದು ಕಂಡಿತಲ್ಲ."

"ತಾಗಿಕೊಂಡು ನಿಂತುಬಿಟ್ಟರೇನು?"

"ಹತ್ತಿರ ನಿಲ್ಲೋದು, ಅವನನ್ನು ಹೊಗಳೋದು ಇವೆಲ್ಲಾ ನಿಮ್ಮ ಮನೆಗಳಲ್ಲಿ ಮಾಡಿಕೊಳ್ಳಿ. ಇಲ್ಲಿ ಅದೊಂದೂ ನಡೆಯದು."

"ಅವನು ಅನ್ಯಾಯ ಮಾಡೋದಕ್ಕೆ ಓಡಾಡುವ ವ್ಯಕ್ತಿಯಲ್ಲ."

"ಮತ್ತೇಕೆ ಅವನು ಅಲೆಯುತ್ತಿರೋದು?"

"ಅವನೊ...... ಅವನು...... ಆ! ನನಗೆ ಗೊತ್ತಿಲ್ಲ" ಹೀಗೆಂದು ಹೇಳುತ್ತಾ ಅವಳು ಅಲ್ಲಿಂದ ಹೋದಳು.

ಮರುದಿನವೂ ಅವನು ಬಂದ. ಕೆಲಸದವರು ಅವನೊಡನೆ ಮಾತಾಡಿದರು. ಅವನು ಕೂಲಿಯಾಳುಗಳೊಡನೆಯೂ ಮಾತಾಡಿದ. ಕುಂಜುಶಂಕರನ್ ಮಾಲಿಕನಿಗೆ ಕೋಪ ಬಂತು. ಅವನು ಗೋಪಾಲನನ್ನು ಕರೆದು ಕೇಳಿದ:

"ಯಾರೋ ಅದು ಆ ದಂಗೆಕೋರನನ್ನು ಇಲ್ಲಿಗೆ ಕರೆದುಕೊಂಡು ಬರೋದು?"

"ಯಾರೂ ಕರೆದುಕೊಂಡು ಬರೋದಲ್ಲ ಮಾಲಿಕರೆ, ಅವನೇ ಬರೋದು."

"ಅವನ ಜಾತಿಯೇನು?"

"ಆ!"

"ಅವನು ಬಿಲ್ಲವ ಜಾತಿಯವನೋ ಎಂದು ಕೇಳಿದ್ದು?"

"ನನಗೆ ತಿಳಿಯದು ಮಾಲಿಕರೇ."

"ಬಿಲ್ಲವ ಜಾತಿಯವರನ್ನು ನಾಶಮಾಡಲು ತಿರುಗಾಡುತ್ತಿದ್ದಾನೆ, ಅವನು."

"ಅದೇನು ಯಜಮಾನರೇ, ಹಾಗೆ ಹೇಳೋದು? ಅವನು ಯಾವ ಬಿಲ್ಲವ ಜಾತಿಯುವರನ್ನು ನಾಶಮಾಡಿದ?"

"ನನ್ನನ್ನು—ನನ್ನನ್ನು ನಾಶಮಾಡಲು ಅವನು ಹೀಗೆ ತಿರುಗಾಡೋದು."

"ಅವನು ಹೀಗೆ ತಿರುಗಾಡಿದನಾದರೆ ತಾವು ನಾಶವಾಗೋದು ಹೇಗೆ?"

"ಅವನು ಅಲ್ಲಿ ಇಲ್ಲಿ ತಿರುಗಾಡಿಯಲ್ಲದೆ ಮರೀದು ಮಾಲಿಕನ ಕಂಪೆನಿಯಲ್ಲಿ ಗಲಾಟೆಯುಂಟಾದ್ದು?"

"ಮರೀದು ಸಾಹೇಬನು ಬಿಲ್ಲವನೋ ದಣಿಗಳೇ?"

"ಅಂದರೆ......"

"ಅಂದರೇನು?"

"ಎಲಾ, ನಾನೊಬ್ಬ ಬಿಲ್ಲವನಲ್ಲವೋ?"

"ಹೌದು."

"ಬಿಲ್ಲವ ಮಾಲಿಕನಿಗೆ ಒಳ್ಳೆಯದು ಮಾಡಬೇಕಾದದ್ದು ಯಾರು?"

"ಯಾರು?"

"ಬಿಲ್ಲವ ಜಾತಿಯ ಕೆಲಸದವರು."

"ಹಾಗಾದರೆ ಬಿಲ್ಲವ ಜಾತಿಯ ಕೆಲಸದವರಿಗೆ ಒಳ್ಳೆಯದು ಮಾಡಬೇಕಾದ್ದು ಯಾರು?"

"ಎಲಾ! ನಿಮಗೆಲ್ಲ ಒಳ್ಳೆಯದು ಮಾಡೋದಕ್ಕಲ್ಲವೇ ನಾನಿದೆಲ್ಲ ಮಾಡುತ್ತಿರೋದು?"

"ಬೇಕಾಗಿಲ್ಲ! ನಮಗೆ ಈ ರೀತಿಯಲ್ಲಿ ಒಳ್ಳೆಯದು ಮಾಡಬೇಕಾಗಿಲ್ಲ."

"ಹಾಗಿದ್ದರೆ ಬಿಲ್ಲವರೆಲ್ಲಾ ಕೋಳಿಗಳಾಗಿದ್ದಾರೆ."

"ಅದು ಹೇಗೆ ಮಾಲಿಕರೆ, ಬಿಲ್ಲವರು ಕೋಳಿಗಳಾಗೋದು?"

"ಕೊಲ್ಲೋದಕ್ಕೆ ಹಿಡಿದರೂ ಸಾಕೋದಕ್ಕೆ ಹಿಡಿದರೂ ಬೊಬ್ಬೆ ಹಾಕಿ ಕೂಗೋದು ಕೋಳಿಗಳ ಸ್ವಭಾವ. ಆದ್ದರಿಂದ ಕಣೋ ಬಿಲ್ಲವರು ಕೋಳಿಗಳಂತೆ, ಎಂದದ್ದು."

"ನಮಗೆ ಈ ರೀತಿಯ ಸಲಹೆ ಬೇಕಾಗಿಲ್ಲವೆಂದು ನಾವು ಹೇಳೋದು."

"ಹಾಗಿದ್ದರೆ, ಆ ಕ್ರಾಂತಿಕಾರನ ಮಾತನ್ನು ಕೇಳಿ ಹೋಗಿ ಸಾಯಿರಿ—ಸಾಯಿರಿ."

"ಇದಕ್ಕಿಂತ ಸಾಯೋದೇ ಒಳ್ಳೆಯದು ಮಾಲಿಕರೆ" ಅಷ್ಟು ಹೇಳಿ ಅವನೂ ಅಲ್ಲಿಂದ ಹೊರಟುಹೋದ.

"ಕೋಳಿಗಳೋ ನೀವೆಲ್ಲ!" ಮಾಲಿಕನು ಕೂಗಿ ಹೇಳಿದ.

ಕುಂಜು ಗೋಪಾಲನೊಡನೆ ಕೇಳಿದ:

"ಏನಂತೆ, ಗೋಪಾಲ, ಮಾಲಿಕನಿಗೆ? ಅಲ್ಲಿ ಹಾಗೆ ಹೊಡೆದುಕೊಳ್ಳುತ್ತಿದ್ದಾನಲ್ಲ?"

"ಮಾಲಿಕ ಹೇಳೋದು ನಾವೆಲ್ಲ ಕೋಳಿಗಳೆಂದು, ಕೊಲ್ಲಲು ಹಿಡಿದರೂ ಸಾಕಲು ಹಿಡಿದರೂ ಅರಚಿಕೂಗೋದೆಂದು."

"ಹಾಗಿದ್ದರೆ, ಮತ್ತೆ ಕೋಳಿಗಳನ್ನು ಹಿಡಿಯೋದೇಕಂತೆ? ಹಿಡಿದರಲ್ಲವೇ ಅರಚಿಕೊಳ್ಳೋದು?"

"ನಮ್ಮನ್ನು ಹಿಡಿಯೋದು ಸಾಕೋದಕ್ಕಂತೆ."

"ಮೊದಲು ಸಾಕೋದು ಆಮೇಲೆ ಕೊಲ್ಲೋದಕ್ಕಲ್ಲವೇ?"

"ನಮ್ಮನ್ನು ಹಿಡಿದರೆ ನಾವು ಅರಚಿಕೊಳ್ಳಬಾರದೆಂದು ಮಾಲಿಕ ಹೇಳೋದು."

"ಕೋಳಿ ಅರಚಿಕೊಳ್ಳದಿರಬೇಕಾದರೆ ನರಿ ಅವನ್ನು ಹಿಡಿಯದಿರಬೇಕು."

"ಕುಂಜಣ್ಣ. ನೀನೇ ಒಮ್ಮೆ ಅಲ್ಲಿಗೆ ಹೋಗಿ ಹೇಳಿಬಿಡು, ಅದೋ ಅಲ್ಲಿ ನಿಂತಿದ್ದಾನೆ."

"ಹೇಳಬಹುದು ಗೋಪಾಲ, ಆವಸರವೇನು?—ಆಮೇಲೆ ಹೇಳುವ."

ಗಾಳಿ ಮತ್ತೆಯೂ ಅಲ್ಲಿಗೆ ಬರುತ್ತಿದ್ದ. ಗಾಳಿಗೆ ಶಕ್ತಿಯೂ ಬಿಸಿಯೂ ಹೆಚ್ಚುತ್ತಲೇ ಇತ್ತು. ಗುಸುಗುಸು ಮಾತುಗಳು, ಬಿರುಸಿನ ಶಬ್ದಗಳು, ಕೋಪದಿಂದ ಹಲ್ಲು ಕಡಿಯುವುದು ಮುಂತಾದುವು ಬಲವಾದ ಹೂಂಕಾರಗಳಾಗಿ ರೂಪಾಂತರಗೊಂಡವು. ಒಂದು ದಿನ ಶಂಕು ಕಾಳಿಕುಟ್ಟಿ ಬಿಲ್ಲಮತ್ತಿಯೊಡನೆ ಅರ್ಧ ಚಕ್ರದ ಬೀಡಿ ಕೇಳಿದ. ಅವಳು ಎರಡು ಬೀಡಿ ತೆಗೆದು ತೋರಿಸಿದಳು. ಅವನು ಕೇಳಿದ:

"ಅದೇನು?"

"ಬೀಡಿಯಲ್ಲವೆ ನೀನು ಕೇಳಿದ್ದು?"

"ಹೌದು."

"ಇದೇ ಬೀಡಿ."

"ಅದು ಸರಿ. ನಾನು ಅರ್ಧ ಚಕ್ರಕ್ಕೆ ಕೇಳಿದ್ದು."

"ಇದು ಅರ್ಧ ಚಕ್ರದ್ದೆ."

"ಅರ್ಧ ಚಕ್ರಕ್ಕೆ ಎರಡೊ?"

"ಮತ್ತೆಷ್ಟು ಕೊಡಬೇಕು?"

ಬೇರೆ ಅಂಗಡಿಗಳಲ್ಲೆಲ್ಲಾ ಅರ್ಧ ಚಕ್ರಕ್ಕೆ ನಾಲ್ಕು ಕೊಡುತ್ತಾರೆ."

"ಹಾಗಿದ್ದರೆ ನೀನು ಅಲ್ಲಿಂದಲೇ ತೆಗೆದುಕೊ."

"ಕೆಲಸ ಮಾಡಿದ ಹಣವನ್ನು ನೀವು ಕೈಗೆ ಕೊಡದಿದ್ದರೆ ನಾವು ಅಲ್ಲಿಗೆ ಹೋಗಿ ಬೀಡಿ ಕೊಳ್ಳೋದು ಹೇಗೆ?

"ಹಾಗಿದ್ದರೆ ಕೊಟ್ಟದ್ದನ್ನು ತೆಗೆದುಕೊಂಡು ಹೋಗಬೇಕು."

"ನೀವು ಧರ್ಮಕ್ಕೆ ಕೊಡುತ್ತಿಲ್ಲವಷ್ಟೆ!"

"ಮತ್ತೇನು ನಿನ್ನ ಅಪ್ಪ ಗಳಿಸಿಟ್ಟದ್ದೋ?"

"ಯಾರ ಅಪ್ಪ ಗಳಿಸಿಟ್ಟದ್ದೂ ಅಲ್ಲ. ನಾವು ಕೆಲಸ ಮಾಡಿದ ಹಣವನ್ನು ನಮಗೆ ಕೊಟ್ಟರೆ ಸಾಕು."

"ಕೆಲಸಕ್ಕೆ ಸಂಬಳವನ್ನೇ ಕೊಡುತ್ತಿರೋದು."

"ಕೂಲಿಯನ್ನು ಹಣದ ರೂಪದಲ್ಲೇ ಕೊಡಬೇಕೆಂದು ಹೇಳೋದು."

"ಹಣವನ್ನು ಕೊಡಲು ಸಾಧ್ಯವಿಲ್ಲ."

"ಹೇಗೆ ಸಾಧ್ಯವಿಲ್ಲವೆಂಬುದನ್ನು ನಾವು ನೋಡುತ್ತೇವೆ."

"ಓ! ನೀವು ನೋಡಿದ ಮೇಲೆ ಬನ್ನಿ."

ಶಂಕು ಬೀಡಿ ತೆಗೆದುಕೊಳ್ಳಲಿಲ್ಲ.

ಆಮೇಲೆ ಕಾಳಿಕುಟ್ಟಿಯೊಡನೆ ಜಗಳವಾಡಿದ್ದು ಮಾಧವಿ. ಅವಳು ಒಂದು ದಿನ ಒಂದು ಬಳ್ಳ ಅಕ್ಕಿ ತೆಗೆದುಕೊಂಡಳು. ಅವಳು ಕೇಳಿದಳು:

"ಇದಕ್ಕೇನು ಕ್ರಯ?"

"ಕ್ರಯ ತಿಳಿದು ನಿನಗೇನಾಗಬೇಕು? ಹೊಟ್ಟೆ ತುಂಬಿದರೆ ಸಾಲದೆ? ಅದನ್ನು ವಿಚಾರಿಸುವುದೇಕೆ?"

"ಕೆಲಸ ಮಾಡುವವರು ನಾವು. ಪುಕ್ಕಟೆಯಾಗಿ ಹೊಟ್ಟೆ ತಿನ್ನಲು ನಿಮ್ಮಲ್ಲಿಗೆ ಬಂದಿಲ್ಲ."

"ಇದೇನೇ, ಇಷ್ಟು ಜೋರು ಮಾಡೋದು? ಬೇಕಿದ್ದರೆ ತೆಗೆದುಕೊಂಡು ಹೋಗೇ."

ಮಾಧವಿ ಅಕ್ಕಿಯನ್ನು ತೆಗೆದುಕೊಂಡು ಹೋದಳು. ಹೋಗುತ್ತಾ ಅವಳು ಗೊಣಗುಟ್ಟಿದಳು:

"ಕೆಲಸ ಮಾಡುವಲ್ಲಿ ಚಿತ್ರಹಿಂಸೆ, ವ್ಯಾಪಾರದಂಗಡಿಯಲ್ಲಿ ವಂಚನೆ. ಸುಮ್ಮನೆ ಸುಮ್ಮನೆ ಎಲ್ಲರನ್ನೂ ಒಟ್ಟಾಗಿ ಕೊಲ್ಲಬಾರದೆ?"

ಸ್ವಲ್ಪ ಸಮಯದ ತರುವಾಯ ಅವಳು ಅಕ್ಕಿಯನ್ನು ಹಿಡಿದುಕೊಂಡು ಬಿರುಗಾಳಿಯಂತೆ ಅಲ್ಲಿಗೆ ಬಂದಳು. ಅಕ್ಕಿಯ ಕುಕ್ಕೆಯನ್ನು ಕಾಳಿಕುಟ್ಟಿಯ ಮುಂದೆ ಬಿಸಾಕಿ ಸಿಟ್ಟಿನಿಂದ ಹೇಳಿದಳು:

"ಕೊಂದುಬಿಡಿ—ಒಟ್ಟಾಗಿ ಎಲ್ಲರನ್ನೂ ಕೊಂದುಬಿಡಿ!"

"ನೀನೇನೇ ಸಿಟ್ಟಿನಿಂದ ಹೀಗೆ ಹಾರಾಡುತ್ತೀಯೋ?"

"ಆ ಅಕ್ಕಿಯನ್ನೊಮ್ಮೆ ಅಳತೆ ಮಾಡಬೇಕು."

"ಏನಾಯ್ತು? ಹೆಚ್ಚಾಗಿದೆಯೋ?"

"ಹೆಚ್ಚೋ ಕಡಿಮೆಯೊ ಅಳತೆ ಮಾಡಿದರೆ ಗೊತ್ತಾಗುತ್ತದೆ."

"ಏನೆಂದು ನೀನೇ ಹೇಳಿಬಿಡು."

"ಅದರಲ್ಲಿ ಆರು ಕುಡ್ತೆ ಅಕ್ಕಿಯೇ ಇರೋದು."

"ಹಾಗಿದ್ದರೆ, ಎರಡು ಕುಡ್ತೆ ಅಕ್ಕಿಯನ್ನು ನೀನು ಯಾರಿಗೊ ಕೊಟ್ಟಿರಬೇಕು."

"ಆ! ಇಲ್ಲದ ಅಪವಾದ ಹೇಳಿದರೆ ಗೊತ್ತೇ ಇದೆಯಲ್ಲಾ!...... ಊರಿನಲ್ಲಿಲ್ಲದ ಕ್ರಯ ತೆಗೆದುಕೊಳ್ಳೋದು, ಅಳತೆಯಲ್ಲಿ ಅಕ್ಕಿಯನ್ನೂ ಕಡಿಮೆ ಮಾಡೋದು. ಹೀಗೆ ವ್ಯಾಪಾರ ಮಾಡಿದರೆ ತಲೆಗೆ ಬೆಂಕಿಯ ಮಳೆ ಬಿದ್ದೀತು!" ಅವಳು ತಲೆಯ ಮೇಲೆ ಕೈಯಿಟ್ಟು ಶಪಿಸಿದಳು.

ಕಾಳಿಕುಟ್ಟಿ ಬಿಲ್ಲವೆತ್ತಿ ಅಕ್ಕಿ ಅಳೆಯುವ ಪಾವಿನಿಂದಲೇ ಮಾಧವಿಯ ಮುಖಕ್ಕೆ ಒಂದೇಟು ಬಿಗಿದಳು ಮತ್ತು ಗಟ್ಟಿಯಾಗಿ ಹೇಳಿದಳು:

"ನಡಿ ಇಲ್ಲಿಂದ ಹೊರಗೆ!"

ಮಾಧವಿ ಅಂಗಡಿಯ ಒಳಗೆ ಓಡಿಹೋದಳು. ದಿನಸು ತಂಗುವ ಪಡಿಯನ್ನು ಅಲ್ಲಿಂದ ತೆಗೆದು, ಕಾಳಿಕುಟ್ಟಿಯ ತಲೆಗೆ ಒಂದೇಟು ಬಿಗಿದಳು. ಅವಳ ತಲೆಯೊಡೆದು ರಕ್ತ ಸುರಿಯಿತು.

ಫ್ಯಾಕ್ಟರಿಯಲ್ಲಿ ನಿಂತಿದ್ದ ಕುಂಜುಶಂಕರನ್ ಮಾಲಿಕ ಸುದ್ದಿ ತಿಳಿದು ಅಲ್ಲಿ ಓಡಿ ಬಂದಾಗ ಮಾಧವಿ ಅಲ್ಲಿಂದ ಹೊರಟುಹೋಗಿದ್ದಳು.

## (೧೨)

ಅಂದು ಅಣ್ಣೆಗೆ ವಯಸ್ಸು ಹದಿನೇಳು ತುಂಬಿತ್ತು. ಜೀವನದ ಒಂದು ಚಿಕ್ಕ ಮೊಗ್ಗು ಅರಳುತ್ತಿತ್ತು. ಒಣಗಿ ಒರಟಿದ ಭೂಮಿ, ಬಿಸಿಯೇರಿದ ಗಾಳಿ, ಕತ್ತಲೆ ಕವಿದ ಆಕಾಶ—ಆ ಹೂವಿನ ಮೊಗ್ಗು ಹೇಗೆ ಅರಳುವುದು?

ಆಶೆಗಳನ್ನೆಲ್ಲಾ ನೆಟ್ಟು ನೆನಸಬೇಕಾದ ಕಾಲವಾಗಿತ್ತದು. ಕಣ್ಣುಗಳಲ್ಲಿ ಸ್ವಪ್ನ ಗಳು ನೃತ್ಯಮಾಡಬೇಕಾದ ಕಾಲವಾಗಿತ್ತದು. ಆದರೆ ಅವಳ ಭಾವನೆಗಳೆಲ್ಲಾ ಹಬ್ಬಿ ಬಂದ ಉತ್ಕಟವಾದ ಮುಳ್ಳುಗಳಾಗಿದ್ದುವು. ಅವಳ ಕಣ್ಣುಗಳಲ್ಲಿ ಕಣ್ಣೀರ ಕಣ ಗಳಾಗಿದ್ದುವು ನೃತ್ಯಮಾಡಿದ್ದು.

ಅವಳ ತಂದೆ ಸ್ವರ್ಗಸ್ಥನಾದ. ಅವಳ ಅಣ್ಣಂದಿರಿಬ್ಬರೂ ಜೈಲಿನಲ್ಲಿ. ಅವಳ ತಾಯಿಯಾದರೊ, ಸ್ವರ್ಗಸ್ಥನಾದ ಅವಳ ತಂದೆಯ ಶುಶ್ರೂಷೆ ಮಾಡಲು ಹೋಗುವು ದಕ್ಕೆ ಆತುರದಿಂದಿದ್ದಳು.

ಪಲಿ ಮನೆಕೆಲಸಗಳನ್ನೆಲ್ಲಾ ಮಾಡುತ್ತಿದ್ದಳು. ಮನೆ, ಮನೆ ಅಂಗಳಗಳನ್ನು ಗುಡಿಸುತ್ತಿದ್ದಳು, ಒಲೆ ಉರಿಸುತ್ತಿದ್ದಳು. ಆದರೆ ಯಾವುದೇ ಕೆಲಸ ಮಾಡಲಿ ಅದು ಸ್ವಪ್ನದಲ್ಲಿ ನಡೆದಂತೆ ಕಾಣುತ್ತಿತ್ತು.

ಕೆಲಸ ಮಾಡುತ್ತಿದ್ದಂತೆ ಅವಳು ಓಡಿಬಂದು ಪೆಟ್ಟಿಗೆ ತೆರೆದು ಬಟ್ಟೆಗಳನ್ನು ಅದರಿಂದ ತೆಗೆದು, ಮಡಿಯುಟ್ಟು ಕುಪ್ಪಸ ತೊಟ್ಟು ಕಪ್ಪಿನ ಅಂಚುಳ್ಳ ಶಾಲನ್ನು ಹೆಗಲಿಗೆ ಹಾಕಿಕೊಂಡು ಅಣ್ಣೆಗೆ ಹೇಳುತ್ತಿದ್ದಳು:

"ಮಗಳೇ, ನಾನೊಮ್ಮೆ ಆಚೆಗೆ ಹೋಗಿಬರುತ್ತೇನೆ."

"ಅಮ್ಮ, ನೀನು ಎಲ್ಲಿಗೆ ಹೋಗೋದು?"

ಅನ್ನೆ ಹಾಗೆ ಕೇಳಿದರೆ ಅವಳಿಗೆ ಕೋಪ ಬರುತ್ತಿತ್ತು. ಅಪ್ಪ ಎಲ್ಲಿಯೆಂದು ಅವಳಿಗೆ ಗೊತ್ತಿಲ್ಲವೆ? ಅಪ್ಪನ ಹತ್ತಿರ ಅಮ್ಮ ಇರಬೇಕೆಂದು ಅವಳಿಗೆ ತಿಳಿಯದೆ? ಮತ್ತೇಕೆ ಅವಳು ಕೇಳುವುದು. ಎಲ್ಲಿಗೆ ಹೋಗುವುದೆಂದು? ಆಗ ಹೇಳುತ್ತಿದ್ದಳು:

"ನಾನು ಎಲ್ಲಿಗೆ ಹೋಗುವುದೆಂದು ನಿನಗೆ ತಿಳಿಯದು—ಅಲ್ಲವೇ? ನಾನು ಹೋಗಲೇಬೇಕು. ಅವರಿಗೆ ಗಂಜಿ ಮಾಡಿಕೊಡೋದಕ್ಕೆ" ಏಲಿ ಅವಸರವಸರವಾಗಿ ನಡೆದಳು. ಅನ್ನೆ ತಡೆದಳು.

"ಅಮ್ಮ, ನೀನು ಹೇಗೆ ಅಲ್ಲಿಗೆ ಹೋಗೋದು? ನಿನಗೆ ದಾರಿ ಗೊತ್ತೋ?"

"ದಾರಿಯೆ?...... ಆಚೆ ಹೋದರೆ ಅಲ್ಲಿ ಅವರು ನಿಂತಿರಬಹುದು, ನನ್ನನ್ನು ಎದುರುನೋಡುತ್ತಾ. ಗಂಜಿನೀರು ಕೂಡ ಕುಡಿಯದೆ ನನಗಾಗಿ ಕಾದುನಿಂತಿರುವರು." ಏಲಿ ಮಗಳನ್ನು ದೂಡಿ ಆಚೆ ತಳ್ಳಿ ಮುಂದೆ ಹೋದಳು.

"ಹೋಗಬೇಡಮ್ಮಾ!" ಅನ್ನೆ ತಾಯಿಯನ್ನು ಗಟ್ಟಿಯಾಗಿ ಹಿಡಿದುಕೊಂಡಳು.

"ನಿನಗೆ ಅಲ್ಲಿ ಹೋಗಲು ಸಾಧ್ಯವಿಲ್ಲಮ್ಮಾ...... ದೇವರ ಅಪ್ಪಣೆಯಿಲ್ಲದೆ ಸ್ವರ್ಗಕ್ಕೆ ಯಾರನ್ನೂ ಬಿಡುವುದಿಲ್ಲ."

"ನನ್ನನ್ನು ಬಿಡುವರು, ವರ್ಕಿಯ ಹೆಂಡತಿ ಬಂದು ನಿಂತಿರುವಳೆಂದು ದೇವರಲ್ಲಿ ಹೇಳಿದರೆ, ಒಳಗೆ ಹೋಗಬಹುದೆಂದು ಹೇಳುವರು."

"ಇಲ್ಲಮ್ಮಾ, ನಿನ್ನನ್ನು ಅಲ್ಲಿಗೆ ಹೋಗಲು ಬಿಡರು."

"ಹೊರಡಾಚೆ!" ಏಲಿ ಗದರಿಸಿದಳು.

ಅನ್ನೆ ಅವಳನ್ನು ಬಿಡಲಿಲ್ಲ. ಏಲಿ ಮಗಳ ಬೆನ್ನಿಗೆ ಗುದ್ದಿದಳು, "ನನ್ನನ್ನು ಬಿಡು, ಬಿಡೇ ನನ್ನನ್ನು" ಎಂದು ಘರ್ಜಿಸಿದಳು.

ಅನ್ನೆ ಕೂಗಲಿಲ್ಲ. ಅವಳು ನಿಶ್ಶಬ್ದವಾಗಿ ನಿಂತು ಹೊಡೆತವನ್ನು ಸಹಿಸಿಕೊಂಡು ಹೇಳಿದಳು:

"ಅಮ್ಮಾ, ನಿನ್ನ ಒಬ್ಬಳೇ ಮಗಳು ನಾನು."

ಏಲಿಗೆ ಪ್ರಜ್ಞೆ ಬಂದೊಡನೆ ಮಗಳನ್ನು ಅಪ್ಪಿಕೊಂಡು ಅಳಲಾರಂಭಿಸಿದಳು.

"ನನ್ನ ಮಗಳೇ, ನಾನು ಹೊಡೆದೆನೋ?" ಆಗ ಅವಳು ತನ್ನ ಎದೆಗೆ ಹೊಡೆದುಕೊಂಡು ಜೋರಾಗಿ ಅತ್ತಳು.

"ನನ್ನ ಮುದ್ದುಮಗಳನ್ನು ನಾನು ಹೊಡೆದೆ!...... ನಾನು ಅಲ್ಲಿ ಹೋದಾಗ ಅವರು ಕೇಳುವರು, 'ನೀನು ನನ್ನ ಮಗಳನ್ನು ಹೊಡೆದಿಯೇನೆ' ಎಂದು"

ನೆರೆಮನೆಯವರು ಓಡಿಬಂದು ಏಲಿಯ ಕೈಗಳನ್ನು ಬಲವಾಗಿ ಹಿಡಿದು ನಿಲ್ಲಿಸುತ್ತಿದ್ದರು. ಕೆಲವೊಮ್ಮೆ ಅನ್ನೆಗೆ ಹೊಡೆಯುವುದನ್ನು ಕಂಡು, ಅವರು ಓಡಿಬಂದು ಅವಳನ್ನು ಹಿಡಿದು ದೂರ ಮಾಡಲು ಪ್ರಯತ್ನಿಸುತ್ತಿದ್ದರು. ಆಗ ಅನ್ನೆ ಸಿಟ್ಟುಗೊಂಡು ಗದರಿಸುತ್ತಿದ್ದಳು:

"ಮುಟ್ಟಬೇಡಿ !—ನನ್ನ ತಾಯಿಯನ್ನು ಮುಟ್ಟಬೇಡಿ ! ನನ್ನ ತಾಯಿ ನನಗೆ **ಹೊಡೆ**ಯಲಿ—ನನ್ನನ್ನು ಕೊಲ್ಲಲಿ."

ಆ ತೆಳ್ಳಗಿನ ಮನುಷ್ಯ ಯಾವಾಗಲೂ ಅಲ್ಲಿಗೆ ಬರುತ್ತಿದ್ದ. ಅವರ ದಿನವ ಖರ್ಚಿಗೆ ಬೇಕಾದ ಹಣವನ್ನು ಕೊಡಲು ಬರುತ್ತಿದ್ದ. ಅವನು ಹಣ ಕೊಡಲು ಪ್ರಾರಂಭ ಮಾಡಿದ ದಿನವೇ ಏಲಿ ಕೇಳಿದಳು:

"ಅಂತೋಣಿಯ ತಂದೆ ಕಳಿಸಿಕೊಟ್ಟದ್ದೋ ಇದು?"

"ಹುಂ."

"ಹಾಗಿದ್ದರೆ ಇದನ್ನು ತೆಗೆದುಕೊಂಡು ಅವರೇ ಏಕೆ ಬರಲಿಲ್ಲ?"

"ಅವನು ಇಲ್ಲಿಗೆ ಇನ್ನು ಬರಲಾರ."

"ಅದೇಕೆ ಇಲ್ಲಿಗೆ ಬರಲಾರರು?"

"ಅವರು ಅಲ್ಲಿಂದ ಬಿಡುವುದಿಲ್ಲ."

"ಹಾಗಿದ್ದರೆ ಗಂಜಿ ಊಟ ಕೊಡೋದು ಯಾರಂತೆ?"

"ಗಂಜಿ ಊಟ-ತಿಂಡಿ ಮಾಡಿಕೊಡೋದಕ್ಕೆ ಅಲ್ಲಿ ಜನರಿದ್ದಾರೆ."

ಏಲಿ ದೃಢಸ್ವರದಲ್ಲಿ ಹೇಳಿದಳು:

"ತಿನ್ನುವುದಿಲ್ಲ—ಅಲ್ಲಿನ ಜನ ಗಂಜಿ ಮಾಡಿಕೊಟ್ಟರೆ, ಅವರು ತಿನ್ನರು...... ನಾನೇ ಹೋಗುತ್ತೇನೆ, ಗಂಜಿ ಮಾಡಿಕೊಡೋದಕ್ಕೆ."

ಅವನು ಕಣ್ಣೀರು ಒರಸಿಕೊಂಡು ಅಲ್ಲಿಂದ ಹೋದ.

ಮರುದಿನ ಅನ್ನೆ ಚಾವಡಿಯಲ್ಲಿದ್ದಾಗ ಆ ತೆಳ್ಳಗಿನ ಮನುಷ್ಯ ಬಂದ. ಆ ಬಿಸಿ ಗಾಳಿ ಅಲೆಯಾಡಿ ಹತ್ತಿರ ಬರುವ ವರೆಗೆ ಅವಳು ಅವನನ್ನೇ ನೋಡುತ್ತಾ ನಿಂತಳು. ಅಂಗಳದಲ್ಲಿ ನಿಂತು ಕಾಗದದ ಒಂದು ಸಣ್ಣ ಕಟ್ಟನ್ನು ಅವನು ನೀಡಿದ. ಅವಳದನ್ನು ತೆಗೆದುಕೊಂಡು ತನ್ನಷ್ಟಕ್ಕೆ ಹೇಳಿಕೊಂಡಳು:

"ಎಷ್ಟು ದಿವಸ ಹೀಗೆ......" ಅವಳು ಮಾತು ಮುಗಿಸಲಿಲ್ಲ. ಅವನು ಮೌನವಾಗಿ ನಿಂತಿದ್ದ. ಅವನೊಡನೆ ಕೇಳಿದಳು:

"ಯಾವಾಗಲೂ ಹೀಗೆ ತಂದುಕೊಡುತ್ತೀರಿ...... ಎಲ್ಲಿಂದ, ಹೇಗೆ?"

"ಕೂಲಿಕಾರರು ಒಟ್ಟು ಕೂಡಿಸಿ ಕೊಡೋದಾಗಿದೆ, ಇದು."

"ಹಾಗಿದ್ದರೆ......" ಅವಳಿಗೇನೋ ಕೇಳಬೇಕೆನಿಸಿತು, ಆದರೆ ಕೇಳಲಿಲ್ಲ.

"ನಾನು ಹೋಗಲೇ?" ಅವನು ಕೇಳಿದ.

"ಹೋದರೆ......" ಆಗಲೂ ಅವಳು ವಾಕ್ಯ ಪೂರ್ಣಗೊಳಿಸಲಿಲ್ಲ.

"ನಾನು ನಾಳೆ ಇದೇ ಹೊತ್ತಿಗೆ ಬರುವೆ."

"ನನ್ನ ಅಣ್ಣಂದಿರು ಯಾವಾಗ ಬರೋದು?"

"ಬರುವರು. ಬೇಗನೆ ಬರುವರು" ಒಡನೆ ಅವನು ಅಲ್ಲಿಂದ ಹೊರಟುಹೋದ.

ಅವನು ಅವಳ ಪ್ರಶ್ನೆಗಳಿಂದ ಭೀತಿಗೊಂಡನೊ ಎಂಬಂತೆ ಕಿರುದಾರಿಗಿಳಿದು ಅವಸರವಸರವಾಗಿ ನಡೆದ.

ಹೀಗೇ ದಿನಗಳು ಕಳೆದುವು. ಒಂದು ದಿನ ಅವನು ಹಣ ತೆಗೆದುಕೊಂಡು ಬಂದಾಗ ಏಲಿ ಚಾವಡಿಯಲ್ಲಿದ್ದಳು. ಅವನನ್ನು ಕಂಡೊಡನೆ ದುರುಗುಟ್ಟಿ ನೋಡುತ್ತಾ ಕೇಳಿದಳು:

"ಎಲಾ! ನೀನೇಕೋ ಪ್ರತಿದಿನವೂ ಇಲ್ಲಿಗೆ ಬರೋದು?...... ಯಾಕೆ ಬರುತ್ತಿರೋದೆಂದು ನಿನ್ನಲ್ಲಿ ಕೇಳುತ್ತಿರುವುದು?"

ಅವನು ಮೌನವಾಗಿ ನಿಂತ. ಏಲಿಯ ಧ್ವನಿ ಏರಿತು:

"ನನಗೆ ಇನ್ನು ಇರೋದು ಇದೊಂದೇ ಮಗು. ಅವನನ್ನೂ ಹಿಡಿದುಕೊಂಡು ಹೋಗೋಕಲ್ಲವೇ ನೀನು ಯಾವಾಗಲೂ ಇಲ್ಲಿ ಬರೋದು?"

ಅವನು ತಲೆತಗ್ಗಿಸಿದ. ಅಡುಗೆ ಕೋಣೆಯಿಂದ ಅನ್ನೆ ಬೇಗನೆ ಓಡಿಬಂದಳು. ಅವಳು ತಾಯಿಯೊಡನೆ ಅತಿ ದೈನ್ಯದಿಂದ ಕೇಳಿಕೊಂಡಳು:

"ಅಮ್ಮಾ, ನೀನು ಯಾರೊಡನೆ ಮಾತಾಡೋದೆಂದು ಗೊತ್ತಿದೆಯೊ?"

"ಯಾರು?...... ಜನರನ್ನು ಕೊಲ್ಲಿಸಲು ಹೀಗೆ ಅಲೆಯುತ್ತಿರುತ್ತಾನೆ ಇವನು...... ಎಲಾ, ನೀನಿನ್ನು ಈ ಭಾಗಕ್ಕೆ ಸುಳಿಯಬಾರದು...... ಈ ಭಾಗಕ್ಕೆ ಸುಳಿದರೆ......" ಚಾವಡಿಯಲ್ಲಿದ್ದ ಪೊರಕೆಯನ್ನು ಕೈಯಲ್ಲಿ ಹಿಡಿದುಕೊಂಡು ಅವಳು ಅಂಗಳಕ್ಕಿಳಿದಳು.

ಅನ್ನೆ ತಾಯಿಯನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಅವಳಲ್ಲಿ ತುಂಬಿದ್ದ ದುಃಖ ಫಕ್ಕನೆ ಒಡೆದು ಅಳುವಾಯಿತು. ಅವಳು ಹೇಳಿದಳು:

"ಚಿನ್ನದಂತಹ ನನ್ನ ಅಮ್ಮಾ, ಹಾಗೆ ಹೇಳಬೇಡ...... ಇಲ್ಲಿ ನಿಂತಿರುವ...... ಇಲ್ಲಿ ನಿಂತಿರೋರು ನಮ್ಮ......"

"ಥೂ! ತೊಲಗಿ ನಿಲ್ಲು ಆಚೆ!" ಅನ್ನೆಯನ್ನು ದೂಡಿದಳು. ಅನ್ನೆ ಬಿದ್ದು ಬಿಟ್ಟಳು.

ತಕ್ಷಣ ಅವನು ಅವಳನ್ನು ಹಿಡಿದೆಬ್ಬಿಸಿದ. ಅವಳು ಅವನೊಡನೆ ಕ್ಷಮೆ ಕೇಳಿಕೊಂಡಳು.

"ನನ್ನ ತಾಯಿ ಹೇಳೋದೊಂದನ್ನೂ ಮನಸ್ಸಿಗೆ ಹಚ್ಚಿಕೊಬಾರದು! ತಾನು ಏನು ಹೇಳುತ್ತಿರುವುದೆಂಬುದು ಅವಳಿಗೇ ಗೊತ್ತಿಲ್ಲದ ಸ್ಥಿತಿಯಾಗಿದೆ ಅವಳದ್ದು."

ಅವನು ಒಂದು ಮಂದಹಾಸ ಬೀರಿದ—ವೇದನಾಪೂರ್ವಕವಾದ ಮಂದಹಾಸವಾಗಿತ್ತದು!

"ನೀನು—ನೀನಿಲ್ಲಿ ಬರೋದು ನನ್ನ ಮಗಳನ್ನು ಕೊಲ್ಲಿಸೋದಕ್ಕಲ್ಲವೇನು?" ಏಲಿ ಅವನಿಗೆ ಹೊಡೆಯಲು ಪೊರಕೆಯನ್ನೆತ್ತಿದಳು.

"ಅಯ್ಯೋ! ಅಮ್ಮಾ!" ಅನ್ನೆ ಗಟ್ಟಿಯಾಗಿ ಕೂಗಿಕೊಂಡು ತಾಯಿಯ ಕೈಯಲ್ಲಿದ್ದ ಕಸಬರಿಕೆಯನ್ನು ಕಸಿದುಕೊಂಡಳು. ಏಲಿ ಮುಷ್ಟಿ ಹಿಡಿದು ಮಗಳ ಎದೆಗೂ ಹೊಟ್ಟೆಗೂ ಹೊಡೆಯಲು ಪ್ರಾರಂಭಿಸಿದಳು.

ಆ ತೆಳ್ಳಗಿನ ಮನುಷ್ಯನ ಕಣ್ಣುಗಳಿಂದ ಬೆಂಕಿಯ ಕಿಡಿಗಳುದುರಿದುವು. ಅವನು ಏಲಿಯ ಎರಡೂ ಕೈಗಳನ್ನು ಬಲವಾಗಿ ಓಡಿದ. ಅವಳು ಅವನ ಓಡಿತದಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದಳು. ಅವನು ಬಿಡಲಿಲ್ಲ. ಅವನ ಓಡಿತಕ್ಕೆ ಸಿಕ್ಕಿ ಅವಳ ಕೈಗಳು ನೋಯಲಾರಂಭಿಸಿದುವು. ಏಲಿ ಗಟ್ಟಿಯಾಗಿ ಕೂಗಿದಳು:

"ನನ್ನನ್ನು ಕೊಲ್ಲುತ್ತಾನೊ !...... ಕೊಲ್ಲುತ್ತಾನೆ !"

"ಒಂದು ಹಗ್ಗ ಇಲ್ಲಿ ತಾ !" ಅವನು ಅನ್ನೆಗೆ ಹೇಳಿದ.

ಅವಳ ಮುಖ ಕೆಂಪಾಯಿತು; ಕಣ್ಣುಗಳಲ್ಲಿ ಕೋಪದ ಕಿಡಿಯಾಡಿತು. ಅವಳು ಕೇಳಿದಳು:

"ಯಾಕೆ ಹಗ್ಗ?"

"ಕೈ ಕಟ್ಟುವುದಕ್ಕೆ."

"ಬಿಡಿರಿ ! ನನ್ನ ತಾಯಿಯ ಕೈಯನ್ನು ಬಿಡಿರಿ !...... ಅವಳು ನನ್ನನ್ನು ಹೊಡೆಯಲಿ, ನನ್ನನ್ನು ಕೊಲ್ಲಲಿ...... ಬಿಡಿ—ನನ್ನ ತಾಯಿಯ ಕೈಯನ್ನು ಬಿಡಿರಿ !" ಅವಳು ಘರ್ಜಿಸಿದಳು.

ಅವನು ಕೈಗಳನ್ನು ಬಿಟ್ಟ.

ನೆರೆಹೊರೆಯವರು ಓಡಿಬಂದು ಸೇರಿದರು. ಅವರೊಡನೆ ಏಲಿ ಹೇಳಿದಳು:

"ಇವನು...... ಇವನು ನನ್ನನ್ನು ಕೊಲ್ಲಲು ಬಂದಿದ್ದಾನೆ. ನನ್ನ ಮಗಳನ್ನು ಕೊಂಡುಹೋಗಿ ಕೊಲ್ಲಲು ಬಂದವನಿವನು."

ಅವನು ಒಂದು ಸಣ್ಣ ಕಾಗದದ ಕಟ್ಟನ್ನು ಅನ್ನೆಯ ಮುಂದೆ ಇಟ್ಟುಹೋದ—ಕಿರುದಾರಿಗಿಳಿದು ಕಣ್ಣೀರು ಒರಸಿಕೊಂಡ.

ಅನ್ನೆ ಆ ಕಾಗದದ ಕಟ್ಟನ್ನು ತೆಗೆದು ಕಣ್ಣಿಗೆ ಒತ್ತಿಕೊಂಡಳು. ಅದು ನೆನೆದು ಒದ್ದೆಯಾಯಿತು.

( ೧೩ )

ಆ ಬಿಸಿಗಾಳಿಯು ಸಾರ್ವತ್ರಿಕವಾಗಿ ವ್ಯಾಪಿಸಿತು. ಅದರ ತಾಪ ಮತ್ತೂ ಶಕ್ತಿದಾಯಕವಾಗುತ್ತಾ ಬಂದಿತು. ಕ್ರಮೇಣ ಆ ಗಾಳಿಗೆ ಒಂದು ಗುರಿ ಸಿಕ್ಕಿತು.

"ಇಡೀ ದೇಶದ ಕಾರ್ಮಿಕರೇ ಒಂದಾಗಿರಿ !" ಎಂಬ ಒಂದು ಮುದ್ರಾವಾಕ್ಯ ಕೇಳಿಬಂತು. ಅದು ಕೂಲಿಯಾಳುಗಳ ಮನೆಗಳಲ್ಲೂ, ಫ್ಯಾಕ್ಟರಿಗಳಲ್ಲೂ ಚಹದಂಗಡಿಗಳಲ್ಲೂ ಕವಲುದಾರಿಗಳು ಸಂಧಿಸುವೆಡೆಗಳಲ್ಲೂ ಪ್ರತಿಧ್ವನಿಸಿತು. ಕೊನೆಗೆ ಅದುವೇ

ಒಂದು ದಿವ್ಯಮಂತ್ರವಾಯಿತು. ಆಲಪ್ಪಿಯ ಕೂಲಿಕಾರರೆಂದರೆ ಆಲಪ್ಪಿಯ, ತಿರುವಾಂಕೂರಿನ ಇಂಡಿಯದ ಕೂಲಿಕಾರ ಮಾತ್ರವೇ ಆಗಿರಲಿಲ್ಲ. ಅವರು ಲೋಕ ಕಾರ್ಮಿಕ ಸಂಘದವರಾಗಿ ಪರಿವರ್ತಿತರಾದರು.

"ನಿಮಗೆ ನಷ್ಟವಾಗುವುದಕ್ಕೇನೂ ಇಲ್ಲ—ನಿಮ್ಮನ್ನು ಬಂಧಿಸಿರುವ ಶೃಂಖಲೆಯಲ್ಲಿದೆ. ಆದರೆ ನೀವು ಗಳಿಸಲಿರುವುದೊ?—ಇಡೀ ಒಂದು ಲೋಕವನ್ನೆ !"

ನಷ್ಟವಾಗಲಿರುವುದು. ದಾಸ್ಯಶೃಂಖಲೆ ಮಾತ್ರ !—ದಾರಿದ್ರ್ಯ ಉಪವಾಸ, ರೋಗಗಳು, ಮರ್ದನಗಳು ಇತ್ಯಾದಿ !

ಸಂಪಾದಿಸಲಿರುವುದೊ—ಲೋಕದಾದ್ಯಂತ !

ಆಲಪ್ಪಿಯ ಪ್ರತಿಯೊಬ್ಬ ಕೂಲಿಯವನೂ ತನ್ನದೇ ಆದ ಒಂದು ಲೋಕವನ್ನು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡ. ಅವರಲ್ಲಿ ಬಹಳ ಸ್ವಲ್ಪ ಜನರಷ್ಟೆ ಪ್ರಪಂಚದ ಭೂಪಟವನ್ನು ಕಂಡಿರಬಹುದು. ಆ ಭೂಪಟದಲ್ಲಿ ಇಂಡಿಯವನ್ನೂ ತಿರುವಾಂಕೂರನ್ನೂ ಆಲಪ್ಪಿಯನ್ನೂ ಕಂಡಿರಬಹುದು. ಕಾಗದದಲ್ಲಿ ಬಿಡಿಸಿಟ್ಟಿರುವ ಆ ಸಣ್ಣ ಭೂಪಟವನ್ನು ನೋಡಿಯೇ ಈ ದೊಡ್ಡ ಹೊಸ ಲೋಕದ ಕಲ್ಪನೆಯನ್ನು ಮಾಡಿದ್ದು.

ಆಗ ಅವರಿಗೆ ಮನವರಿಕೆಯಾಯಿತು, ಆಲಪ್ಪಿಗಿಂತ ಆಚೆ, ತಿರುವಾಂಕೂರಿಗಿಂತ ಹೊರಗೆ, ಇಂಡಿಯಾಕ್ಕಿಂತ ಹೊರಗೆ ಒಂದು ಮಹಾಲೋಕವಿದೆಯೆಂದೂ ಅಲ್ಲೆಲ್ಲಾ ಕಾರ್ಮಿಕರ ಸಮುದಾಯಗಳಿವೆಯೆಂದೂ ಅವರೆಲ್ಲರೂ ಒಂದೇ ವರ್ಗದವರೆಂದೂ ಆ ಕೂಲಿಕಾರ ವರ್ಗವೆಲ್ಲಾ ಒಂದಾಗಬೇಕೆಂದು. ಮಾತ್ರವಲ್ಲ ಅವರ ಜೀವನದಲ್ಲಿ ಅಂಟಿಬಂದ ದಾರಿದ್ರ್ಯ, ಕಷ್ಟಕಾರ್ಪಣ್ಯಗಳು ಶಾಶ್ವತವಾದವುಗಳಲ್ಲವೆಂದೂ ಅದು ನಾಶವಾಗಬೇಕೆಂದೂ, ನಾಶ ಮಾಡಬೇಕೆಂದೂ ಅವರಿಗೆ ತೋರಿತು. ಅಷ್ಟೇ ಅಲ್ಲದೆ, ಎಲ್ಲಾ ಒಂದಾದರೆ ಲೋಕವಿಡೀ ತಮ್ಮದಾಗುವುದೆಂಬ ಹೊಸ ಗ್ರಹಿಕೆಯೂ ಅವರಲ್ಲುಂಟಾಯಿತು.

ಆ ತೆಳ್ಳಗಿನ ಮನುಷ್ಯ ಎಲ್ಲೆಡೆಗಳಲ್ಲೂ ಕಂಡುಬರುತ್ತಿದ್ದ.

ಅಂದು ಕೂಡಾ ಎಂದಿನಂತೆ ಬೆಳಿಗ್ಗೆ ಗ್ರಾಮಗಳಿಂದ ಶ್ರಮಜೀವಿಗಳು ಪ್ರವಾಹದಂತೆ ಪಟ್ಟಣದ ಫ್ಯಾಕ್ಟರಿಗಳಿಗೆ ಹೋಗುತ್ತಿದ್ದರು. ಫ್ಯಾಕ್ಟರಿಗಳಲ್ಲಿ ಉಪಯೋಗಿಸಿದ ನೀರು ಹರಿದುಹೋಗಲು ಮಾಡಿದ ಕಾಲುವೆಗಳಲ್ಲಿ ಹರಿಯುವ ಬಿಸಿಯಾದ ಕೊಳಕು ನೀರಿನಂತೆ ಆ ಕಾರ್ಮಿಕ ಶಕ್ತಿಯು ಪ್ರವಾಹಗಳಾಗಿ ಸಂಜೆ ತಮ್ಮ ತಮ್ಮ ಗ್ರಾಮಗಳಿಗೆ ಹಿಂತಿರುಗುತ್ತಿತ್ತು.

ಮನುಷ್ಯತ್ವವಿಲ್ಲದ—ಮನುಷ್ಯತ್ವವೆಂದರೇನೆಂದು ಅರಿಯದ, ಅನುಭವಿಸದ—ಕೇವಲ ಕಾರ್ಮಿಕ ಶಕ್ತಿ !

ಆದರೆ ಆ ಕಾರ್ಮಿಕರ ಸಂಘಟನಾ ಶಕ್ತಿಯ ಪ್ರವಾಹದಲ್ಲಿ ಸೂರ್ಯಕಿರಣಗಳು ತಲೆಯೆತ್ತಲು ಪ್ರಾರಂಭವಾದುವು—ಸ್ವಾತಂತ್ರ್ಯ ಸೂರ್ಯಕಿರಣಗಳು ! ಆ ಪ್ರವಾಹದ ಅಂತರಾಳದಿಂದ ಮನುಷ್ಯತ್ವ ಹೊಗೆಯಾಡಿ ಹೊರಗೆ ಬರಲು ಶುರುವಾಯಿತು.

ಮೂಕರಾಗಿ, ತಲೆತಗ್ಗಿಸಿಕೊಂಡು ನಡೆದುಕೊಂಡಿದ್ದವರು ತಲೆಯೆತ್ತಿ ಅತ್ತಿತ್ತ ನೋಡಿ ಮಾತನಾಡಲು ತೊಡಗಿದರು. ಆಗಾಗ ರೋಷದಿಂದ ಕೂಡಿದ ಘರ್ಜನೆಗಳೂ ತೀಕ್ಷ್ಣವಾದ ವಾದಪ್ರತಿವಾದಗಳೂ ಕಠೋರ ಪ್ರತಿಜ್ಞೆಗಳೂ ಕೇಳತೊಡಗಿದುವು.

"ಮಾಲಿಕತ್ವ ನಾಶವಾಗಲಿ!" ಆ ಮಂತ್ರವಾಕ್ಯವನ್ನು ಕೂಗುವಾಗ ಅವರ ಹೃದಯ ಸ್ಪಂದನಗೊಳ್ಳುತ್ತಿತ್ತು.

ಪದ್ಮನಾಭನ್, ಅಚ್ಯುತನ್, ಜೋಸೆಫ್, ಶಂಕು ಇವರಲ್ಲಾ ಆ ಜಾಗೃತಶಕ್ತಿಯ ಪ್ರತಿನಿಧಿಗಳಾಗಿದ್ದರು. ಫ್ಯಾಕ್ಟರಿಯ ಕೆಲಸ ಮುಗಿದೊಡನೆ ಅವರು ಸಂಘದ ಪ್ರವರ್ತಕರಾಗುತ್ತಿದ್ದರು. ದಾರಿಗಳು ಸಂಧಿಸುವೆಡೆಗಳಲ್ಲೂ ಚಹದಂಗಡಿಗಳಲ್ಲೂ ಅವರು ದೀರ್ಘ ಭಾಷಣ ಮಾಡುತ್ತಿದ್ದರು. ವಾದಪ್ರತಿವಾದಗಳನ್ನು ನಡೆಸುತ್ತಿದ್ದರು. ಅವರು ಆವೇಶಗೊಳ್ಳುತ್ತಿದ್ದರು; ಬೇರೆಯವರಿಗೆ ಆವೇಶ ಹುಟ್ಟಿಸುತ್ತಿದ್ದರು.

ಹೊಸದಾಗಿ ರಚಿಸಿದ ಕಾರ್ಮಿಕ ಸಂಘದ ಆಫೀಸಿನಲ್ಲಿ ಕುಳಿತು ಪದ್ಮನಾಭನ್ ಹೇಳಿದ:

"ನಾವೆಲ್ಲಾ ಒಂದಾಗಿ ಗಟ್ಟಿಯಾಗೊಮ್ಮೆ ಘೋಷಿಸಿದರೆ?"

"ಘೋಷಿಸಿದರೇನು?" ಶಂಕು ಕೇಳಿದ.

"ಘೋಷಿಸಿದರೆ...... ನಡುಗೀತು. ಲೋಕವಿಡೀ ನಡುಗೀತು...... ಲೋಕವಿಡೀ ನಡುಗದೆ ಇರಲಾರದು."

ಜೋಸೆಫ್ ಅದನ್ನೇ ಪ್ರತಿಪಾದಿಸಿದ:

"ಧನಿಕರು ನಡುಗುವರು; ಪೋಲೀಸರು ನಡುಗುವರು; ಎಲ್ಲರೂ ನಡುಗಿ ಹೋಗುವರು ಗೊತ್ತೊ?"

"ಹಾಗಿದ್ದರೆ ಎಲ್ಲರೂ ಏಕೆ ಘೋಷಿಸುತ್ತಿಲ್ಲ?" ಎಂದು ಪಪ್ಪನ್ ಕೇಳಿದ.

"ತಡಿ, ಘೋಷಿಸುತ್ತೇವೆ! ನಾವು ಒಂದಾಗಿ ನಿಂತು ಘೋಷಿಸುವುದು ಸಾಧ್ಯ ಎಂಬುದನ್ನು ತೋರಿಸಿಕೊಡಬಹುದು!"

ಅಚ್ಯುತನ್ ನಿರಾಶಾಭಾವದಲ್ಲಿ ಹೇಳಿದ:

"ಹೀಗೆ ಘೋಷಿಸಿದವರೆಲ್ಲಾ ಜೈಲಿನಲ್ಲಿ ಕೊಳೆಯುತ್ತಾರೆ."

"ಕೆಲವರು ಜೈಲಿನಲ್ಲಿ ಕೊಳೆಯುತ್ತಿರುವುದರಿಂದಲೇ ಇಲ್ಲಿ ನಾವು ಒಂದಾಗಿರೋದು. ಅದು ಗೊತ್ತೋ ನಿನಗೆ?"

"ಎಲ್ಲಿ ಒಂದಾಗಿರೋದು?"

"ಎಲ್ಲಿಯೆಂದರೆ ಈ ಸಂಘ, ಈ ಆಫೀಸು ಇದೆಲ್ಲಾ ಮತ್ತೇನು?"

ಅದುವರೆಗೆ ಮೌನವಾಗಿ ಬೆಂಚಿನ ಮೇಲೆ ಕುಳಿತಿದ್ದ ಆ ತೆಳ್ಳಗಿನ ಮನುಷ್ಯ ದೃಢಸ್ವರದಲ್ಲಿ ಹೇಳಿದ:

"ಕಾರ್ಮಿಕರೆಲ್ಲಾ ಒಂದಾಗುವರು; ಒಂದಾಗಿ ಘೋಷಿಸುವರು; ಲೋಕವಿಡೀ

ನಡುಗೀತು; ಲೋಕದಲ್ಲಿರುವ ಧನಿಕರೆಲ್ಲಾ ಬಡವರಾಗುವರು......" ಎನ್ನುನಿಂತು ಅವನು ಮುಂದುವರಿಸಿದ:

"ನಿಮಗೆ ಗೊತ್ತೊ, ಒಂದು ದೇಶದಲ್ಲಿ ಕಾರ್ಮಿಕರು ಒಂದಾದರು; ಅವರು ಒಂದಾಗಿ ಒಕ್ಕೊರಲಿನಿಂದ ಘೋಷಿಸಿದರು; ಅಲ್ಲಿಯ ಮಾಲಿಕರು ನಡುಗಿದರು. ಸರಕಾರವೂ ನಡುಗಿತು; ಕೊನೆಗೆ ಎಲ್ಲವೂ ನಡುಗಿ ಕುಸಿದು ನಾಶವಾಯಿತು."

"ಅದೆಲ್ಲಿ?" ಪದ್ಮನಾಭನ್ ಕೇಳಿದ.

"ರಷ್ಯದಲ್ಲಿ."

"ರಷ್ಯದಲ್ಲೊ? ಎಲ್ಲಿದೆ ರಷ್ಯ?" ಜೋಸೆಫ್ ಕೇಳಿದ.

ಅವನು ರಷ್ಯವನ್ನು ಕುರಿತು ಮತ್ತು ರಷ್ಯನ ವಿಪ್ಲವವನ್ನು ಕುರಿತು ವಿವರಿಸಿದ. ಎಲ್ಲರೂ ಆಸಕ್ತಿಯಿಂದ ಆಲಿಸಿದರು. ಕೊನೆಗೆ ಪದ್ಮನಾಭನ್ ಕೇಳಿದ:

"ಆಗ......?"

"ಆಗ ಏನು?" ಜೋಸೆಫ್ ಕೇಳಿದ.

"ನಮಗೆ ಇಲ್ಲಿಯೂ......?"

ತೆಳ್ಳಗಿನ ಮನುಷ್ಯ ನಡುವೆ ಬಾಯಿ ಹಾಕಿದ:

"ನಾವು ಇಲ್ಲಿಯೂ ಒಂದು ವಿಪ್ಲವವೆಬ್ಬಿಸಬೇಕು; ಅದು ಆಗಿಯೇ ತೀರಬೇಕು. ಪ್ರಭುತ್ವದ ಮತ್ತು ಅಧಿಕಾರತ್ವದ ಮರ್ದನ ಮತ್ತು ಶೋಷಣೆ ವಿಪ್ಲವದ ಮೂಲಕ ಮಾತ್ರವೇ ಕೊನೆಗೊಳಿಸಲು ಸಾಧ್ಯ."

ವಿಪ್ಲವ! ಏನದರ ಅರ್ಥ?

ರಷ್ಯದಲ್ಲಿ ಕಾರ್ಮಿಕವರ್ಗ ಒಂದಾಗಿ, ಆಯುಧಧಾರಿಗಳಾಗಿ, ರಂಗಕ್ಕಿಳಿದು ಅನೇಕ ಜನರನ್ನು ಕೊಂದರು. ತಾವೂ ಸತ್ತರು. ಮಾರ್ಗದಲ್ಲಿ ರಕ್ತದ ಹೊಳೆ ಹರಿಯಿತು. ವಿಪ್ಲವ ಎಂದರೆ ಅದೇ.

ಆಮೇಲೆ?

ಕಾರ್ಮಿಕರು ಆಡಳಿತವನ್ನು ಬಲಾತ್ಕಾರವಾಗಿ ತಮ್ಮ ವಶಕ್ಕೆ ತೆಗೆದುಕೊಂಡರು; ಇದೆಲ್ಲ ಸಾಧ್ಯವಾದದ್ದು ವಿಪ್ಲವದಿಂದ.

ಇಲ್ಲಿ?

ಇಲ್ಲಿಯೂ ಒಂದು ವಿಪ್ಲವವುಂಟಾಗಬೇಕು. ಇಲ್ಲಿಯೂ ಬೀದಿಬೀದಿಗಳಲ್ಲಿ ರಕ್ತದ ಹೊಳೆ ಹರಿಯಬೇಕು. ಆಳ್ವಿಕೆಯನ್ನು ಬಲಾತ್ಕಾರವಾಗಿ ಸೆಳೆದುಕೊಳ್ಳಬೇಕು.

"ಆಗ ನಮ್ಮವರೆಲ್ಲಾ ಪೋಲೀಸರಾಗುತ್ತಾರೊ?" ಜೋಸೆಫ್ ಕೇಳಿದ.

ಆ ತೆಳ್ಳಗಿನ ಮನುಷ್ಯ ದೃಢತೆಯಿಂದ ಹೇಳಿದ:

"ಪೋಲೀಸರು ಮಾತ್ರವೇಕೆ, ಎಲ್ಲವೂ; ಎಲ್ಲವೂ ನಾವೇ ಆಗುತ್ತೇವೆ."

ಎಲ್ಲವೂ! ಎಲ್ಲವೂ ಕಾರ್ಮಿಕರ ವರ್ಗದವರದ್ದಾಗುವುದು! ಏನೂ ಇಲ್ಲದವರು ಎಲ್ಲದರಲ್ಲಿಯೂ ಪಾಲುಳ್ಳವರಾಗುವರು.

ಎಲ್ಲರೂ ತಲೆಯೆತ್ತಿದರು; ಎದೆಯುಬ್ಬಿಸಿದರು.

ಕುಟ್ಟಪ್ಪನ ಚಪದಂಗಡಿಯಲ್ಲಿ ಮಧ್ಯರಾತ್ರಿಯ ವರೆಗೆ ಚರ್ಚೆಗಳು ನಡೆದುವು. ಬಿಸಿಗಾಳಿ ಬಿರುಸಾಗಿ ಬೀಸಿಬೀಸಿ ಬರುತ್ತಿತ್ತು.

ನಡುರಾತ್ರಿಯಾಗುತ್ತಲೇ ಎಲ್ಲರೂ ತಲೆಯೆತ್ತಿ, ಎದೆಯುಬ್ಬಿಸಿಕೊಂಡು, ಚಪ ದಂಗಡಿಯಿಂದ ಹೊರಟುಹೋದರು. ಕುಟ್ಟಪ್ಪ ಮತ್ತು ಆ ತೆಳ್ಳಗಿನ ಮನುಷ್ಯ ಅಲ್ಲೇ ಮಲಗಿ ನಿದ್ರೆಹೋದರು.

ಹೊರಗಿನ ಬಾಗಿಲ ಹಲಗೆಯನ್ನು ಯಾರೋ ತಟ್ಟುತ್ತಿದ್ದರು. ಇಬ್ಬರಿಗೂ ಎಚ್ಚರವಾಯಿತು. ಬಾಗಿಲು ತಟ್ಟುವ ಸದ್ದಿನೊಂದಿಗೆ ಯಾರೋ ಕರೆಯುತ್ತಿರುವ ದನಿಯೂ ಕೇಳಿಸಿತು. ಅದು ಒಂದು ಸ್ತ್ರೀಯ ಧ್ವನಿಯಾಗಿತ್ತು.

"ಏಯ್, ಏಯ್ !"

"ಯಾರದು?" ಕುಟ್ಟಪ್ಪ ಕೇಳಿದ. ಅವರಿಬ್ಬರೂ ಎದ್ದು ಹೊರಟರು.

ಅಂಗಡಿಯ ಬಾಗಿಲಿನ ಒಂದು ಹಲಗೆಯನ್ನು ತೆಗೆದು ಕುಟ್ಟಪ್ಪ ಕುತೂಹಲದಿಂದ ಕೇಳಿದ:

"ಯಾರದು?"

ದಾರಿದೀಪಗಳು ನಂದಿದ್ದುವು. ಕತ್ತಲೆಯಲ್ಲಿ ಯಾರೋ ನಿಂತಿದ್ದರು. ಆಗಾಗ ಬಿಕ್ಕಿಬಿಕ್ಕಿ ಅಳುವ ಧ್ವನಿ ಕೇಳುತ್ತಿತ್ತು. ಕುಟ್ಟಪ್ಪನು ಅದೇ ಪ್ರಶ್ನೆಯನ್ನು ಮತ್ತೊಮ್ಮೆ ಕೇಳಿದ:

"ಯಾರದು? ಹೇಳು ಯಾರೆಂದು?"

"ಗಾಳಿ ಇರುವರೊ ಗಾಳಿ?" ಬಿಕ್ಕಿ ಅಳುವುದರೆಡೆಯಿಂದ ಹೊರಟ ಪ್ರಶ್ನೆ ಯಾಗಿತ್ತು ಅದು.

"ಇದ್ದಾನೆ. ಏನಾಗಬೇಕಾಗಿದೆ?" ತೆಳ್ಳನೆಯ ಮನುಷ್ಯ ಮುಂದೆ ಬಂದ.

"ಅ—ಮ್ಮ !" ದುಃಖಾತಿಶಯವಾಗಿ ಒಮ್ಮೆ ಚೀರಿದಳು !

"ಯಾರದು? ಅನ್ನೆಯೊ? ತಾಯಿಗೇನಾಯ್ತು?"

"ತಾಯಿಯು ಕಾಣುತ್ತಿಲ್ಲ...... ನನ್ನ ತಾಯಿ ಇಲ್ಲಿಗೆ ಬಂದಳೊ...... ನನ್ನ ತಾಯಿಯನ್ನು ನೀವು ನೋಡಿದಿರಾ?" ಬಿಕ್ಕಿಬಿಕ್ಕಿ ಅಳುತ್ತಾ ಕೇಳಿದಳು.

"ಯಾವಾಗ ತಾಯಿಯನ್ನು ನೋಡಿದುದು?"

"ಕತ್ತಲಾದೊಡನೆ, ಸ್ವರ್ಗದಲ್ಲಿ ತಂದೆಗೆ ಗಂಜಿ ಮಾಡಿ ಕೊಡೋದಕ್ಕೆ ಹೋಗು ತ್ತೇನೆಂದು ಹೇಳಿ, ಮನೆಯಿಂದ ಹೊರಟು ಓಡಿದಳು. ನಾನು ಹೋಗಿ ತಡೆದೆ. ನನಗೆ ಚೆನ್ನಾಗಿ ಹೊಡೆದಳು. ಆಮೇಲೆ ಅವಳಿಗೆ ಪ್ರಜ್ಞೆ ಬಂತು. ಅವಳನ್ನು ಕರತಂದು ಊಟ ಮುಗಿಸಿ ಮಲಗಿದೆವು. ಮಧ್ಯರಾತ್ರಿ ಎದ್ದು ನೋಡುವಾಗ......" ಆಮೇಲೆ ಮಾತು ಹೊರಡಲಿಲ್ಲ ಅವಳಿಂದ.

"ಬಾ." ಅವನು ನಡೆದ. ಅನ್ನೆ ಅವನನ್ನು ಹಿಂಬಾಲಿಸಿದಳು. ನಿರ್ಜನವಾದ

ಇರುಳಲ್ಲಿ ಅವರು ನಡೆಯುತ್ತಿದ್ದರು. ದಾರಿಬದಿಗಳನ್ನು ಬಹಳ ಜಾಗ್ರತೆಯಿಂದ ನೋಡಿಕೊಂಡು ಹೋಗುತ್ತಿದ್ದರು. ಅನ್ನೆ ಕೇಳಿದಳು:

"ದಾರಿ ಗೊತ್ತಿದೆಯೊ?"

"ಎಲ್ಲಿಗೆ ದಾರಿ?"

"ಸ್ವರ್ಗಕ್ಕೆ ಹೋಗುವ ದಾರಿ?"

ಅವನು ಉತ್ತರ ಹೇಳಲಿಲ್ಲ. ಕತ್ತಲೆಯತ್ತ ಕಣ್ಣರಳಿಸಿ ನೋಡಿ, ಅವನೊಮ್ಮೆ ಮಂದಹಾಸ ಬೀರಿದ. ಅನ್ನೆ ತನ್ನ ಪ್ರಶ್ನೆಗಳನ್ನು ಮುಂದುವರಿಸಿದಳು:

"ಹೇಗೆ ಹೋಗೋದು?"

ಉತ್ತರವಿಲ್ಲ.

"ನೀವು ಈ ಮೊದಲು ಹೋಗಿರುವಿರಾ?"

"ಇಲ್ಲ."

"ಹಾಗಿದ್ದರೆ ನನ್ನ ತಾಯಿ......" ಅವಳು ಹಠಾತ್ತನೆ ಚೀರಿದಳು. ಅವನು ತಿರುಗಿ ನಿಂತ. ಅವಳ ತೋಳಿನಲ್ಲಿ ಕೈಯಿಟ್ಟು, ಅವಳನ್ನು ಹತ್ತಿರಕ್ಕೆ ಎಳೆದುಕೊಂಡ.

"ಅಳಬೇಡ. ನಿನ್ನ ತಾಯಿ ಅಲ್ಲಿಗೆ ಹೋಗಿರಲಾರಳು" ಅವನು ಅವಳ ಕಣ್ಣೀರು ಒರಸಿದ.

"ಖಂಡಿತ ಹೋಗಿರಬೇಕು" ಅವಳು ಹೇಳಿದಳು.

ಅವನು ಏನೂ ಹೇಳಲಿಲ್ಲ. ಏನನ್ನು ಹೇಳುವುದು? ಸ್ವರ್ಗದಲ್ಲೆಲ್ಲೋ ತಂದೆಗೆ ಗಂಜಿ ಮಾಡಿಕೊಡಲು ತಾಯಿ ಹೋಗಿರುವಳೆಂದೂ ಅಲ್ಲಿ ಹೋದರೆ ಮತ್ತೆ ಹಿಂದಿರುಗಲು ಸಾಧ್ಯವಿಲ್ಲವೆಂದೂ ಅವಳಿಗೆ ಗೊತ್ತಿದೆ. ಮತ್ತೆ ಅವನು ಹೇಳುವುದಾದರೂ ಏನು?

ಆದರೆ ಅವನ ಮನಸ್ಸಿನಲ್ಲೂ ಒಂದು ಸಂಶಯ ಉಂಟಾಯಿತು. ಭ್ರಾಂತಿಯಿಂದ ಓಡಿಹೋದ ಏಲಿ ಎಲ್ಲಿಯಾದರೂ ಬಿದ್ದು ಸತ್ತಿರಬಹುದೋ ಏನೋ?

ಅವರು ಮುಂದೆ ನಡೆದರು. ಎಲ್ಲಿಗೆ ಹೋಗುವುದೆಂದು ಇಬ್ಬರಿಗೂ ಗೊತ್ತಿಲ್ಲ.

ಬೆಳಗಾಯಿತು. ಪಟ್ಟಣದ ಮೂಡಣ ತುದಿಯಲ್ಲಿ ತೊರೆಗಳು ಸಂಧಿಸುವಲ್ಲಿ ದಾರಿಗಾಣದೆ ಅವರು ನಿಂತರು. ವಿಶಾಲವಾದ ಕಡಲಿನ ಮತ್ತು ತೆಂಗಿನ ತೋಟಗಳ ಆಚೆಯಿಂದ ಉದಿಸಿ ಬರುತ್ತಿರುವ ಸೂರ್ಯನನ್ನು ನೆಟ್ಟ ದೃಷ್ಟಿಯಿಂದ ನೋಡುತ್ತಾ ನಿಂತ ಆ ತೆಳ್ಳಗಿನ ಮನುಷ್ಯ. ಅನ್ನೆ ಹತ್ತಿರದ ತೆಂಗಿನ ಮರಕ್ಕೆ ಒರಗಿದಳು.

"ನ–ನ್ನ ಅ–ಮ್ಮಾ!......" ದುಃಖ ತಡೆಯಲಾರದೆ ಅವಳು ಮೂರ್ಛೆ ಹೋದಳು.

ಅವನು ಅವಳನ್ನು ಆಧರಿಸಿ ಹಿಡಿದು ಮಲಗಿಸಿದ. ನೆರೆಹೊರೆಯವರು ಓಡಿ ಬಂದು ಸೇರಿದರು. ಅವಳನ್ನು ಒಂದು ಬೆಂಚಿನ ಮೇಲೆ ಮಲಗಿಸಿ ಮನೆಗೆ ಕರೆದುಕೊಂಡು ಹೋದರು.

ಮರುದಿನ ಪಟ್ಟಣದಲ್ಲಿ ಒಂದು ವಾರ್ತೆ ಹಬ್ಬಿತು—ವೇಂಬಾಸೂರಿನ ಓನ್ನೀರ ಹೊಳೆಯಲ್ಲಿ ಒಬ್ಬ ಸ್ತ್ರೀಯ ಶವ ತೇಲುತ್ತಿದೆಯೆಂದು......

( ೧೪ )

ಅನ್ನೆ ಏಕಾಂಗಿಯಾದಳು. ಅವಳ ತಂದೆ ಸ್ವರ್ಗಕ್ಕೆ ಹೋದ; ತಂದೆಗೆ ಗಂಜಿ ಮಾಡಿ ಕೊಡಲು ತಾಯಿಯೂ ಹೋದಳು; ಅಣ್ಣಂದಿರು ಜೈಲಿನಲ್ಲಿದ್ದರು; ಜೀವನದ ವಸಂತ ಕಾಲವು, ಅವಳಿಗೆ ಒಣಗಿ ಉರಿಯುತ್ತಿರುವ ಒಂದು ಮರುಭೂಮಿಯಾಗಿ ಮಾರ್ಪಟ್ಟಿತು.

ಆ ತೆಳ್ಳಗಿನ ಮನುಷ್ಯ ಪ್ರತಿದಿನ ಅಲ್ಲಿಗೆ ಹೋಗುತ್ತಿದ್ದ. ಒಂದು ಸಣ್ಣ ಕಾಗದದ ಗಂಟನ್ನು ಅವಳ ಕೈಯಲ್ಲಿ ಕೊಡುತ್ತಿದ್ದ. ಅವಳ ಅನುದಿನದ ಖರ್ಚಿಗೆ ಬೇಕಾದ ಹಣವಾಗಿತ್ತು ಅವನು ಕೊಡುತ್ತಿದ್ದುದು.

ಅವನು ಅವಳೊಡನೆ ಏನೂ ಕೇಳುವುದಿಲ್ಲ. ಪ್ರಶ್ನೆಗಳು ಮತ್ತು ಉತ್ತರಗಳು ಅವರೀರ್ವರಿಗೂ ಗೊತ್ತು. ಮತ್ತೆ ಕೇಳುವುದಾದರೂ ಏನು?

ಹಣವನ್ನು ಕೊಟ್ಟು ನಂತರ ಸ್ವಲ್ಪ ಸಮಯ ಅವರು ಒಬ್ಬರನ್ನೊಬ್ಬರು ನೋಡುತ್ತಾ ನಿಲ್ಲುತ್ತಿದ್ದರು. ಇಬ್ಬರೂ ಮುಗುಳ್ನಗುತ್ತಿದ್ದರು. ಆಮೇಲೆ ಅವನು ವಾಪಸ್ ಹೋಗುತ್ತಿದ್ದ. ಅವನು ಹೋಗುವುದನ್ನು ನೋಡುತ್ತಾ ಅವಳು ಅಲ್ಲೇ ನಿಂತಿರುತ್ತಿದ್ದಳು. ಕಿರುದಾರಿ ತಿರುಗುವೆಡೆಗೆ ತಲುಪಿದಾಗ ಅವನು ತಿರುಗಿ ನೋಡುತ್ತಿದ್ದ. ಆಗಲೂ ಅವಳು ಅಲ್ಲೇ ನಿಂತಿರುವುದು ಕಾಣುತ್ತಿತ್ತು.

ಒಂದು ದಿನ ಅವನು ದುಡ್ಡಿನ ಕಟ್ಟನ್ನು ಅವಳಿಗೆ ಕೊಟ್ಟು ಏನೋ ಕೇಳಬೇಕೆಂದು ಯತ್ನಿಸಿದ. ಆದರೆ ಮಾತುಗಳು ಹೊರಡಲಿಲ್ಲ. ಮತ್ತೊಂದು ದಿನ ದುಡ್ಡಿನ ಗಂಟನ್ನು ತೆಗೆದುಕೊಂಡು, ಅವಳೇನೋ ಕೇಳಬೇಕೆಂದು ಯೋಚಿಸಿದಳು. ಆದರೆ ಅವಳಿಗೂ ಮಾತುಗಳು ಹೊರಡಲಿಲ್ಲ.

ಮತ್ತೊಂದು ದಿನ ಹಣದ ಕಟ್ಟನ್ನು ತೆಗೆದುಕೊಂಡು, ಅವಳು ಮ್ಲಾನ ವದನೆಯಾಗಿ ನಿಂತಳು. ಅವನು ಕುತೂಹಲದಿಂದ ಕೇಳಿದ:

"ಏನು?"

ಅವಳು ಮೇಲೆ ನೋಡುತ್ತಾ ಹೇಳಿದಳು:

"ಎಷ್ಟು ದಿವಸ ಹೀಗೆ......?"

"ನಾನೀ ರೀತಿಯಲ್ಲಿ ಹಣ ತಂದು ಕೊಡೋದನ್ನು ತೆಗೆದುಕೊಳ್ಳಲು ಕಷ್ಟವಾಗಿ ತೋರುತ್ತದೆಯೇ?"

"ತೆಗೆದುಕೊಳ್ಳಬೇಕೆಂಬ ಬೇಸರವಲ್ಲ."

"ಮತ್ತೇನು?"

"ಪ್ರತಿದಿನವೂ ಹೀಗೆ ಹಣ ತರೋದು......"

ಅವನೊಮ್ಮೆ ಮಂದಹಾಸ ಬೀರಿದ ಅಷ್ಟೆ. ಅವಳು ಕೇಳಿದಳು:

"ಯಾವಾಗಲೂ ಹೀಗೆ ತಂದುಕೊಡೋದಕ್ಕೆ ಸಾಧ್ಯವಾಗುತ್ತದೆಯೆ?"

"ಅವರು ಬರುವ ವರೆಗೆ ತಂದರೆ ಸಾಕಲ್ಲ."

"ಅವರು ಬರುತ್ತಾರೋ?"

"ಬರುವರು."

"ಸ್ವರ್ಗಕ್ಕೆ ಹೋದ ಮೇಲೆ ಮತ್ತೆ ಹಿಂದಿರುಗಲು ಸಾಧ್ಯವಿಲ್ಲವೆಂದಲ್ಲವೆ ಹೇಳಿದ್ದು?"

"ಅದು ಸರಿ. ಆದರೆ ನಾನು ಅಂತೋಣಿ ಮತ್ತು ರೋಕಿಯರ ವಿಷಯ ಹೇಳಿದ್ದು" ಅವನು ನಕ್ಕ.

"ಎಂದು ಬರುತ್ತಾರೆ?"

"ಇನ್ನು ಸ್ವಲ್ಪ ದಿವಸಗಳು ಕಳೆದರೆ ಸಾಕು."

"ಅವರು ಬಂದ ಮೇಲೂ ನೀವು ಇಲ್ಲಿಗೆ ಬರುವಿರೋ?"

ಅವರೀರ್ವರೂ ಮೌನವಾಗಿ ತಲೆಬಾಗಿ ನಿಂತರು. ಅವಳು ಏನೋ ಕೇಳಬೇಕೆಂದು ಭಾವಿಸಿದಳು. ಆದರೆ ಕೇಳಲಿಲ್ಲ.

ಅವನು ನಿಧಾನವಾಗಿ ಹಿಂತಿರುಗಿ ಹೋದ. ಕಿರುದಾರಿ ತಿರುಗುವೆಡೆಗೆ ತಲುಪಿದಾಗ ಅವನು ತಿರುಗಿ ನೋಡಿದ. ಅವಳು ಆಗಲೂ ಅಲ್ಲೇ ನಿಂತಿದ್ದಳು.

ಮತ್ತಾಯಿ ಮತ್ತು ಸೈಮನರ ತಂದೆ ಔಸೇಪ್ಪು ಅನ್ನೆಯೊಡನೆ ಹೇಳಿದ, ರಾತ್ರಿ ತಮ್ಮ ಮನೆಗೆ ಬಂದು ಮಲಗಿಕೊಳ್ಳಲು. ಅವಳು ಅದಕ್ಕೆ ಒಪ್ಪಲಿಲ್ಲ. ತನ್ನ ತಾಯಿ ಜೀವಿಸಿದ್ದ ಮನೆಯಿಂದ, ತನ್ನ ತಂದೆ ಸತ್ತ ಮನೆಯಿಂದ ಮತ್ತೊಂದು ಮನೆಗೆ ಹೋಗಿ 'ರಾತ್ರಿ ಉಳಕೊಳ್ಳಲು' ಅವಳು ಒಪ್ಪಲಿಲ್ಲ. ಅವಳು ಹೇಳಿದಳು:

"ನಾನು ಬರಲಾರೆ ಅಪ್ಪಾ. ನನ್ನ ತಂದೆತಾಯಿಯರ ಹತ್ತಿರ ಹೋಗುವ ವನಕ ನಾನಿಲ್ಲೇ ಮಲಗುವೆ."

ಹುರಿಯಿಂದ ಮಾಡಿದ ತಂದೆಯ ಮಂಚದ ಹತ್ತಿರ, ತಾಯಿ ಮಲಗಿದ ಚಾಪೆಯ ಮೇಲೆ ಅವಳು ಮಲಗುತ್ತಿದ್ದಳು. ಅವಳು ನಿದ್ರೆಯಲ್ಲಿ ತಾಯಿಯನ್ನೂ ತಂದೆಯನ್ನೂ ಕಾಣುತ್ತಿದ್ದಳು; ಕಂಡು ಅವರಲ್ಲಿ ಮಾತಾಡುತ್ತಿದ್ದಳು.

ಒಂದು ದಿನ ಸಂಜೆ ವರೀದು ಸಾಹೇಬನ ಫ್ಯಾಕ್ಟರಿಯ ಮೇಸ್ತ್ರಿ ಅನ್ನೆಯ ಮನೆಗೆ ಹೋದ. ಅವನು ಅವಳೊಡನೆ ಕೇಳಿದ:

"ಖರ್ಚಿಗೇನು ಮಾಡುತ್ತಿ?"

ಅವಳು ಏನೂ ಹೇಳಲಿಲ್ಲ.

"ನೀನೇಕೆ ಕಂಪೆನಿಗೆ ಬರಬಾರದು?"

ಅವಳು ಉತ್ತರಿಸಲಿಲ್ಲ.

"ನೀನೇಕೆ ಮಾತನಾಡುವುದಿಲ್ಲ?"

"ನಾನು ಏನನ್ನು ಮಾತಾಡಬೇಕು?"

"ನಿನ್ನನ್ನು ಕಂಪೆನಿಗೆ ಬರಲು ಹೇಳಿದ್ದು."

"ಏಕೆ?"

"ಏಕೆಂದೊ? ಬಂದರೆ ಕೆಲಸ ಕೊಡುವೆ."

"ಅಣ್ಣಂದಿರಲ್ಲಿ ಕೇಳದೆ ನಾನು ಬರಲಾರೆ."

ಅವರಿನ್ನು ಯಾವಾಗ ಬರೋದು?"

"ಅ !"

"ಹಾಗಿದ್ದರೆ ಖರ್ಚಿಗೇನು ಮಾಡುತ್ತಿ?"

"ಹೇಗಾದರೂ ದಿನ ಕಳೆಯೋದು."

"ಹಾಗಿದ್ದರೆ ಒಂದು ಕೆಲಸ ಮಾಡು."

"ಏನು?"

"ನೀನು ಕೆಲಸಕ್ಕೆ ಬರಬೇಕಿಲ್ಲ, ನಿನಗೆ ಹಾಗೆ ಕೂಲಿ ಕೊಟ್ಟುಬಿಡುತ್ತೇನೆ."

"ಅದು ಹೇಗೆ ಸ್ವಾಮಿ, ಕೆಲಸ ಮಾಡದೆ ಕೂಲಿ ಕೊಡೋದು?"

"ಅದು ಹೇಗೆಂದರೆ ?...... ಅದು......" ಅವನು ಅರ್ಥಸೂಚಕವಾಗಿ ನಕ್ಕ. ಅವಳು ಅಲ್ಲಿಂದ ಹೋಗಿಬಿಟ್ಟಳು.

ಆ ವಿಷಯವನ್ನು ಅವಳು ಔಸೇಪ್ಪನಲ್ಲಿ ಹೇಳಲಿಲ್ಲ. ಮರುದಿನ ತೆಳ್ಳಗಿನ ಮನುಷ್ಯ ಬಂದಿದ್ದಾಗ ಅವನಲ್ಲಿ ಹೇಳಿದಳು:

"ಕಂಪೆನಿಯ ಮೇಸ್ತ್ರಿ ಇಲ್ಲಿಗೆ ಬಂದಿದ್ದ."

"ಏಕೆ?" ಅವನ ಮುಖ ಕೆಂಪಾಯಿತು.

"ಕಂಪೆನಿಗೆ ಹೋಗುವುದಕ್ಕೆ ಹೇಳಲು. ನಾನು ಬರುವುದಿಲ್ಲವೆಂದೆ. ಆಗ ಅವನು ಹೇಳಿದ, ಕಂಪೆನಿಗೆ ಬರಬೇಕಾಗಿಲ್ಲ, ಆದರೆ ಕೂಲಿ ಕೊಡುತ್ತೇನೆ, ಎಂದ. ಕೆಲಸ ಮಾಡದೆ ಕೂಲಿ ಕೊಡೋದು ಹೇಗೆಂದು ನಾನು ಕೇಳಿದಾಗ ಅವನು ಹಲ್ಲು ಕಿರಿದ."

"ಹುಂ." ಗಂಭೀರವಾದ ಒಂದು ಹೂಂಕಾರವಾಗಿತ್ತು ಅದು.

ಅಂದು ಸಂಜೆಯೂ ಮೇಸ್ತ್ರಿ ಬಂದ. ಅವನು ಕೇಳಿದ:

"ರಾತ್ರಿಯಲ್ಲಿ ಯಾರಿರುತ್ತಾರೆ ನಿನ್ನ ಜೊತೆ?"

"ಔಸೇಪ್ಪಜ್ಜ ಇಲ್ಲಿ ಬಂದು ಮಲಗುತ್ತಾರೆ."

ಸ್ವಲ್ಪ ಸಮಯ ಸುಮ್ಮನಿದ್ದು ಅವನು ಹೇಳಿದ:

"ಸಣ್ಣ ಮಾಲಿಕರು ಹೇಳಿದ್ದರಿಂದ ನಾನು ಇಲ್ಲಿಗೆ ಬಂದದ್ದು."

ಅವಳು ಏನೂ ಹೇಳಲಿಲ್ಲ.

"ಸಣ್ಣ ಮಾಲಿಕರು ರಾತ್ರಿ ಇಲ್ಲಿಗೆ ಬರುವರಂತೆ."

"ಏಕೆ?"

"ನನ್ನೊಡನೆ ಹೇಳಿದರು, ಅದಕ್ಕೆ ನಿನ್ನನ್ನು ಕೇಳಲು......"

"ತಮ್ಮ ಜಮೀನನ್ನು ನೋಡಲು ಬರುವುದಕ್ಕೆ ಅವರು ನನ್ನಲ್ಲೇಕೆ ಕೇಳಬೇಕು?"

"ಕೇಳೋದಾ?...... ಕೇಳೋಮು......" ಅವನು ನಕ್ಕ. ಅವಳು ಅಲ್ಲಿಂದ ಹೋಗಿಬಿಟ್ಟಳು.

ಕತ್ತಲಾಯ್ತು. ವೃದ್ಧ ಔಸೇಪ್ಪ್ ಬಂದ. ಅವನು ಚಾವಡಿಯಲ್ಲಿ ಚಾಪೆ ಹಾಕಿ ಮಲಗಿದ. ಹಾಗೂ ಹೀಗೂ ಅವನಿಗೆ ನಿದ್ರೆ ಹತ್ತಿತು. ಅನ್ನೆ ನಿದ್ರೆ ಮಾಡಲಿಲ್ಲ.

ಹೊರಗೆ ಕಾಲ ಸಪ್ಪಳ! ಯಾರೋ ಮನೆಯ ಅಂಗಳದಲ್ಲಿ ನಡೆಯುವ ಹಾಗೆ! ಅನ್ನೆ ಮೆಲ್ಲಗೆ ಅಜ್ಜನನ್ನು ಕರೆದಳು:

"ಅಜ್ಜಾ!"

ಔಸೇಪ್ಪ್ ಏಳಲಿಲ್ಲ. ಕಾಲ ಸಪ್ಪಳ ನಿಂತಿತು.

"ಬಂದ?" ಅವಳು ತನ್ನಷ್ಟಕ್ಕೆ ಹೇಳಿಕೊಂಡಳು. ಮೆಲ್ಲಗೆ ಎದ್ದಳು. ಇರುಳಲ್ಲಿ ಆಚೀಚೆ ತಡವಿ ಕುಡುಗೋಲು ಕೈಗೆತ್ತಿಕೊಂಡಳು. ಅದನ್ನು ತಲೆಯ ಪಕ್ಕದಲ್ಲಿಟ್ಟು ಕೊಂಡು ಮತ್ತೆ ಮಲಗಿದಳು.

ಯಾರೋ ಓಡುತ್ತಿದ್ದಾರೆ! ಒಂದು ಘರ್ಜನೆ, ಒಂದು ರೋದನ!

ಅನ್ನೆ ಫಕ್ಕನೆ ಎದ್ದಳು. ಕುಡುಗೋಲು ಹಿಡಿದುಕೊಂಡು ಅವಳು ಬಾಗಿಲು ತೆರೆದಳು. ಮತ್ತೂ ಒಂದು ರೋದನ ಕೇಳಿಸಿತು. ಅವಳು ಕೂಗಿ ಕೇಳಿದಳು:

"ಯಾರದು?"

"ಅಯ್ಯೋ! ಏನಾಯ್ತು, ಏನಾಯ್ತು?" ಔಸೇಪ್ಪ್ ನಿದ್ರೆಯಿಂದ ಎಚ್ಚರವಾಗಿ ಫಕ್ಕನೆ ಎದ್ದ.

ಅನ್ನೆ ಅಂಗಳಕ್ಕಿಳಿದಳು. ಔಸೇಪ್ಪನೂ ಇಳಿದ. ಅವನು ಗಾಬರಿಗೊಂಡು ಕೇಳಿದ:

"ಏನಾಯ್ತು ಮಗಳೆ? ಯಾರು?"

ಕಿರುದಾರಿಯಿಂದ ಐದಾರು ಮಂದಿ ಅಂಗಳಕ್ಕೆ ಬಂದರು. ತೆಳ್ಳಗಿನ ಮನುಷ್ಯ ಅವಳ ಹತ್ತಿರ ಬಂದು ಹೇಳಿದ:

"ಏನಿಲ್ಲ, ಏನಿಲ್ಲ."

"ಯಾರು ಬೊಬ್ಬೆಯಿಟ್ಟದ್ದು?"

"ಅದೇನಿಲ್ಲ ಸುಮ್ಮನೆ."

"ಸುಮ್ಮನೆ ಅರಚಿಕೊಳ್ಳುತ್ತಾರೆಯೊ?"

"ಅದೊಂದು ತಮಾಷೆ. ಬರೀ ತಮಾಷೆ" ಅವನು ಅವಳ ಹತ್ತಿರದಲ್ಲಿ ನಿಂತು ಕೇಳಿದ:

"ಇದು ಯಾಕೆ?...... ಈ ಕುಡುಗೋಲು?"

"ಇದೇ?...... ಇದು......" ಅವಳು ಹಲ್ಲು ಕಡಿದಳು.

"ಇನ್ನು ಉಪದ್ರವವೇನೂ ಇರದು. ಹೋಗಿ ಮಲಗಿಕೊ" ಅವನು ಹಿಂತಿರುಗಿ ಹೋದ. ಉಳಿದವರೂ ಅವನನ್ನು ಅನುಸರಿಸಿದರು.

ಜೋಸೇಫ್ ಅವಳೊಡನೆ ಕೇಳಿದ:

"ಅರಚಿದ್ದು ಯಾರು ಮಗಳೇ?"

"ಕಿರಿಯ ಮಾಲಕನೆಂದು ತೋರುತ್ತದೆ."

ಅವನು ಸ್ವಲ್ಪ ಸಮಯ ಮೌನವಾಗಿದ್ದು ಮತ್ತೆ ಕೇಳಿದ:

"ಕಿರಿಯ ಮಾಲಿಕನಾದರೆ......"

"ಆದರೆ?"

"ಹಾವನ್ನು ನೋಯಿಸಿಬಿಟ್ಟರೆ......"

"ಬಿಟ್ಟರೆ?"

"ಕಾದು ಕುಳಿತು ಕಡಿದೀತು."

"ಕೊಂದರೊ?"

"ಜೊತೆಯ ಹಾವು ಬಂದು ಕಚ್ಚೀತು."

"ಹಾಗಿದ್ದರೆ ನೋಯಿಸಿದರೂ, ಕೊಂದರೂ ಕಡಿಯುವ ಜಾತಿಯಾಗಿದೆ...... ಅಲ್ಲವೆ?"

"ಹುಂ. ನೋಯಿಸಿ ಬಿಟ್ಟರೂ ಆಪತ್ತು, ಕೊಂದರೂ ಆಪತ್ತು."

"ಹಾಗಿದ್ದರೆ ಮತ್ತೇನು ಮಾಡೋದು?"

"ದೇವರೇ ಕಾಪಾಡಬೇಕು!" ಅವನು ಆಕಾಶದತ್ತ ನೋಡಿದ.

ಎರಡು ದಿನಗಳು ಕಳೆದುವು. ಅನ್ನೆ ಬೆಳಿಗ್ಗೆ ಅಡುಗೆಕೋಣೆಯಲ್ಲಿ ಒಲೆಯುರಿಸುತ್ತಿದ್ದಳು. ಹೊರಗಿನಿಂದ ಯಾರೋ ಕರೆದರು. ಅವಳು ಬೇಗನೆ ಹೊರಗೆ ಬಂದಳು. ಅಂಗಳದಲ್ಲಿ ಐದಾರು ಮಂದಿ ನಿಂತಿದ್ದರು. ಪದ್ಮನಾಭನ್, ಅಚ್ಯುತನ್, ಜೋಸೆಫ್, ಶಂಕು ಇವರ ಪರಿಚಯ ಅವಳಿಗಿತ್ತು. ಅವರು ಅವಳ ಅಣ್ಣಂದಿರ ಜೊತೆಗೆ ಎರಡು ಮೂರು ಬಾರಿ ಅಲ್ಲಿಗೆ ಬಂದಿದ್ದರು. ಉಳಿದ ಇಬ್ಬರು ಅವಳಿಗೆ ಪರಿಚಯವಿಲ್ಲದವರು. ಮುಂದೆ ನಿಂತವನು ಹೆಚ್ಚು ಎತ್ತರವಿಲ್ಲದ, ಎಣ್ಣೆಗಪ್ಪಿನ, ಉರುಟುಮುಖದ, ಹೊಳೆಯುತ್ತಿರುವ ಸಣ್ಣ ಕಣ್ಣುಗಳಿರುವ ಒಬ್ಬ ಸಣ್ಣ ವ್ಯಕ್ತಿಯಾಗಿದ್ದ. ಬೇರೆಯವರೆಲ್ಲಾ ಅವನನ್ನು ಗೌರವಿಸುವ ರೀತಿಯಲ್ಲಿ ಸ್ವಲ್ಪ ದೂರ ನಿಂತಿದ್ದರು. ಆ ಸಣ್ಣ ವ್ಯಕ್ತಿ ಕೊಳಕಾದ ಪಂಚೆ ಮತ್ತು ಶರಟು ಧರಿಸಿದ್ದ. ಆದರೆ ಬೆಲೆಬಾಳುವ ರಿಸ್ಟ್ ವಾಚು ಕೈಗೆ ಕಟ್ಟಿಕೊಂಡಿದ್ದ; ಹೆಚ್ಚು ಬೆಲೆಯ ಒಂದು ಪೆನ್ನೂ ಅವನ ಕಿಸೆಯಲ್ಲಿ ಇತ್ತು. ಸೊಗಸಾದ ಒಂದು ಸಣ್ಣ ಲೆದರ್ ಪರ್ಸ್‌ನ್ನು ಕೈಯಲ್ಲಿ ಹಿಡಿದುಕೊಂಡಿದ್ದ.

ಅನ್ನೆಯನ್ನು ಕಂಡೊಡನೆ ಆದರದಿಂದ ಒಮ್ಮೆ ಮಂದಹಾಸ ಬೀರಿದ. ಪದ್ಮನಾಭನ್ ವಿನಯಪೂರ್ವಕ ಮುಂದೆ ಬಂದು ಅವಳನ್ನು ಪರಿಚಯ ಮಾಡಿಕೊಟ್ಟ:

"ಅಂತೋಣಿಯ ಸಹೋದರಿ."

ಆದರಪೂರ್ವಕವಾದ ಮಂದಹಾಸದಿಂದ ಆ ಸಣ್ಣ ಮನುಷ್ಯ ಅವಳನ್ನು ಕೇಳಿದ:

"ನಾನು ಯಾರು ಗೊತ್ತೊ?"

ಅವಳು ಸುಮ್ಮನೆ ನಿಂತಳು.

"ಇವರು ನಮ್ಮ......" ಪದ್ಮನಾಭನ್ ಪರಿಚಯ ಮಾಡಿ ಕೊಡಲು ಮುಂದಾದ.

"ಶೂ, ಶೂ. ಶೂ, ಶೂ......" ಆ ಸಣ್ಣ ಮನುಷ್ಯ ಅವನನ್ನು ಆಕ್ಷೇಪಿಸಿದ. ಆವನು ಅವಳಲ್ಲಿ ಹೇಳಿದ:

"ಅಂತೋಣಿ, ರೋಕ ಎಲ್ಲರೂ ಹಿಂದಿರುಗಿ ಬರುವರು. ಅದನ್ನು ತಿಳಿಸಲು ನಾನು ಬಂದದ್ದು."

"ಬರುತ್ತಾರಾ? ಯಾವಾಗ ಬರುವರು?" ಅವಳ ಹೃದಯ ಉದ್ವೇಗ ಗೊಂಡಿತು.

"ನಾಡಿದ್ದು ಬರುವರು. ಜೈಲು ವಿಮುಕ್ತರಿಗೆ ರಾಜೋಚಿತವಾದ ಸ್ವಾಗತ ಕೊಡಲು ನಿಶ್ಚಯಿಸಿದ್ದೇವೆ. ನೀನೂ ಬರಬೇಕು."

"ಎಲ್ಲಿಗೆ ಬರಬೇಕು?"

"ಅದನ್ನು ತಿಳಿಸುವೆ...... ಕ್ಷೇಮ ತಾನೆ?"

"ಹುಂ. ತಕ್ಕಮಟ್ಟಿಗೆ ಇದ್ದೇನೆ."

"ನಾನು ಹೋಗಲೆ?"

"ಹುಂ."

ಅವನು ಹಿಂತಿರುಗಿ ಹೋದ. ಉಳಿದವರೂ ಅವರನ್ನು ಅನುಸರಿಸಿದರು. ಜೋಸೆಫ್ ಮಾತ್ರ ಹೋಗಲಿಲ್ಲ. ಅವನು ಅನ್ನಯೊಡನೆ ಹೇಳಿದ:

"ಅವರು ಯಾರೆಂದು ಗೊತ್ತೋ?"

"ಯಾರು?"

"ನಮ್ಮ ಮುಂದಾಳು. ಮುಂದಾಳು ಎಂದರೆ, ಎಷ್ಟು ಒಳ್ಳೆಯ ಮನುಷ್ಯ ಗೊತ್ತೊ—ದೇವರಂತಹ ಮನುಷ್ಯ. ಒಳ್ಳೆಯ ವಿದ್ಯಾಭ್ಯಾಸವೂ ಅಪಾರ ಆಸ್ತಿಯೂ ಇರುವ ವ್ಯಕ್ತಿ. ಬಡವರನ್ನು ಉದ್ಧರಿಸಲು ಬಂದಿರುವನು." ವಿರಾಮವಿಲ್ಲದೆ ಉದ್ದಕ್ಕೆ ಅವನು ಹೇಳುತ್ತಾ ಹೋದ.

"ಅವನು ಇನ್ನು ಇಲ್ಲಿ ಬಂದರೆ ದೇವರನ್ನು ಗೌರವಿಸುವಂತೆ ಗೌರವಿಸಬೇಕು" ಅವನು ಅತಿ ವೇಗದಿಂದ ಹೋದ.

"ಬರುವರು. ನನ್ನ ಅಣ್ಣಂದಿರು ಬರುವರು" ಅವಳ ಹೃದಯ ಕುಣಿಯಿತು.

## ( ೧೫ )

ಅವನ ಹೆಸರು ನೀಲಕಂಠನ್. ಕಾರ್ಮಿಕರ ವರ್ಗದವರಿಗೆಲ್ಲಾ ಅವನು ನಿರ್ದೇಶಕ, ಹಾಗೂ ಮುಖಂಡ. ಆದುದರಿಂದ ಅವನನ್ನು ಕಾಮ್ರೇಡ್ ನೀಲಕಂಠನ್ ಎಂದು ಕರೆಯುತ್ತಿದ್ದರು. ಅವನು ಉತ್ತಮ ಕುಲೀನನೂ ವಿದ್ಯಾವಂತನೂ ಒಳ್ಳೆಯ ಹೆಸರುಳ್ಳವನೂ ಆಗಿದ್ದ.

ಅವನ ಸಾಂಪತ್ತಿಕ ಸ್ಥಿತಿಯು ತುಂಬಾ ಚೆನ್ನಾಗಿತ್ತು. ರಾಷ್ಟ್ರೀಯ ಹಾಗೂ ಸಾಂಸ್ಕಾರಿಕ ವಿಷಯಗಳಲ್ಲಿ ಒಳ್ಳೆಯ ಅನುಭವವಿತ್ತು. ಹಾಗೇ ತತ್ವಶಾಸ್ತ್ರ ಮತ್ತು ಚರಿತ್ರೆಗಳಲ್ಲಿ ಪಾಂಡಿತ್ಯವುಳ್ಳವನಾಗಿದ್ದ. ಆದರ್ಶ ಪ್ರೇಮ ಮತ್ತು ಸ್ವಾತಂತ್ರ್ಯಪ್ರಜ್ಞೆ ಇವುಗಳ ಬಗ್ಗೆ ಇಂಗದ ಅಭಿಲಾಷೆಯು ಅವನನ್ನು ಸಮರಾಂಗಣಕ್ಕೆ ನೂಕಿತ್ತು. ಸುಖಸಮೃದ್ಧವಾದ ಜೀವನವನ್ನೂ ಮೇಲ್ತರಗತಿಯ ಸರಕಾರಿ ಉದ್ಯೋಗಕ್ಕೆ ಪ್ರವೇಶಿಸಬಹುದಾದ ಸಾಧ್ಯತೆಗಳನ್ನೂ ಬದಿಗೊತ್ತಿ, ಅವನು ಸಾಮಾನ್ಯ ಜನರ ಸಮೀಪಕ್ಕೆ ಬಂದ. ಅವರ ಮುಂದಾಳುತನವನ್ನು ವಹಿಸಿದ. ರಾಷ್ಟ್ರೀಯವಾದ ದಾಸ್ಯವನ್ನು ಮಾತ್ರವಲ್ಲ, ಸಾಂಪತ್ತಿಕವೂ ಸಾಮೂಹಿಕವೂ ಸಾಂಸ್ಕಾರಿಕವೂ ಆದ ದಾಸ್ಯಗಳನ್ನು ಎದುರಿಸಿ ನಾಶಪಡಿಸುವೆನೆಂದು ಅವನು ಪ್ರತಿಜ್ಞೆ ಮಾಡಿದ್ದ.

ಅವನು ಜಮೀನ್ದಾರ ಕುಟುಂಬದಲ್ಲಿ ಹುಟ್ಟಿದ್ದ. ಸಾಂಪತ್ತಿಕ, ಸಾಮೂಹಿಕ, ಸಾಂಸ್ಕಾರಿಕವಾದ ಯಜಮಾನ್ಯವಿತ್ತು ಅವನ ಕುಟುಂಬಕ್ಕೆ. ವಿದೇಶಗಳಲ್ಲಿ ವಿಖ್ಯಾತವಾಗುವ ಉದ್ದೇಶದಿಂದ ಸ್ವಾತಂತ್ರ್ಯದಾಹ ಆ ಕುಟುಂಬಕ್ಕೆ ನೇರವಾಗಿ ಬಂದಿರಲಿಲ್ಲ. ಹಾಗಿದ್ದರೂ ದಾಸ್ಯಗಳನ್ನು ದೂರ ಮಾಡಲು, ಮೈಮುರಿದು ದುಡಿಯುವವರ ಮತ್ತು ಕೂಲಿ ಆಳುಗಳ ಕಷ್ಟಗಳನ್ನು ಕಡಿಮೆ ಮಾಡಲು, ಅವರ ಕಣ್ಣೀರನ್ನು ಒರಸಲು ಆಕಾಶದಾಚೆಯಿಂದ ಇಳಿದು ಬಂದ ದೇವದೂತನಂತೆ, ಅವನು ಸಾಮಾನ್ಯ ಜನರ ಮಧ್ಯೆ ಪ್ರವೇಶಿಸಿದ್ದ. ಎಲ್ಲರೂ ಅವನನ್ನು ಗೌರವಿಸಿದರು, ಆರಾಧಿಸಿದರು.

ಕಂದು ಬಣ್ಣದ, ಹೆಚ್ಚು ಎತ್ತರವಿಲ್ಲದ, ಉರುಟು ಮುಖದ ಮೇಲೆ ಹುಲಿಗಣ್ಣಿನಂತಹ ಕಣ್ಣುಗಳಿರುವ ವ್ಯಕ್ತಿತ್ವ ಅವನದು. ಗುಂಡಿಯಿಲ್ಲದ ಕೊಳಕಾದ ಶರಟು ಮತ್ತು ಕೊಳಕಾದ ಪಂಚೆಗಳನ್ನು ಅವನು ಧರಿಸಿದ್ದ. ಆದರೆ ಹೆಚ್ಚು ಬೆಲೆಬಾಳುವ ವಾಚೂ ಒಂದು ಪೆನ್ನೂ ಇತ್ತು ಅವನಲ್ಲಿ. ಕಾಲಿಗೆ ಶೂಸ್ ಹಾಕಿಕೊಂಡು, ಕೈಯಲ್ಲಿ ಸುಂದರವಾದ ಒಂದು ಲೆದರ್ ಬ್ಯಾಗ್ ಹಿಡಿದಿರುತ್ತಿದ್ದ. ದೂರಾಲೋಚನಾಪರವಾದ ನೆಟ್ಟ ದೃಷ್ಟಿಯ ನೋಟ ಅವನದು.

ಕಾಮ್ರೇಡ್ ನೀಲಕಂಠನ್! ಕೂಲಿಯಾಳುಗಳ ಮತ್ತು ಹೊರೆ ಹೊರುವ ಕೂಲಿಗಳ ಅಭೇದ್ಯ ಮುಂದಾಳಾಗಿ, ರಕ್ಷಕನಾಗಿ, ಮಾರ್ಗದರ್ಶಿಯಾಗಿ ಕಾರ್ಯವೆಸಗುತ್ತಿದ್ದ. ಸ್ನಾನ ಮಾಡದೆ, ಹಲ್ಲು ಉಜ್ಜದೆ, ತಲೆಕೂದಲು ಬಾಚದೆ, ಬೆವರಿಳಿಸಿಕೊಂಡು ತಿರುಗಾಡುತ್ತಿದ್ದ—ಏಕೆಂದರೆ ಅತಿ ಸಾಮಾನ್ಯ ಕೂಲಿಗಳಲ್ಲಿ ತಾನೂ ಒಬ್ಬನಂತೆ

ಕಾಣಲು! ಆದರೆ ಏನೋ ಒಂದು ರೀತಿಯ ಕೊರತೆ ಅವನಲ್ಲಿ ಎದ್ದುಕಾಣುತ್ತಿತ್ತು. ನೀರಿನ ಮೇಲೆ ಎಣ್ಣೆ ತೇಲುವಂತೆ!

ಕಾಮ್ರೇಡ್ ನೀಲಕಂಠನ್ ತೀರ್ಮಾನಿಸಿದ, ಜೈಲಿನಿಂದ ಬಿಡುಗಡೆಯಾಗುವ ಎಲ್ಲರಿಗೂ ರಾಜೋಚಿತವಾದ ಸ್ವಾಗತ ನೀಡಬೇಕೆಂದು. ಪದ್ಮನಾಭನ್, ಅಚ್ಯುತನ್, ಜೋಸೆಫರನ್ನೊಳಗೊಂಡ ಒಂದು ಗುಪ್ತಾಲೋಚನಾ ಸಭೆಯಲ್ಲಿ ಅವನು ಹೇಳಿದ, ವಿಪ್ಲವಕ್ಕೆ ರಕ್ತಸಾಕ್ಷಿಗಳು ಬೇಕೆಂದು. ರಕ್ತಸಾಕ್ಷಿಗಳನ್ನು ಗೌರವಿಸಿದರೆ ಮಾತ್ರ ಅಧಿಕ ಸಂಖ್ಯೆಯಲ್ಲಿ ರಕ್ತಸಾಕ್ಷಿಗಳಾದ ವೀರರು ದೊರಕುವರೆಂದು ಅವನು ತಿಳಿಸಿದ. ಅಂತೋಣಿ ಮತ್ತು ಇತರರು ಕಾರ್ಮಿಕವರ್ಗದ ಸಾಮಾನ್ಯ ಅಗತ್ಯಗಳಿಗಾಗಿ ಹೋರಾಟ ನಡೆಸಿದ್ದೆಂದೂ, ಅವರನ್ನು ಸನ್ಮಾನಿಸಿದರೆ ಕಾರ್ಮಿಕರು ಲೋಕದ ಜನತೆಯ ಅಗತ್ಯ ಗಳಿಗೆ ಮನ್ನಣೆ ಕೊಟ್ಟಂತಾಗುವುದೆಂದೂ ಅವನು ಮನದಟ್ಟು ಮಾಡಿದ. ಕಾರ್ಮಿಕರ ಸಂಘಟನಾಶಕ್ತಿಯನ್ನು ಪ್ರಕಟಿಸಲು ಈಗ ಸಂದರ್ಭ ಬಂದಿದೆ ಎಂದು ಅವನು ಹೇಳಿದ. ಆದುದರಿಂದಲೇ ಜೈಲು ವಿಮುಕ್ತರಿಗೆ ರಾಜೋಚಿತವಾದ ಸ್ವಾಗತ ನೀಡಲು ತೀರ್ಮಾನಿಸಿದ್ದು.

ಫ್ಯಾಕ್ಟರಿಗಳಲ್ಲೂ ಕೂಲಿಯಾಳುಗಳ ಮನೆಗಳಲ್ಲೂ ಗಂಭೀರವಾದ ಪ್ರಚಾರಗಳು ನಡೆದುವು. ಕೂಲಿವರ್ಗದಲ್ಲಿ ಹೆಂಗಸರು ಗಂಡಸರೆಂಬ ಭೇದವಿಲ್ಲದೆ ಆಬಾಲವೃದ್ಧರು ಜೈಲುವಿಮುಕ್ತರನ್ನು ಕಾಣಲು ಮತ್ತು ಅವರಿಗೆ ಸ್ವಾಗತ ನೀಡಲು ಉತ್ಸುಕರಾದರು. ಅನ್ನೆ ತನ್ನ ವಸ್ತ್ರಗಳನ್ನು ಒಗೆದುಹಾಕಿದಳು, ತನ್ನ ಅಣ್ಣಂದಿರನ್ನು ಕಾಣಲು ಹೋಗುವ ಸಲುವಾಗಿ. ಔಸೇಪ್ಪನೊಡನೆ ಕೇಳಿದಳು:

"ಅವರೆಲ್ಲಾ ಇಲ್ಲಿಗೆ ಬಂದ ನಂತರವಲ್ಲವೇ ಮೀಟಿಂಗಿಗೆ ಹೋಗೋದು?"

"ಅಲ್ಲವೆಂದು ತೋರುತ್ತದೆ. ಮೆರವಣಿಗೆ ಮತ್ತು ಸಭೆ ಮುಗಿಯದೆ ಇಲ್ಲಿಗೆ ಬರಲಾರರು."

"ಹಾಗಿದ್ದರೆ ನಾವು ಮೊದಲೇ ಹೋಗಿ ನಿಲ್ಲಬೇಕು, ಅವರನ್ನು ಕಾಣಲು?"

"ಹೂಂ. ನಾವು ಒಟ್ಟಿಗೆ ಅಲ್ಲಿಗೆ ಹೋಗುವ."

ಮಧ್ಯಾಹ್ನದ ಮೇಲೆ ಆ ತೆಳ್ಳಗಿನ ಮನುಷ್ಯ ಬಂದ. ಅವನು ಒಂದು ರೂಪಾಯಿಯನ್ನು ಅವಳ ಕೈಯಲ್ಲಿ ಕೊಟ್ಟ. ಅವಳು ಕೇಳಿದಳು:

"ಇದೇನು ಇದು ಹೀಗೆ?"

"ನಿನ್ನ ಅಣ್ಣಂದಿರು ಬರುವರಲ್ಲವೆ, ಅವರಿಗೂ ಆಹಾರ ಕೊಡಬೇಕಲ್ಲ?"

"ಹಾಗಿದ್ದರೆ ಔಸೇಪ್ಪಜ್ಜನ ಮಕ್ಕಳೂ ಬರುವರಲ್ಲ?"

"ಅಲ್ಲಿಯೂ ಕೊಟ್ಟಾಯಿತು."

"ಅವರು ಯಾವಾಗ ಬರೋದು?"

"ಸಂಜೆಯಾದೀತು."

"ನಾನು ಹೋಗಬೇಡವೆ?"

"ಹೋಗಬೇಕು" ಅವನು ಸ್ವಲ್ಪ ಸಮಯ ತಲೆಬಾಗಿ ನಿಂತು, ಫಕ್ಕನೆ ತಲೆಯೆತ್ತಿ ಹೇಳಿದ:

"ಹೊರಗೆ ಏನೇನೋ ಆಲೋಚನೆಗಳು ನಡೆಯುತ್ತಿವೆ."

ಅವಳು ಅತ್ಯಾತುರಳಾಗಿ ಕೇಳಿದಳು:

"ಯಾವ ವಿಷಯ ಆಲೋಚಿಸುತ್ತಿರುವುದು? ಯಾರು ಆಲೋಚಿಸುತ್ತಿರುವುದು? ಮತ್ತೆ ಹಿಡಿದುಕೊಂಡು ಹೋಗುವರೇ ನನ್ನ ಅಣ್ಣಂದಿರನ್ನು?" ಅವಳ ಧ್ವನಿ ತಡೆತಡೆದು ಹೊರಟಿತು.

"ಇಲ್ಲ. ಅದಲ್ಲ ನಾನು ಹೇಳಿದ್ದು" ಅವನು ಸ್ಪಷ್ಟವಾಗಿ ಹೇಳಿದ.

"ಮತ್ತೇನು?"

"ಏನೆಂದು ಇನ್ನೂ ಯಾವುದೂ ಸ್ಪಷ್ಟವಾಗಿಲ್ಲ. ಏನೇನೋ ಆಲೋಚನೆಗಳು ನಡೆಯುತ್ತಿವೆ, ಫ್ಯಾಕ್ಟರಿಯಲ್ಲೂ ಸಾಹೇಬನ ಮನೆಯಲ್ಲೂ."

"ನನ್ನ ಅಣ್ಣಂದಿರನ್ನು ಮತ್ತೆ ಹಿಡಿದುಕೊಂಡು ಹೋಗದಿದ್ದರೆ ಸಾಕು. ಮತ್ತೆ ಬರೋದೆಲ್ಲಾ ಬರಲಿ" ಅವಳು ಕಣ್ಣೀರು ಒರಸಿಕೊಂಡಳು. ಅವನು ಅದನ್ನು ನೋಡಿದ. ಅವನು ಕಣ್ಣರೆಪ್ಪೆ ಮುಚ್ಚದೆ ಅವಳನ್ನು ನೋಡುತ್ತಾ ನಿಂತ. ಫಕ್ಕನೆ ಅವಳು ತಲೆತಗ್ಗಿಸಿ ಮೆಲ್ಲಗೆ ಕೇಳಿದಳು:

"ಅಣ್ಣಂದಿರು ಬರುವಾಗ ಅಲ್ಲಿ ನೀವೂ ಇರುವಿರಾ?"

"ಹೂಂ" ಅವನು ತಲೆತಗ್ಗಿಸಿ ಮೌನವಾಗಿ ನಿಂತ. ಫಕ್ಕನೆ ಅವನು ಹಿಂತಿರುಗಿ ಹೋದ.

ಕಿರುದಾರಿ ತಿರುಗುವ ಸ್ಥಳ ತಲುಪಿದಾಗ, ತಿರುಗಿ ನೋಡಿದ. ಅವಳೂ ಅವನನ್ನೇ ನೋಡುತ್ತಾ ನಿಂತಿದ್ದಳು.

ಅನ್ನೆ ಅಕ್ಕಿ, ಮರಗೆಣಸು, ಮೀನು ಮತ್ತು ಇತರ ಸಾಮಾನುಗಳನ್ನು ತಂದಳು. ಅವಳು ಗಂಜಿ ತಯಾರಿಸಿದಳು; ಮರಗೆಣಸು ಬೇಯಿಸಿದಳು; ಮೀನಿನ ಪದಾರ್ಥ ಮಾಡಿದಳು. ಆದರೆ ತಾನು ಏನೂ ತಿನ್ನಲಿಲ್ಲ. ಅಂದು ತಾನು ತನ್ನ ಅಣ್ಣಂದಿರು ಊಟ ಮಾಡಿದ ನಂತರ ಉಳಿದುದನ್ನು ಮಾತ್ರ ತಿನ್ನಬೇಕೆಂದು ತೀರ್ಮಾನಿಸಿದ್ದಳು.

ಒಗೆದಿಟ್ಟ ಮುಂಡು ಮತ್ತು ರವಿಕೆಯನ್ನು ಅವಳು ಧರಿಸಿದಳು. ಅಣ್ಣಂದಿರನ್ನು ಕಾಣಲು, ಅವರ ಸ್ವಾಗತ ಸಭೆಯಲ್ಲಿ ಭಾಗವಹಿಸಲು, ಅವಳು ತಯಾರಾದಳು. ಕಿರುದಾರಿಯಲ್ಲಿ ನಿಂತು ಮುದುಕ ಔಸೇಪ್ಪ್ ಕೂಗಿ ಕೇಳಿದ:

"ಮಗಳು, ಬರುವುದಿಲ್ಲವೊ?"

"ಬರುತ್ತೇನೆ—ಬರುತ್ತೇನೆ ಅಜ್ಜ ನಿಂತುಕೊ."

ಅವಳು ಕಿರುದಾರಿಗಿಳಿದು ಅವನೊಂದಿಗೆ ನಡೆದಳು. ಸಂತೋಷಾಧಿಕ್ಯದಿಂದ ಅವರಿಬ್ಬರೂ ಅವಸರವಸರವಾಗಿ ನಡೆಯುತ್ತಿದ್ದರು—ಔಸೇಪ್ಪ್ ತನ್ನ ಮಕ್ಕಳನ್ನು ಕಾಣುವುದಕ್ಕೂ ಅನ್ನೆ ತನ್ನ ಅಣ್ಣಂದಿರನ್ನು ಕಾಣುವುದಕ್ಕೂ. ಕಿರುದಾರಿ ತಿರುಗುವ

ಸ್ಥಳ ಮುಟ್ಟಿದಾಗ, ಅಲ್ಲಿ ಪರೀದು ಸಾಹೇಬನ ಫ್ಯಾಕ್ಟರಿಯ ಮೇಸ್ತ್ರಿಯೂ ಚಹ ದಂಗಡಿಯ ಸಣ್ಣಿಯೂ ಬೇರೆ ಮೂರು ನಾಲ್ಕು ಜನರೂ ನಿಂತಿದ್ದರು. ಮೇಸ್ತ್ರಿ ನಗುತ್ತಾ ಕೇಳಿದ:

"ಎಲ್ಲಿಗೆ ಹೋಗೋದು, ಅಜ್ಜ ಮತ್ತು ಮಗಳು ಸೇರಿಕೊಂಡು?"

ಔಸೇಪ್ಪ್ ಉತ್ತರಿಸಿದ:

"ಅವರಿಂದು ಬರುವರು. ನಾವು ಅಲ್ಲಿಗೆ ಹೋಗುತ್ತೇವೆ. ಮೆರವಣಿಗೆ ಮತ್ತು ಸಭೆ ಇದೆ."

"ಅವಳೇನು ಮಾತಾಡದೆ ಹಾಗೇ ಹೋಗುತ್ತಿದ್ದಾಳೆ?"

"ನಾನೇನನ್ನು ಮಾತಾಡಬೇಕು ಮೇಸ್ತ್ರಿ?" ಅನ್ನೆ ಕೇಳಿದಳು.

"ಹುಂ. ಹೋಗು, ಹೋಗು!" ಅವನ ಮುಖದಲ್ಲಿ ಹುದುಗಿದ್ದ ರೋಷದ ಚಿಹ್ನೆಯು, ಸ್ಫುರಣಗೊಂಡು ಪ್ರತಿಫಲಿಸಿತು.

ಔಸೇಪ್ಪ್ ಮತ್ತು ಅನ್ನೆಯರು ಮುಂದುವರಿದರು. ಹಿಂದಿನಿಂದ ಫೊಳ್ ಎಂದು ನಕ್ಕ ಶಬ್ದ ಕೇಳಿ ಅವರು ತಿರುಗಿ ನೋಡಿದರು. ತಮ್ಮನ್ನು ನೋಡಿ ಏನೋ ಹೇಳಿ ಕೊಂಡು, ಮೇಸ್ತ್ರಿ ಮತ್ತು ಅವನ ಸಂಗಡಿಗರು ನಗುತ್ತಿದ್ದರು.

ಮೆರವಣಿಗೆಯ ಜಯಘೋಷ ಪ್ರಾರಂಭವಾಯಿತು. ಮಂತ್ರವಾಕ್ಯಗಳು ಮೊಳ ಗಿದುವು. ಔಸೇಪ್ಪ್ ಮತ್ತು ಅನ್ನೆಯರು ಅಲ್ಲಿಗೆ ಓಡಿದರು.

ಅದೋ ಅವರು ಬರುತ್ತಿದ್ದಾರೆ! ಸಾವಿರಗಟ್ಟಲೆ ಜನರು ಸೇರಿದ್ದ ಆ ಸಭೆಗೆ ಅವರನ್ನು ಸ್ವಾಗತಿಸಿದರು. ಔಸೇಪ್ಪ್ ಮತ್ತು ಅನ್ನೆಯರಿಗೆ ಒಂದು ನಿರಾಶೆ! ಮಕ್ಕ ಳನ್ನು ಆಲಿಂಗಿಸಿ ಕೂಗಲು ಔಸೇಪ್ಪನಿಗೆ ಸಾಧ್ಯವಾಗಲಿಲ್ಲ, ಅಣ್ಣಂದಿರ ಮುಂದೆ ಬಿಕ್ಕಿಬಿಕ್ಕಿ ಅಳಲು ಅವಳಿಗೆ ಸಾಧ್ಯವಾಗಲಿಲ್ಲ ಎಂದು. ಜನಸಮೂಹದ ನಡುವೆ ಅವರು ನುಗ್ಗಿ ದರು, ಮಕ್ಕಳನ್ನು ಕಾಣುವ ಆತುರದಿಂದ ಔಸೇಪ್ಪ್ ಮತ್ತು ಅಣ್ಣಂದಿರನ್ನು ಕಾಣುವ ತವಕದಿಂದ ಅನ್ನೆ. ಆಗ ಯಾರೋ ಹೇಳಿದರು:

"ಅಂತೋಣಿಯ ಸಹೋದರಿ."

ಎಲ್ಲರೂ ಅವರಿಗೆ ದಾರಿ ಬಿಟ್ಟುಕೊಟ್ಟರು. ಆ ಮೆರವಣಿಗೆಯಲ್ಲಿ ಕಾರ್ಮಿಕರ ಮುಂದಾಳುಗಳ ಹಿಂದೆ, ಸಮೀಪವೇ ನಿಂತುಕೊಳ್ಳುವ ಅವಕಾಶ ಅವರಿಗೆ ಸಿಕ್ಕಿತು. ಮೆರವಣಿಗೆ ಸಾಗಿತು. ಔಸೇಪ್ಪ್ ಅನ್ನೆಯ ಕಿವಿಯಲ್ಲಿ ಹೇಳಿದ:

"ಹೇಳದಿರು ಮಗಳೆ."

"ಏನನ್ನು?"

"ತಾಯಿಯ ಸಂಗತಿಯೊಂದನ್ನೂ ಈಗ ಹೇಳಬಾರದು."

ಅವಳು ತಲೆತಗ್ಗಿಸಿ ಮೌನವಾಗಿ ನಡೆದಳು.

ಅಂತೋಣಿ, ರೋಕಿ, ಮತ್ತಾಯಿ, ಕೊಚ್ಚೆಯ್ಯಪ್ಪನ್, ಶೌರಿಯರು ಮುಂದಿನಿಂದ ನಡೆಯುತ್ತಿದ್ದರು. ರಕ್ತಹಾರ!—ಕೆಂಪು ನೂಲಿನಿಂದ ತಯಾರಿಸಿದ ಹಾರ ಒಂದೊಂದೇ

ಅವರ ಕುತ್ತಿಗೆಗಳಿಗೆ ಬಿದ್ದುವು. ಕಾಮ್ರೇಡ್ ನೀಲಕಂಠನ್ ಅವರ ಮಧ್ಯದಲ್ಲಿದ್ದ. ಅವನ ಕೊರಳು ತುಂಬಾ ರಕ್ತಹಾರಗಳು. ಕೈ ಮುಷ್ಠಿ ಹಿಡಿದು ಮೇಲಕ್ಕೆತ್ತಿ ಅವನು ಕೂಗಿ ಹೇಳಿದ:

"ಇನ್‌ಕಿಲಾಬ್ ಜಿಂದಾಬಾದ್."

ಪದ್ಮನಾಭನ್, ಅಚ್ಯುತನ್. ಜೋಸೆಫ್, ಶಂಕುರವರು ಆ ಮಂತ್ರವಾಕ್ಯವನ್ನು ಪುನರ್‌ಘೋಷಿಸಿದರು. ಬೇರಾರೂ ಅದನ್ನು ಹೇಳಲಿಲ್ಲ. ಅವರ್‍ಯಾರಿಗೂ ಅದು ಅರ್ಥವಾಗಲಿಲ್ಲ.

"ಅದೇನು ಹಾಗೆಂದರೆ?" ಒಬ್ಬ ಕೂಲಿಯವನು ಹತ್ತಿರದವನೊಡನೆ ಕೇಳಿದ.

"ಯಾವುದು?"

"ಇನ್‌ಕಿಲಾಬ್ ಎಂದರೇನು?"

"ಅದು ಏನೇ ಆಗಿರಲಿ, ಆದರೆ ಅದೊಂದು ಮಹತ್ವಪೂರ್ಣ ಘೋಷಣೆ."

"ಪ್ರಭು ಸಾಮ್ರಾಜ್ಯಶಕ್ತಿಗಳು ನಾಶವಾಗಲಿ!" ಕಾಮ್ರೇಡ್ ನೀಲಕಂಠನ್ ಕೂಗಿದ.

ಪದ್ಮನಾಭನ್ ಮತ್ತು ಅವನ ಸಂಗಡಿಗರಷ್ಟೆ ಅದನ್ನು ಅನುಕರಿಸಿದರು. ಅವನು ಅಸಮಾಧಾನದಿಂದ ತಿರುಗಿ ನೋಡಿದ. ಪದ್ಮನಾಭನ್ ಅವನ ಕಿವಿಯಲ್ಲಿ ಹೇಳಿದ:

"ಅರ್ಥವಾಗದ್ದರಿಂದ ಅವರು ಕೂಗುತ್ತಿಲ್ಲ!"

"ಸರ್ವ ರಾಜ್ಯದ ಕಾರ್ಮಿಕರೇ ಒಂದಾಗಿರಿ!" ಕಾಮ್ರೇಡ್ ನೀಲಕಂಠನ್ ಮುಷ್ಠಿ ಹಿಡಿದು ಮೇಲಕ್ಕೆತ್ತಿ ಅತ್ಯುಚ್ಚ ಸ್ವರದಲ್ಲಿ ಕೂಗಿದ. ಸಹಸ್ರ ಕಂಠಗಳಿಂದ ಆ ಧ್ವನಿ ಮೊಳಗಿತು.

"ಪ್ರಭುತ್ವ ನಾಶವಾಗಲಿ!"

ಅದನ್ನೂ ಎಲ್ಲರೂ ಕೂಗಿದರು.

"ವಿಪ್ಲವಕ್ಕೆ ಜಯವಾಗಲಿ."

ಅದನ್ನೂ ಎಲ್ಲರೂ ಕೂಗಿದರು.

ಪಟ್ಟಣವು ಆ ಧ್ವನಿಯಿಂದ ಕಂಪಿಸಿತು. ರಸ್ತೆಗಳ ಪಕ್ಕಗಳಲ್ಲಿ ನಿಂತುಕೊಂಡಿದ್ದವರ ಮುಖಗಳಲ್ಲಿ ಏನೋ ಒಂದು ಭಯ ಮೂಡಿತು. ಒಬ್ಬ ಕೇಳಿದ:

"ಏನದು ವಿಪ್ಲವವೆಂದರೆ?"

ಹತ್ತಿರದಲ್ಲಿದ್ದ ಒಬ್ಬ ವಿದ್ಯಾವಂತ ಉತ್ತರಿಸಿದ:

"ಮಾಲಿಕರನ್ನೂ, ಪೋಲೀಸರನ್ನೂ, ಅಧಿಕಾರಿಗಳನ್ನೂ ಕೊಲ್ಲಬೇಕೆಂದು ಹೇಳುವುದು."

ಇಬ್ಬರೂ ಹಾಸ್ಯಭರಿತವಾಗಿ ನಕ್ಕರು.

ಸಮುದ್ರವೇ ಹರಿದುಬರುವಂತೆ ಆ ಕಾರ್ಮಿಕ ಶಕ್ತಿಯ ಪ್ರವಾಹವು ಮೈದಾನವನ್ನು ಹೋಗಿ ಮುಟ್ಟಿತು.

ಮೊದಲೇ ತಯಾರಿಸಿದ್ದ ವೇದಿಕೆಯಲ್ಲಿ ಕಾಮ್ರೇಡ್ ನೀಲಕಂಠನ್ ಮತ್ತು ಜೈಲು ವಿಮುಕ್ತರು ಉಪಸ್ಥಿತರಾದರು. ಅನ್ನೆ ಮತ್ತು ಔಸೇಪ್ಪರು ವೇದಿಕೆಯ ಸಮೀಪವೇ ಕುಳಿತರು. ಸಹಸ್ರಾರು ಕಣ್ಣುಗಳು ಒಬ್ಬ ಮಹಾ ವ್ಯಕ್ತಿಯ ಕಡೆಗೆ ಕೇಂದ್ರೀಕರಿಸಲ್ಪಟ್ಟವು—ಕಾಮ್ರೇಡ್ ನೀಲಕಂಠನೆಡೆಗೆ. ಸಭೆಯಿಂದ ಗೌರವಪೂರ್ವಕವಾದ ಪಿಸುಮಾತುಗಳು ಹೊರಟವು:

"ಬಹುದೊಡ್ಡ ವಿದ್ಯಾವಂತ ಆ ಮನುಷ್ಯ !"

"ಆನೆಯಿದೆ ಅವರ ಮನೆಯಲ್ಲಿ !"

"ದಿವಾನನಾಗಲಿರುವ ವಿದ್ಯೆಯಿದ್ದರೂ ಬಡವರನ್ನು ಉದ್ಧರಿಸಲು ಹೊರಟಿರುವ ಗಣ್ಯವ್ಯಕ್ತಿ."

ಕಾಮ್ರೇಡ್ ನೀಲಕಂಠನ್ ಅಭಿಮಾನಪೂರ್ವಕವಾಗಿ ಒಮ್ಮೆ ಸುತ್ತಲೂ ನೋಡಿದ. ಕರುಣಾಮಯ ಮಂದಹಾಸ ಬೀರಿದ. ಅವನು ಹಿಂದಕ್ಕೆ ತಿರುಗಿ ಏನೋ ಮೆಲ್ಲಗೆ ಹೇಳಿದ. ಪದ್ಮನಾಭನ್ ವೇದಿಕೆಯನ್ನೇರಿ ಮುಂದೆ ಬಂದು ನಿಂತ. ಆ ಮಾನವ ಮಹಾಸಾಗರದೆಡೆಗೆ ಅವನೊಮ್ಮೆ ಕಣ್ಣಾಡಿಸಿದ. ಅವನ ಶರೀರ ನಡುಗಿತು. ಅವನು ಮಾತನಾಡಲು ಯತ್ನಿಸಿದ, ಆದರೆ ಮಾತುಗಳು ಹೊರಡಲಿಲ್ಲ. ಬಾಯಿ ಒಣಗಿತು, ಕಂಠ ಬಿಗಿಯಿತು.

ಕಾಮ್ರೇಡ್ ನೀಲಕಂಠನ್ ಕೊರಳಲ್ಲಿ ತುಂಬಿದ್ದ ಕೆಂಪು ಹಾರಗಳನ್ನು ತೆಗೆದು ಒಂದೆಡೆಯಿಟ್ಟು, ಗಂಭೀರವಾಗಿ ಎದ್ದ. ಅವನು ಪದ್ಮನಾಭನನ್ನು ಹಿಂದಕ್ಕೆ ಕಳುಹಿಸಿ ಮುಂದೆ ನಿಂತ.

"ಬಂಧುಗಳೇ !......" ಅವನು ಭಾಷಣಕ್ಕೆ ಪ್ರಾರಂಭಿಸಿದ. ಸಭೆಯ ಒಂದು ಪಕ್ಕದಿಂದ ಒಂದು ಚಲನೆ! ಉಸಿರುಕಟ್ಟಿಕೊಂಡು ಯಾರೋ ಗಟ್ಟಿಯಾಗಿ ಕೂಗಿ ಹೇಳಿದರು:

"ಅಂತೋಣಿಯ ಮತ್ತು ಮತ್ತಾಯಿಯ......" ಮಾತುಗಳು ಸಂಪೂರ್ಣ ಹೊರಡಲಿಲ್ಲ. ಮತ್ತೊಬ್ಬ ಕೂಗಿ ಹೇಳಿದ:

"ಮನೆಗೆ ಬೆಂಕಿ ಇಟ್ಟರು. ಮೇಸ್ತ್ರಿ ಬೆಂಕಿಯಿಟ್ಟದ್ದು."

"ಅಯ್ಯೋ !" ಅನ್ನೆ ಕೂಗಿದಳು. ಅವಳು ಮೈಮರೆತು ಅಂತೋಣಿಯ ಕೈಗಳ ಮೇಲೆ ಬಿದ್ದಳು.

ಮತ್ತಾಯಿ, ಸೈಮನರು ವೃದ್ಧ ಔಸೇಪ್ಪನನ್ನು ಆಧರಿಸಿ ಹಿಡಿದುಕೊಂಡರು.

ಆ ಮಾನವ ಮಹಾಸಮುದ್ರವು ಅಲೆಯೆದ್ದು ಕದಡಿತು.

"ಏಳದಿರಿ, ಯಾರೂ ಕುಳಿತಲ್ಲಿಂದ ಅಲುಗಾಡಬಾರದು." ಕಾಮ್ರೇಡ್ ನೀಲಕಂಠನ ಧ್ವನಿಯು ಸಿಡಿಲಿನಂತೆ ಮೊಳಗಿತು. ಯಾರೂ ಅಲುಗಾಡಲಿಲ್ಲ.

"ರೋಕಿಯೆಲ್ಲಿ?" ಅಂತೋಣಿ ಕೇಳಿದ. ಅವನು ಅಲ್ಲೆಲ್ಲೂ ಕಾಣಲಿಲ್ಲ.

( ೧೬ )

ಅಂತೋಣಿ ಮತ್ತು ಮತ್ತಾಯಿಯರ ಮನೆಗಳಿಗೆ ಬೆಂಕಿ ಹಚ್ಚಿದ್ದು ಮೇಸ್ತ್ರಿ ಮತ್ತು ಅವನ ಸಂಗಡಿಗರು. ಕಿರಿಯ ಮಾಲಕನ ಆಜ್ಞೆಯಂತೆ ಬೆಂಕಿ ಹಚ್ಚಲಾಗಿತ್ತು.

ಫ್ಯಾಕ್ಟರಿಗಳಲ್ಲಿ ಕ್ರಾಂತಿಯೆಬ್ಬಿಸುವುದು, ಕ್ರಾಂತಿಕಾರರನ್ನು ದೊಡ್ಡ ಮೆರವಣಿಗೆಯಲ್ಲಿ ಕರತಂದು ಸ್ವಾಗತ ಸಮ್ಮೇಳನಗಳನ್ನು ಏರ್ಪಡಿಸುವುದು—ಅವೆಲ್ಲಾ ಮಾಲಿಕರಿಗೆ ಸಹಿಸಲು ಸಾಧ್ಯವಾದೀತೆ? ಕಿರಿಯ ಯಜಮಾನ ತೀರ್ಮಾನಿಸಿದ, ಆ ಮಹಾ ಸಭೆ ಮುಗಿದು ಹಿಂದಿರುಗಿದ ನಂತರ ಅವರಿಗೆ ಇರಲು ಮನೆಯಿರಬಾರದೆಂದು. ಅದಕ್ಕಾಗಿಯೇ ಸಭೆ ನಡೆಯುತ್ತಿದ್ದಂತೆ ಆ ಮನೆಗಳನ್ನು ಸುಟ್ಟು ಭಸ್ಮಗೊಳಿಸಬೇಕೆಂದು ಆಜ್ಞಾಪಿಸಲಾಗಿತ್ತು.

ವರೀದು ಸಾಹೇಬನಿಗೆ ಇದು ಗೊತ್ತಾಯಿತು. ಅವನು ಮಗನೊಡನೆ ಹೇಳಿದ ಹಾಗೆ ಮಾಡಬಾರದೆಂದು. ಅವನು ಮತ್ತು ಔಸೇಪ್ಪ್ ಇಬ್ಬರೂ ಸೇರಿ ಆ ಫ್ಯಾಕ್ಟರಿ ಪ್ರಾರಂಭಿಸಿದ್ದರು—ಅವನ ಹಣವೂ ಔಸೇಪ್ಪನ ಶ್ರಮವೂ ಒಟ್ಟಾಗಿತ್ತು. ಕೊನೆಗೆ ವರೀದು ಮಾಲಿಕನಾದ, ಔಸೇಪ್ಪನು ಅವನ ಭೂಮಿಯಲ್ಲಿ ಕೂಲಿ ಒಕ್ಕಲಾದ. ಇವೆಲ್ಲಾ ಸಾಹೇಬನಿಗೆ ಚೆನ್ನಾಗಿ ನೆನಪಿದೆ. ಇದು ಅವನ ಮನಃಸಾಕ್ಷಿಯನ್ನು ಕೆದಕಿತು. ಅವನು ಮಗನೊಡನೆ ಹೇಳಿದ:

"ಹಾಗೆ ಮಾಡೋದು ದೇವರು ಮೆಚ್ಚದ ಕೆಲಸ. ಮೊದಲಿಂದಲೂ ನಮ್ಮ ಕೆಲಸದವನಾಗಿದ್ದಾನೆ ಆ ಮುದುಕ. ಅಲ್ಲದೆ ನಮ್ಮ ಒಕ್ಕಲೂ ಆಗಿದ್ದಾನೆ. ಅವನು ಆ ಮನೆಯಲ್ಲಿಯೇ ಸಾಯುವ ತನಕ ಇರಲಿ."

"ಅಪ್ಪನು ನನ್ನಲ್ಲಿ ಹೇಳುವಂತೆ, ಅವನು ಅವನ ಮಕ್ಕಳಲ್ಲಿ ಹೇಳಿದ್ದನೇನು? ಫ್ಯಾಕ್ಟರಿಯಲ್ಲಿ ಗಲಾಟೆ ಮಾಡಬಾರದೆಂದು ತಿಳಿಸಿದ್ದನೇನು? ನಮ್ಮ ಅನ್ನ ತಿಂದು, ನಮ್ಮ ಭೂಮಿಯ ನೀರು ಕುಡಿದು, ನಾವು ಕಟ್ಟಿಸಿಕೊಟ್ಟ ಮನೆಯಲ್ಲಿ ವಾಸಿಸುತ್ತಿರುವುದೆಂದು ಅವನು ತನ್ನ ಮಕ್ಕಳಿಗೆ ಹೇಳಿದ್ದನೇನು?"

"ಮಕ್ಕಳು ಹದ್ದು ಮೀರಿ ಹೋದರೆ ಪಾಪ! ಮುದುಕನೇನು ಮಾಡಿಯಾನು? ಏನು ಶಿಕ್ಷೆ ಕೊಟ್ಟಾನು?"

"ಅವರು ಹದ್ದುಮೀರಿ ಹೋದದ್ದನ್ನು ಹೇಗೆ ಸರಿಪಡಿಸಬೇಕೆಂಬುದು ನನಗೆ ಗೊತ್ತು."

"ಏನಿದ್ದರೂ ದೇವರೆದುರಲ್ಲಿ ತಪ್ಪು ಮಾಡಬಾರದು ಮಗೂ."

"ನಮಗೆ ದ್ರೋಹವೆಸಗುವವರು ನಮ್ಮ ಜಾಗದಲ್ಲಿ ಇರುವುದು ತಪ್ಪು."

ಮಗನೊಡನೆ ವಾದ ಬೆಳೆಸಲು ಅವನಿಗೆ ಶಕ್ತಿ ಇರಲಿಲ್ಲ. ಆದರೆ ಅವನ ಮನಃಸಾಕ್ಷಿ ಮಾತ್ರ ಅವನನ್ನು ಪೀಡಿಸುತ್ತಿತ್ತು.

ಆ ತೆಳ್ಳಗಿನ ಮನುಷ್ಯನಿಗೆ ಸಂಶಯವಿತ್ತು ಏನಾದರೊಂದು ಸಂಭವಿಸುತ್ತದೆಂದು.

ಸಣ್ಣಿಯ ಚಹದಂಗಡಿಯಲ್ಲಿ ಏನೇನೋ ಗೂಢಾಲೋಚನೆಗಳು ನಡೆಯುತ್ತಿವೆಯೆಂದು ಅವನು ಕುಟ್ಟಿಪ್ಪನ ಚಹದಂಗಡಿಯಲ್ಲಿ ಕುಳಿತು ಅರ್ಥಮಾಡಿಕೊಂಡಿದ್ದ. ಮೆರವಣಿಗೆಯಲ್ಲೂ ಸಭೆಯಲ್ಲೂ ಭಾಗಿಗಳಾಗಲು ಕೂಲಿಯಾಳುಗಳೆಲ್ಲಾ ಹೋದರೂ ಅವನು ಹೋಗದೆ ಅಂತೋಣಿಯ ಮನೆಯ ಪರಿಸರದಲ್ಲೇ ಆಚೀಚೆ ಅಡ್ಡಾಡುತ್ತಿದ್ದ.

ಸಂಜೆಯಾದೊಡನೆ ಮೋಸ್ತಿ ಮತ್ತು ಅವನ ಸಂಗಡಿಗರು ಎರಡು ಗುಂಪುಗಳಾಗಿ ಹೊರಟು, ಅಂತೋಣಿ ಮತ್ತು ಮತ್ತಾಯಿಯರ ಮನೆಗಳಿಗೆ ಹೋದರು. ಅಂತೋಣಿಯ ಮನೆಯೊಳಗೆ ಹೋದ ಮೋಸ್ತಿಯ ಹಿಂದಿನಿಂದಲೇ ಆ ತೆಳ್ಳಗಿನ ಮನುಷ್ಯನೂ ಹೋದ. ಮೋಸ್ತಿ ಬೆಂಕಿಕಡ್ಡಿ ಹಚ್ಚಿ ಮನೆಗೆ ಬೆಂಕಿ ಇಟ್ಟ. ಅವನು ಓಡಿಹೋಗಿ ಬೆಂಕಿಯನ್ನು ನಂದಿಸಿದ.

ಹಿಂದಿನಿಂದ ಕೆನ್ನೆಗೆ ಒಂದೇಟು! ಅವನು ನೆಲಕ್ಕುರುಳಿದ. ನೆಲಕ್ಕೆ ಬಿದ್ದೊಡನೆ ಪೆಟ್ಟು ಮತ್ತು ಒದೆತಗಳು ಬಿದ್ದುವು.

"ಅವನನ್ನು ಹಿಡಿದುಕೊಂಡು ಹೋಗಿ ಆ ತೆಂಗಿನ ಮರಕ್ಕೆ ಬಿಗಿಯಿರಿ" ಮೋಸ್ತಿ ಆಜ್ಞಾಪಿಸಿದ.

ಪ್ರಜ್ಞಾಹೀನನಾದ ಅವನನ್ನು ಎಳೆದುಕೊಂಡು ಹೋಗಿ ತೆಂಗಿನ ಮರಕ್ಕೆ ಬಿಗಿದರು.

ಪಕ್ಕದ ಮನೆಗಳಲ್ಲಿ ಸ್ತ್ರೀಯರು ಮಾತ್ರ ಇದ್ದರು. ಹೊರಗೆ ಬರಲು ಯಾರಿಗೂ ಧೈರ್ಯ ಬರಲಿಲ್ಲ. ಏನಿಲ್ಲೆಂದರೆ ಕೂಗುವುದಕ್ಕೂ ಅವರಿಗೆ ಸಾಧ್ಯವಾಗಲಿಲ್ಲ. ವೇಲಾಯುಧನ ತಾಯಿಯು ಯಾರಿಗೂ ಕಾಣದಂತೆ ಬಗ್ಗಿಕೊಂಡು ಕಿರುದಾರಿಯಲ್ಲಿ ಓಡಿದಳು. ಅವಳು ಓಡಿಹೋಗಿ ಬೆಂಕಿ ಹಚ್ಚಿದ ವಿಷಯವನ್ನು ಸಭೆಗೆ ಮುಟ್ಟಿಸಿದಳು.

ಸಭೆ ನಡೆಯುತ್ತಿರುವಾಗ, ಮನೆಗೆ ಬೆಂಕಿ ಉರಿಯಲಿ, ಭೂಕಂಪವೇ ಆಗಲಿ, ಕೂಲಿಯಾಳುಗಳು ಗಾಬರಿಗೊಳ್ಳದೆ ಸಭೆಯಲ್ಲಿ ಶಿಸ್ತಿನಿಂದ ಇರಬೇಕೆಂದು ಕಾಮ್ರೇಡ್ ನೀಲಕಂಠನ್ ಉಪದೇಶಿಸಿದ. ಈ ರೀತಿಯಲ್ಲಿ ಅವನು ಒಂದು ಅಚ್ಚುಕಟ್ಟುತನದ ಸತ್ವಪರೀಕ್ಷೆ ನಡೆಸಿದ. ಅವರೆಲ್ಲರೂ ತಮ್ಮ ರಕ್ಷಕನಾದ ಮುಂದಾಳುವನ್ನು ಅನುಸರಿಸಿದರು.

ರೋಕಿ ವೇದಿಕೆಯಿಂದ ಮಿಂಚಿನ ವೇಗದಲ್ಲಿ ಓಡಿ ಅಗೋಚರನಾದ. ಅನ್ನೆಯ ಕೈಹಿಡಿದುಕೊಂಡು ಅಂತೋಣಿಯೂ ಔಸೇಪ್ಪನನ್ನು ಆಧರಿಸಿ ಅವನ ಮಕ್ಕಳೂ ಅಲ್ಲಿಂದ ಹೊರಟರು. ಕಾಮ್ರೇಡ್ ನೀಲಕಂಠನ ಧ್ವನಿ ಸಿಡಿಲಿನ ಘರ್ಜನೆಯಂತೆ ಮೊಳಗಿತು:

"ಲೋಕದ ಭರಣಚಕ್ರವನ್ನು ತಿರುಗಿಸಬೇಕಾದವರು ಕೂಲಿಕಾರರು. ಏಕೆಂದರೆ ಲೋಕದ ಸಂಪತ್ತು ಮತ್ತು ಸಂಸ್ಕಾರಗಳ ಸೃಷ್ಟಿಕರ್ತರು ಕೂಲಿಕಾರರು."

ಅನ್ನೆ, ಅಂತೋಣಿಯ ಹಿಡಿತದಿಂದ ಬಿಡಿಸಿಕೊಂಡು ಸ್ವತಃ ನಡೆದಳು. ಅವಳು ಹೇಳಿದಳು:

"ದೊಡ್ಡಣ್ಣ, ನಾವು ಹೋಗುವ."

"ಎಲ್ಲಿಗೆ?"

"ತಾಯಿ ತಂದೆಯರು ಹೋದಲ್ಲಿಗೆ."

"ತಾಯಿಯೆಲ್ಲಿ ಹೋದಳು?"

ಫಕ್ಕನೆ ಅವಳಿಗೆ ಜ್ಞಾಪಕವಾಯಿತು. ಅವಳು ಬಿಕ್ಕಿಬಿಕ್ಕಿ ಅಳುತ್ತ ಹೇಳಿದಳು:

"ತಾಯಿಯೆ?...... ತಾಯಿ...... ತಾಯಿ ಅಲ್ಲಿದ್ದಾಳೆ."

"ತಾಯಿ ಅಲ್ಲಿದ್ದಾಳೆಯೆ?...... ಇದ್ದಾಳೆಯೆ?...... ಇದ್ದಾಳೊ?" ಅವನು ಓಡಿದ. ಅನ್ನೆ ಹಿಂದಿನಿಂದ ಓಡಿದಳು.

ಬೇಟೆಯಾಡಿ, ಕೊಳ್ಳೆಯನ್ನು ತಿಂದು, ಸದ್ದಿಲ್ಲದೆ ಮಲಗಿ ನಿದ್ರಿಸುವ ಸಿಂಹದಂತೆ, ಬೆಂಕಿ ನಿದ್ರಿಸುತ್ತಿತ್ತು. ಕಿರುದಾರಿಗಳಲ್ಲಿ ನೆರೆಹೊರೆಯ ಹೆಂಗಳೆಯರೆಲ್ಲಾ ಬಂದು ನಿಂತಿದ್ದರು. ನಿದ್ರಿಸುತ್ತಿರುವ ಬೆಂಕಿಯ ಮಂದಪ್ರಕಾಶದಲ್ಲಿ, ತೆಂಗಿನ ಮರಕ್ಕೆ ಬಂಧಿಸಲ್ಪಟ್ಟಿದ್ದ ಆ ತೆಳ್ಳಗಿನ ಮನುಷ್ಯನು ಆಗಾಗ ನರಳುತ್ತಾ ಹೊರಳಾಡುತ್ತಿದ್ದ.

"ಅಮ್ಮಾ!...... ನನ್ನ ಅಮ್ಮಾ!" ಎಂದು ಕೂಗಿಕೊಂಡು ಉರಿದು ಭಸ್ಮವಾದ ಮನೆಗೆ ಅಂತೋಣಿ ಓಡಿದ.

"ದೊಡ್ಡಣ್ಣಾ!...... ನನ್ನ ದೊಡ್ಡಣ್ಣಾ!" ಹಿಂದಿನಿಂದ ಓಡಿ ಅಲ್ಲಿಗೆ ತಲುಪಿದ ಅನ್ನೆ ಅವನನ್ನು ಗಟ್ಟಿಯಾಗಿ ಹಿಡಿದುಕೊಂಡಳು.

ಕಿರುದಾರಿಗಳಲ್ಲಿ ನಿಂತಿದ್ದ ಸ್ತ್ರೀಯರು ಬಿಕ್ಕಿಬಿಕ್ಕಿ ಅತ್ತರು.

"ಎಲ್ಲಿ? ನನ್ನ ಅಮ್ಮ ಎಲ್ಲಿ?" ಅಂತೋಣಿ ಕೇಳಿದ.

"ತಾಯಿ...... ತಾಯಿ ತೀರಿಹೋದಳು, ದೊಡ್ಡಣ್ಣಾ...... ಅಪ್ಪನಿಗೆ ಗಂಜಿ ಮಾಡಿಕೊಡಲು ಹೊರಟುಹೋದಳು."

ಅವನು ಮೂರ್ಛೆಹೋದ. ಅವಳು ಅಣ್ಣನನ್ನು ಆಧರಿಸಿ ಹಿಡಿದು ಮಲಗಿಸಿದಳು.

"ಅನ್ನೇ......!" ಒಂದು ನರಳಾಟ.

ಅವಳು ಸುತ್ತಲೂ ತಿರುಗಿ ನೋಡಿದಳು.

"ಯಾರದು?...... ಯಾರು?"

"ಅನ್ನೇ......!" ಅದೇ ಧ್ವನಿ ಮತ್ತೂ ಕೇಳಿಸಿತು.

ಅವಳು ಎದ್ದಳು. ಆ ನರಳುವಿಕೆ ಕೇಳಿದೆಡೆಗೆ ಹೋದಳು.

"ಅಯ್ಯೋ! ಇದೇನಿದು?...... ದೇವರೇ!" ಅವಳು ಮೂರ್ಛೆಹೋದಳು.

"ದಾರಿ ಬಿಡಿ, ದಾರಿ ಬಿಡಿ" ಕಿರುದಾರಿಯಿಂದ ಮಾತುಗಳು ಕೇಳಿದುವು.

"ಹಿರಿಯ ಮಾಲಿಕರು ಬರುತ್ತಿದ್ದಾರೆ—ಹಿರಿಯ ಮಾಲಿಕರು."

ವೃದ್ಧನಾದ ಪರೀದು ಸಾಹೇಬ ಊರುಗೋಲನ್ನು ಊರಿಕೊಂಡು ಮೆಲ್ಲಮೆಲ್ಲನೆ ಬರುತ್ತಿದ್ದ. ಎಲ್ಲರೂ ದಾರಿ ತೊರೆದು ನಿಂತರು. ಯಾರೂ ಏನನ್ನೂ ಮಾತನಾಡಲಿಲ್ಲ. ಅಂತೋಣಿಯ ಹತ್ತಿರ ಬಂದು, ಅವನು ಒಂದು ಸಿಂಹಾವಲೋಕನದ ನೋಟ ಬೀರಿದ.

"ದೇವರೇ !" ಅವನು ಮೇಲೆ ನೋಡಿ ಕಣ್ಣೀರು ಒರಸಿಕೊಂಡ.

ವೇಲಾಯುಧನ ತಾಯಿ ಅಂತೋಣಿಯ ಮುಖಕ್ಕೆ ನೀರು ಚಿಮುಕಿಸಿದಳು. ಅವನು ಕಣ್ಣು ತೆರೆದ.

"ಯಾರದು?...... ಮಾಲಿಕರೊ?" ಅವನು ಮೆಲುದನಿಯಲ್ಲಿ ಕೇಳಿದ. ಅವನು ಎದ್ದು ಕುಳಿತ. ವೇಲಾಯುಧನ ತಾಯಿಯೊಡನೆ ಕೇಳಿದ:

"ನನ್ನ ತಾಯಿಯೆಲ್ಲಿ?"

ಅವಳು ಮುಖ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅತ್ತಳು.

ಅಂತೋಣಿ ಎದ್ದು ಅನ್ನೆಯ ಹತ್ತಿರ ಹೋದ. ವೇಲಾಯುಧನ ತಾಯಿ ಅನ್ನೆಯ ಮುಖಕ್ಕೆ ನೀರು ಚಿಮುಕಿಸಿದಳು. ಅವಳು ಕಣ್ಣು ತೆರೆದಳು.

ಆ ತೆಳ್ಳಗಿನ ಮನುಷ್ಯ ಆಗಲೂ ನರಳುತ್ತಿದ್ದ. ಅಂತೋಣಿ ಅವನ ಕಟ್ಟುಗಳನ್ನು ಬಿಚ್ಚಿದ. ಅವನನ್ನು ಹಿಡಿದು ಮಲಗಿಸಿದರು. ಅನ್ನೆ ಅವನ ಹತ್ತಿರ ಕುಳಿತು ಬಾಯಿಗೆ ನೀರೆರೆದಳು. ಅವನು ಗುಟುಕುಗುಟುಕಾಗಿ ಕುಡಿದ. ಅವನ ಪೆಟ್ಟು ಬಿದ್ದ ಕೆನ್ನೆಯನ್ನು ಅವಳು ಮೃದುವಾಗಿ ಸವರಿದಳು. ಅಂತೋಣಿ ಅವಳ ತಲೆಯ ಮೇಲೆ ಕೈಯಾಡಿಸಿದ.

ಒಂದು ಘರ್ಜನೆ—ಅಜೇಯವಾದ ಒಂದು ಸೈನ್ಯದ ಆಕ್ರಮಣ ಪ್ರತೀತಿಯನ್ನೊಳಗೊಂಡ ಒಂದು ಘರ್ಜನೆ.

ಅಂತೋಣಿ ಅತಿ ವೇಗವಾಗಿ ಮಾಲಿಕನ ಬಳಿ ಓಡಿಹೋಗಿ ಹೇಳಿದ:

"ನೀವು ಇನ್ನು ಇಲ್ಲಿ ನಿಲ್ಲೋದು ಬೇಡ."

"ನಿಂತರೇನು?"

"ಸಭೆ ಮುಗಿದು ಅವರೆಲ್ಲಾ ಬರುತ್ತಿದ್ದಾರೆ. ನೀವು ಎದುರಿಗೆ ಸಿಗೋದು ಬೇಡ. ಹೋಗಿರಿ...... ಹೋಗಿರಿ...... ಹೋಗಿರಿ ಮಾಲಿಕರೆ."

ಸಾಹೇಬನು ಕಿರುದಾರಿಗಿಳಿದು ನಡೆದ.

ಶಂಕು ಉಸಿರುಕಟ್ಟಿ ಓಡಿಬಂದು ಅಂತೋಣಿಗೆ ಹೇಳಿದ:

"ಮೇಸ್ತ್ರಿ ಸಾಯಲಿಕ್ಕೆ ತಯಾರಾಗಿದ್ದಾನೆ. ಯಾರೊ ಚೆನ್ನಾಗಿ ಹೊಡೆದರಂತೆ. ಆಸ್ಪತ್ರೆಗೆ ಕೊಂಡುಹೋದರು."

"ರೋಕಿ ಎಲ್ಲಿ?"

"ಆ !"

## ( ೧೭ )

ಮನೆ ಉರಿಯುತ್ತದೆ ಎಂದು ಕೇಳಿದ ಕೂಡಲೇ ಸಭೆಯಿಂದ ಓಡಿದ ರೋಕಿ ಕಿರುದಾರಿಯಿಂದ ತಲೆಯೆತ್ತಿ ನೋಡಿದನಷ್ಟೆ. ಮನೆಯುರಿದು ಭಸ್ಮವಾಗಿ ನೆಲಕ್ಕೆ

ಬಿದ್ದಿತ್ತು. ನೆರೆಹೊರೆಯ ಸ್ತ್ರೀಯರು ದಾರಿಯಲ್ಲಿ ಮೌನಮುದ್ರಿತರಾಗಿ ನಿಂತಿದ್ದರು. ರೋಕಿ ಕೇಳಿದ:

"ನನ್ನ ತಾಯಿ ಎಲ್ಲಿ?"

ಯಾರೂ ಮಾತಾಡಲಿಲ್ಲ. ಏಲಿ ಸತ್ತುದು ಅಂತೋಣಿ ರೋಕಿಯರಿಗೆ ತಿಳಿದಿರಲಿಲ್ಲ. ಜೈಲುವಾಸದಲ್ಲಿದ್ದ ಅವರಿಗೆ ಉದ್ದೇಶಪೂರ್ವಕ ಅದನ್ನು ತಿಳಿಸಿರಲಿಲ್ಲ.

"ಅಮ್ಮಾ!......" ರೋಕಿ ಗಟ್ಟಿಯಾಗಿ ಕೂಗಿದ. ಅವನು ಕಿರುದಾರಿಯಿಂದ ಮನೆಯ ಕಡೆಗೆ ಜಿಗಿದ.

ವೇಲಾಯುಧನನ ತಾಯಿ ಅವನನ್ನು ತಡೆದಳು:

"ಮಗೂ, ನಿನ್ನ ತಾಯಿ ಹೋದಳು."

"ಎಲ್ಲಿಗೆ? ಎಲ್ಲಿಗೆ ಹೋದಳು?"

"ಹೊರಟುಹೋದಳು."

"ಎಲ್ಲಿಗೇಂತ ಹೋದದ್ದು?"

"ತೀರಿಹೋದಳು ಮಗೂ, ತೀರಿಹೋದಳು!"

"ಅಮ್ಮಾ ಽಽಽ! ಅಮ್ಮಾ ಽಽಽ!" ರೋಕಿ ಜೋರಾಗಿ ರೋದಿಸುತ್ತಾ ಉರಿದ ಮನೆಯ ಸುತ್ತೂ ಓಡಿದ.

ತೆಂಗಿನ ಮರಕ್ಕೆ ಬಿಗಿಯಲ್ಪಟ್ಟಿದ್ದ ಆ ತೆಳ್ಳಗಿನ ಮನುಷ್ಯ ಒಮ್ಮೆ ನರಳಿದ. ರೋಕಿ ಅವನನ್ನು ಕಾಣಲಿಲ್ಲ.

"ಅಮ್ಮಾ ಽಽಽ!" ಭ್ರಾಂತಿ ಹಿಡಿದವನಂತೆ ಕೂಗಿಕೊಂಡು ಕಿರುದಾರಿಗಿಳಿದು ಓಡಿದ.

ರೋಕಿ ತಾಯಿಯನ್ನು ಹುಡುಕಿಕೊಂಡು ಹೋದ. ಕಿರುದಾರಿ ಕಳೆಯಿತು. ರಸ್ತೆಯಲ್ಲೇ ಸ್ವಲ್ಪ ನಡೆದು ಆಮೇಲೆ ಒಂದು ಕಿರುದಾರಿಯನ್ನು ಹಿಡಿದು ನಡೆದ. ಎಲ್ಲಿಗೆ ಹೋಗುವುದೆಂದು ಅವನಿಗೇ ಗೊತ್ತಿಲ್ಲ. ಅವನು ವೇಗವಾಗಿ ನಡೆಯುತ್ತಿದ್ದ ಕತ್ತಲೆ ಕವಿದಿದ್ದ ಆ ಕಿರುದಾರಿ ಉದ್ದಕ್ಕೂ ನಿರ್ಜನವಾಗಿತ್ತು. ಪಕ್ಕದ ಒಂದು ಮನೆಯಲ್ಲಿ ಯಾರೋ ಮಾತಾಡುವುದನ್ನು ಕೇಳಿ, ಅವನು ಅಲ್ಲೇ ನಿಂತು ಆಲಿಸಿದ. ಅದು ಮೇಸ್ತ್ರಿಯ ಮಾತಾಗಿತ್ತು. ಒಂದು ಕ್ಯಾನ್‌ವಾಸ್ ಕುರ್ಚಿಯಲ್ಲಿ ಹಾಯಾಗಿ ಮಲಗಿಕೊಂಡು ತನ್ನ ಹೆಂಡತಿ ಮಕ್ಕಳೊಡನೆ ಮಾತಾಡುತ್ತಿದ್ದ:

"ವಾಸಿಸಲು ಮನೆಯಿಲ್ಲದೆ ಅಲೆದಾಡುತ್ತಿದ್ದ ತಿರುಕರಿಗೆ ದೊಡ್ಡ ಮಾಲಿಕರು ಮನೆ ಮಾಡಿಕೊಟ್ಟರು. ಕಂಪೆನಿಯಲ್ಲಿ ಕೆಲಸವೂ ಕೊಟ್ಟು ಬದುಕಿಸಿದರು. ಹೀಗಿದ್ದೂ ಅವರು ಮಾಲಿಕರಿಗೆ ದ್ರೋಹ ಮಾಡೋದು. ಮಾಲಿಕರ ಆಸ್ತಿಯಲ್ಲಿ ಮನೆಮಾಡಿ ವಾಸಿಸುತ್ತಾ, ಅವರ ಅನ್ನವನ್ನು ತಿನ್ನುತ್ತಾ, ಅವರಿಗೆ ದ್ರೋಹ ಮಾಡಲು ಸಾಧ್ಯವಿಲ್ಲ...... ಹುಂ! ಅವುಗಳು ಸಭೆ ಮಾಡೋದು!—ಮಾಲಿಕರನ್ನು ಬೈಯುವುದಕ್ಕೆ. ಆಮೇಲೆ ಮಾಲಿಕರು ಕಟ್ಟಿಸಿಕೊಟ್ಟ ಮನೆಯಲ್ಲಿ ಹೋಗಿ ಸುಖನಿದ್ರೆ ಮಾಡಬಹುದೆಂದು ಆಲೋಚಿಸಿದ್ದರು. ಅದು ಸಾಧ್ಯವಿಲ್ಲ."

ಮೇಸ್ತ್ರಿಯು ಹೆಂಡತಿ ಕೇಳಿದಳು:

"ಬೆಂಕಿ ಹಚ್ಚುವ ವೇಳೆ ಆ ಹುಡುಗಿ ಇದ್ದಳೋ ಮನೆಯಲ್ಲಿ?"

"ಅವಳು ಸಹ ಸಭೆಗೆ ಹೋಗಿದ್ದಳು."

ರೋಕಿ ಮನೆಯೊಳಗೆ ನುಗ್ಗಿದ. ಲಾಂದ್ರದ ಬೆಳಕಿನಲ್ಲಿ ಕ್ಯಾನ್ವಾಸಿನ ಕುರ್ಚಿಯಲ್ಲಿ ಮಲಗಿದ್ದ ಮೇಸ್ತ್ರಿಯು ಎದೆಗೆ ಬಲವಾಗಿ ಗುದ್ದಿದ. ಏಳುವುದಕ್ಕಾಗಲೀ ತಡೆಯುವುದಕ್ಕಾಗಲೀ ಪ್ರಯತ್ನಿಸುವ ಮೊದಲೇ ಐದಾರು ಗುದ್ದು ಕೊಟ್ಟ. ಅವನ ಹೆಂಡತಿ ಮಕ್ಕಳು ಕೂಗಿ ರಂಪಾಟವೆಬ್ಬಿಸಿದರು. ತಡೆಯಲು ಬಂದ ಅವನ ಹೆಂಡತಿಗೂ ಸಿಕ್ಕಿತು ಎರಡು ಮೂರು ಪೆಟ್ಟುಗಳು. ಪಕ್ಕದ ಮನೆಯವರು ಬರುವ ಮೊದಲೇ ಅವನು ಮೇಸ್ತ್ರಿಯನ್ನು ಕುರ್ಚಿಯಿಂದ ಎಳೆದು ಕೆಳಗೆ ಹಾಕಿ ನಾಲ್ಕೈದು ಒದೆತಗಳನ್ನೂ ಕೊಟ್ಟ.

"ಇನ್ನು ನೀನು ಯಾರ ಮನೆಗೂ ಬೆಂಕಿ ಹಚ್ಚಲಾರೆ" ಎಂದು ಹೇಳಿ ಅವನಲ್ಲಿಂದ ಓಡಿದ.

ಎಲ್ಲವೂ ಕ್ಷಣಮಾತ್ರದಲ್ಲಿ ನಡೆದ ಘಟನೆಯಾಗಿತ್ತು. ಮೇಸ್ತ್ರಿಯು ಮನೆಗೆ ಹೋಗಬೇಕೆಂದಾಗಲಿ, ಅವನನ್ನು ಹೊಡೆಯಬೇಕೆಂದಾಗಲಿ ಅವನು ಯೋಚಿಸಿರಲಿಲ್ಲ. ಅವನು ಅಲ್ಲಿಂದ ಕಿರುದಾರಿಗಿಳಿದು ಓಡಿದ. ಕೂಗು ಕೇಳಿ ಓಡಿಬಂದ ಒಬ್ಬ ಪಕ್ಕದ ಮನೆಯವನೂ ರೋಕಿಯೂ ಎದುರಾದರು. ಅವನು ಗಟ್ಟಿಯಾಗಿ ಕೂಗಿ ಹೇಳಿದ:

"ಇದೋ ಹೋಗುತ್ತಿದ್ದಾನೆ—ಇದೋ ಓಡಿಹೋಗುತ್ತಿದ್ದಾನೆ ಕಳ್ಳ!"

ರೋಕಿ ಅತಿ ವೇಗವಾಗಿ ಓಡಿ ದೂರದ ಒಂದು ಮರಳ ದಿಣ್ಣೆಯ ಮರೆಯಲ್ಲಿ ಅಡಗಿ ಕುಳಿತ. ನಾಲಿಗೆ ಒಣಗಿಹೋಗಿದೆ. ಜೈಲಿನಿಂದ ಬಂದಮೇಲೆ ಒಂದು ತೊಟ್ಟು ಚಹ ಸಹಿತ ಕುಡಿದಿಲ್ಲ ಅವನು. ಒಂದು ಕಪ್ ಚಹ ಒಂದು ಬೀಡಿ! ಅದು ಈಗ ಅವನಿಗೆ ಬೇಕಿತ್ತು.

ಅವನು ಅಲ್ಲಿಂದ ಎದ್ದು ನಡೆದ. ಪೊದರು ತುಂಬಿದ ಕಾಡಿನ ಮಧ್ಯದಿಂದ ಅವನು ರಸ್ತೆಗೆ ತಲುಪಿದ. ಸ್ವಲ್ಪ ದೂರ ನಡೆದಾಗ ಬಾಗಿಲು ಹಾಕಿದ್ದ ಒಂದು ಚಹದಂಗಡಿಯನ್ನು ಕಂಡ. ಅವನು ಆ ಅಂಗಡಿಯ ಚಾವಡಿಯಲ್ಲಿ ಹೋಗಿ ಕುಳಿತ. ಅತಿಯಾದ ದಾಹ! ಸುತ್ತಲೂ ನೋಡಿದ. ಚಹ ತಯಾರಿಸುವ ಮೇಜಿನ ಕೆಳಗೆ ಒಂದು ಕೊಡವಿತ್ತು. ಅವನು ಅದನ್ನು ತೆಗೆದು ನೋಡಿದ. ಅದರಲ್ಲಿ ನೀರಿತ್ತು. ಸ್ವಲ್ಪ ನೀರು ಬಾಯಿಗೆ ಹಾಕಿ ನೋಡಿದ. ಏನೂ ತೊಂದರೆಯಿಲ್ಲ. ನೀರು ಕುಡಿದು ಚಾವಡಿಯಲ್ಲಿ ಮಲಗಿದ. ಬಹಳ ಆಯಾಸವಾದ್ದರಿಂದ ನಿದ್ದೆ ಬಂತು.

ಬೆಳಗಿನ ಜಾವದಲ್ಲಿ ಚಹದಂಗಡಿಯವ ಬಂದು ಅವನನ್ನು ಮುಟ್ಟಿ ಎಬ್ಬಿಸಿದ. ಅವನು ನಿದ್ರೆಯಿಂದೆದ್ದ. ಅಂಗಡಿಯವನು ಕದ ತೆರೆದು, ಒಲೆಯುರಿಸಿ, ನೀರು ಬಿಸಿ ಮಾಡಿದ. ಗ್ಲಾಸುಗಳನ್ನು ತೊಳೆದ. ಸ್ವಲ್ಪ ಹೊತ್ತಿನಲ್ಲಿ ಚಹ ತಯಾರಾಯಿತು. ಒಂದು ಗ್ಲಾಸು ಚಹಾ! ಆದರೆ ಅವನ ಕೈಯಲ್ಲಿ ಕಾಸಿಲ್ಲ; ಚಹದಂಗಡಿಯವನ ಪರಿಚಯವೂ ಇಲ್ಲ.

ಅವನು ರಸ್ತೆಗಿಳಿದು, ಬೀದಿಯಲ್ಲಿ ನಡೆದ. ಹಿಂದಿನ ದಿನದ ಸಂಗತಿಗಳನ್ನು ನೆನಸುತ್ತಿದ್ದ. ಆ ಬಹುದೊಡ್ಡ ಮೆರವಣಿಗೆಯಲ್ಲಿ ಮುಂಭಾಗದಲ್ಲಿ ಅಭಿಮಾನ ಪೂರ್ವಕ ತಲೆಯೆತ್ತಿ ನಡೆದ ನಡಿಗೆ. ಕಾರ್ಮಿಕರ ಸ್ನೇಹಪೂರ್ವಕವಾದ ಆ ನೋಟ ಗಳು. ಸಭೆಗೆ ಎದುರಾಗಿ ಆ ದೊಡ್ಡ ಜನಸಮೂಹವನ್ನು ನೋಡುತ್ತಾ ಕುಳಿತುಕೊಂಡ ರೀತಿ. ಏನು ಮಾತಾಡುವುದು ಸಭಿಕರ ಮುಂದೆ, ಎಂಬ ಆಲೋಚನೆ—

ಏನಾಗಿತ್ತು ಭಾಷಣದ ವಿಷಯ? ಅಧ್ಯಕ್ಷರು ಹೆಸರು ಕೂಗಿದೊಡನೆ ಅವನು ಎದ್ದು ಬಹು ದೊಡ್ಡ ಆ ಸಭೆಗೆ ಹೀಗೆ ಹೇಳಬೇಕೆಂದಿದ್ದ :

"ನಾವು ಸ್ವಲ್ಪ ಜನರು ಸಾಯುವುದಕ್ಕಿಂತ, ಎಲ್ಲರೂ ಒಂದಾಗಿ ಸಾಯುವುದು ಒಳ್ಳೆಯದು. ಏಕೆಂದರೆ......" ಒಂದು ಕೈಚಪ್ಪಾಳೆ ಹೊಡೆದುದನ್ನು ಕೇಳಿ ಅವನು ತಿರುಗಿ ನೋಡಿದ. ರಸ್ತೆಯ ಬಲಪಾರ್ಶ್ವದಲ್ಲಿ, ಒಂದು ಗೇರುಮರದ ಕೆಳಗೆ ನಿಂತಿದ್ದ ಶಂಕು ಅವನನ್ನು ಚಪ್ಪಾಳೆ ಹೊಡೆದು ಕರೆದ. ಅವನು ಹೇಳಿದ:

"ಈಚೆ ಬಾ."

ರೋಕಿ ಸಂಶಯಗೊಂಡು ನಿಂತ.

"ಇಲ್ಲಿ ಬಂದು ಹೋಗು."

ಅವನು ಶಂಕುವಿನ ಹತ್ತಿರ ಹೋದ. ಅವನು ಮೆಲ್ಲಗೆ ಹೇಳಿದ:

"ನೀನೀಗ ಅಲ್ಲಿ ಹೋಗಬೇಡ."

"ಏನು ಹೋದರೆ?"

"ಹೋದರೊ?...... ನೀನೀಗ ಅಲ್ಲಿಗೆ ಹೋಗಬೇಡವೆಂದು ನಾನು ಹೇಳು ತ್ತಿದ್ದೇನೆ."

"ಹೋದರೇನೆಂದು?"

"ಪೋಲೀಸರು ನಿನ್ನನ್ನು ಹುಡುಕುತ್ತಿದ್ದಾರೆ. ಅಂತೋಣಿ, ಮತ್ತಾಯಿ, ಸೈಮನ್, ಅಚ್ಚುತನ್, ಪದ್ಮನಾಭನ್. ಜೋಸೆಫ್, ಪಪ್ಪನ್ ಎಲ್ಲರನ್ನೂ ಪೋಲೀಸರು ಹಿಡಿದು ಕೊಂಡುಹೋದರು."

"ಏಕೆ?"

"ಮೇಸ್ತ್ರಿಗೆ ಹೊಡೆದನೆಂದು"

"ಅವನಿಗೆ ಹೊಡೆದದ್ದು ನಾನು."

"ನೀನೊ?...... ಅವರೆಂದು ಹೇಳಿ ಓಡಿದುಕೊಂಡು ಹೋದರು."

"ಹಾಗಿದ್ದರೆ, ನಾನಲ್ಲಿಗೆ ಹೋಗಿ ಹೇಳುತ್ತೇನೆ. ಹೊಡೆದದ್ದು ನಾನೆಂದು. ನನ್ನ ಮನೆಗೆ ಬೆಂಕಿ ಹಚ್ಚಿದ್ದಕ್ಕೆ ನಾನು ಹೊಡೆದದ್ದೆಂದು ಹೇಳುವೆ."

"ಬೇಡ, ನೀನಲ್ಲಿಗೆ ಹೋಗಬೇಡ. ನಿನ್ನನ್ನು ಕೊಂದುಬಿಟ್ಟಾರು."

"ನನ್ನನ್ನು ಕೊಲ್ಲುವುದಾದರೆ ಕೊಲ್ಲಲಿ, ನಾನಲ್ಲಿಗೆ ಹೋಗುತ್ತೇನೆ" ಅವನು ನಡೆದ.

"ಹೋಗಬೇಡ ರೋಕೀ. ಹೋಗಬೇಡ ಎಂದು ನಾನು ಹೇಳುತ್ತೇನೆ. ಅವರನ್ನು ಹಿಡಿದುಕೊಂಡು ಹೋಗಿ ಗುದ್ದಿ ಹಣ್ಣು ಮಾಡಿದ್ದಾರೆ. ನೀನು ಸಿಕ್ಕಿದರಂತೂ ಕೊಂದೇ ಬಿಡುವರು."

ಅವನು ರೋಕಿಯ ಕೈಯನ್ನು ಬಲವಾಗಿ ಹಿಡಿದ. ಶಂಕುವಿನ ಹಿಡಿತದಿಂದ ಬಿಡಿಸಿಕೊಳ್ಳಲಾರದೆ ಅವನು ಅಲ್ಲಿಯೇ ನಿಂತ. ಅವನು ಕೇಳಿದ:

"ಹಾಗಿದ್ದರೆ ಮತ್ತೇನು ಮಾಡಬೇಕು?"

"ನೀನು ಇಲ್ಲಿ ನಿಲ್ಲು. ನಮಗೆ ಸಂಘವಿದೆ; ಮುಂದಾಳುಗಳಿದ್ದಾರೆ...... ಬಾ, ನೀನೊಂದು ಕಪ್ ಚಹ ಕುಡಿ."

ಅವನು ರೋಕಿಯ ಕೈ ಹಿಡಿದುಕೊಂಡು ನಡೆದ. ಅವನು ಕೇಳಿದ:

"ನೀನು ನನ್ನ ತಾಯಿಯನ್ನು ನೋಡಿದೆಯಾ?"

"ನಿನ್ನ ತಾಯಿಯೊ?...... ನಿನ್ನ ತಾಯಿ ಸ್ವರ್ಗಕ್ಕೆ ಹೋಗಿದ್ದಾಳೆ, ನಿನ್ನ ತಂದೆಗೆ ಗಂಜಿ ಮಾಡಿ ಕೊಡಲು."

ಅವನು ಮತ್ತೇನೂ ಮಾತನಾಡಲಿಲ್ಲ. ಅವರು ಚಹದಂಗಡಿಗೆ ಹೋದರು. ಇಬ್ಬರೂ ತಿಂಡಿ ತಿಂದು ಚಹ ಕುಡಿದರು. ರೋಕಿ ಒಂದು ಬೀಡಿಯನ್ನೂ ಸೇದಿದ.

ಆಮೇಲೆ ಅವರು ರಸ್ತೆಗೆ ಬಂದು ನಡೆದರು. ರೋಕಿ ಕೇಳಿದ:

"ನನ್ನ ತಂಗಿ ಎಲ್ಲಿ?"

"ಅನ್ನೆಯೊ?—ಅವಳು ಅಲ್ಲಿ ಇದ್ದಾಳೆ."

"ಎಲ್ಲಿ?"

"ಹೊಸ ಮನೆಯಲ್ಲಿ."

"ಎಲ್ಲಿಯದು ಹೊಸ ಮನೆ?"

"ಎರಡು ಮನೆಗಳು ಉರಿದು ಭಸ್ಮವಾದ ಜಾಗದಲ್ಲೇ ಎರಡು ಹೊಸ ಮನೆಗಳು ನಿರ್ಮಾಣಗೊಂಡವು, ಬೆಳಗಾಗುವುದಕ್ಕೆ ಮೊದಲೇ."

ಅದು ಸತ್ಯವಾಗಿತ್ತು. ಉರಿದುಹೋದ ಎರಡು ಹಳೆಯ ಮನೆಗಳ ಬದಲಾಗಿ ಬೆಳಗಾಗುವ ಮುಂಚೆಯೇ ಹೊಸ ಎರಡು ಮನೆಗಳು ಎದ್ದು ನಿಂತಿದ್ದುವು. ಹೊಡೆತ ಒದೆತಗಳನ್ನು ತಿಂದು ಬಳಲಿದ್ದ ಆ ತೆಳ್ಳಗಿನ ಮನುಷ್ಯ ಮೆಲ್ಲಗೆ ಏದುಸಿರು ಬಿಡುತ್ತಾ, ಕೂಲಿಯಾಳುಗಳ ಕಿವಿಯಲ್ಲಿ ಏನೋ ತಿಳಿಸಿದ. ಪದ್ಮನಾಭನ್ ಕೂಗಿ ಹೇಳಿದ:

"ಬೆಳಗಾಗುವುದಕ್ಕೆ ಮೊದಲು ಮನೆಯಾಗಬೇಕು."

ಎಲ್ಲರೂ ಅದೇ ಮಾತು ಹೇಳಿದರು. ಮಡಲು, ಬಿದಿರು, ಹುರಿಹಗ್ಗ ಎಲ್ಲವೂ ಎಲ್ಲಿಂದಲೋ ಬಂದು ಸಂಗ್ರಹವಾದುವು. ಸೂರ್ಯೋದಯಕ್ಕೆ ಮೊದಲೇ ಎರಡೂ ಮನೆಗಳು ಎದ್ದು ನಿಂತುವು.

ಅನ್ನೆಯ ಕೈಹಿಡಿದುಕೊಂಡು, ಅಂತೋಣಿ ಹೊಸ ಮನೆಗೆ ಪ್ರವೇಶಿಸಿದ. ಗದ್ಗದ ಸ್ವರದಿಂದ ಅವನು ಹೇಳಿದ:

"ಹಳತೆಲ್ಲಾ ಹೋಯಿತು. ತಾಯಿ, ತಂದೆ, ವಸತಿ, ಎಲ್ಲಾ—ಎಲ್ಲಾ ಹೋಯಿತು. ಇನ್ನೆಲ್ಲಾ ಹೊಸ ರಂಗ, ಹೊಸ ಆಟ !"

ಬೆಳಗಾದೊಡನೆ ಪೋಲೀಸರು ಬಂದರು. ಅವರು ಅಂತೋಣಿಯ ಕೈಗಳಿಗೆ ಸರಪಳಿ ಹಾಕಿದರು.

"ಏಕೆ?" ಅಂತೋಣಿ ಕೇಳಿದ.

ಒಂದೇಟು !—ಅದೇ ಆಗಿತ್ತು ಅವನ ಪ್ರಶ್ನೆಗೆ ಉತ್ತರ.

"ದೇವರೇ !" ಅನ್ನೆ ಕೆಲಕ್ಕುರುಳಿದಳು.

## (೧೮)

ಔಸೇಪ್ಪನ ಮೃತದೇಹವನ್ನು ತೆಗೆದುಕೊಂಡು ಮತ್ತಾಯಿ ಮತ್ತು ಸೈಮನರು ಹೊಸ ಮನೆಯನ್ನು ಪ್ರವೇಶಿಸಿದ್ದರು. ಶವಸಂಸ್ಕಾರ ಮಾಡುವ ಮೊದಲೇ ಪೋಲೀಸರು ಅವರಿಗೆ ಬಳೆ ತೊಡಿಸಿ ಕರೆದುಕೊಂಡು ಹೋದರು. ವೇಲಾಯುಧನ ತಾಯಿ ನಿಟ್ಟುಸಿರು ಬಿಟ್ಟಳು. ಗಂಟಲಲ್ಲಿ ತುಂಬಿದಂತಿದ್ದ ಬೆಂಕಿಯ ಕೆಂಡಗಳನ್ನು ಒತ್ತಾಯ ಪೂರ್ವಕ ನುಂಗಿಕೊಂಡು ಅವಳು ಆಕಾಶದತ್ತ ನೋಡಿದಳು.

"ನನ್ನ *ಕಣೆಚ್ಚಕೊಳಂಗರೆ ಭಗವತೀ !"

ಪದ್ಮನಾಭನ್, ಅಚ್ಯುತನ್, ಜೋಸೆಫ್, ಅಂತೋಣಿ, ಮತ್ತಾಯಿ ಮತ್ತು ಸೈಮನರನ್ನು ಹಿಡಿದು ಕೈಗಳಿಗೆ ಕೋಳ ಬಿಗಿದುಕೊಂಡು ಪೋಲೀಸ್ ಕಾವಲಿನೊಂದಿಗೆ ರಸ್ತೆಯಲ್ಲಿ ನಡೆಸಿಕೊಂಡು ಹೋದರು. ದೊಡ್ಡದೊಂದು ಜನಸಮೂಹ ಅವರನ್ನು ಅನುಸರಿಸಿತ್ತು. ಆ ತೆಳ್ಳಗಿನ ಮನುಷ್ಯನನ್ನು ಆ ಜನಸಮೂಹದಲ್ಲಿ ಮಿಂಚಿನಂತೆ ಕಾಣಬಹುದಾಗಿತ್ತು.

ಅಲ್ಲಿದ್ದ ಚಿಕ್ಕ ಸೇತುವೆಯ ಸಮೀಪ ಬೀಗಗಳನ್ನು ಮಾರುತ್ತಿದ್ದ ಒಬ್ಬ ವೃದ್ಧ ಒಂದು ರಿಕ್ಷಾ ಗಾಡಿಯವನೊಡನೆ ಕೇಳಿದ:

"ಅವರನ್ನು ನಿನ್ನೆ ತಾನೆ ಜೈಲಿನಿಂದ ಬಿಟ್ಟುದಲ್ಲವೇ?"

"ಹುಂ."

"ಮತ್ತೇಕೆ ಅವರನ್ನು ಇಂದು ಮತ್ತೆ ಹಿಡಿದುಕೊಂಡು ಹೋಗುತ್ತಿದ್ದಾರೆ?"

"ಮೇಸ್ತ್ರಿಗೆ ಹೊಡೆದರೆಂದು. ಅವನನ್ನು ಈಗ ಆಸ್ಪತ್ರೆಗೆ ಸೇರಿಸಿದರು."

"ಯಾವ ಮೇಸ್ತ್ರಿ?"

"ವರೀದು ಸಾಹೇಬನ ಕಂಪೆನಿಯ ಮೇಸ್ತ್ರಿ."

"ಅದೇಕೆ ಅವರು ಅವನಿಗೆ ಹೊಡೆದುದು?"

---

* ಕಣೆಚ್ಚಕೊಳಂಗರೆ ಎಂಬುದು ಒಂದು ಸ್ಥಳದ ಹೆಸರು.

"ಅವನು ಅವರ ಮನೆಗಳಿಗೆ ಬೆಂಕಿ ಹಚ್ಚಿದನೆಂದು."

"ಅದಕ್ಕೆ ಅವನಿಗೆ ಹೊಡೆದರೆ, ಮನೆ ಮತ್ತೆ ಬರುತ್ತದೊ?"

"ಅವನಿಗೆ ಹೊಡೆತವೂ ಬಿತ್ತು, ಮನೆಯೂ ಆಯಿತು."

"ಮಾಲಿಕ, ಮೇಸ್ತ್ರಿ ಮೊದಲಾದವರನ್ನು ಹೊಡೆದರೆ......"

"ಹೊಡೆದರೇನಂತೆ?"

"ಏನೆಂದರೆ?—ದೇವರಿಗೆ ಮೆಚ್ಚಿಕೆಯಾಗದು."

"ದೇವರು ಇಲ್ಲವೆಂದೇ ಅವರು ಹೇಳೋದು."

"ಅದುದರಿಂದಲೇ ಅವರನ್ನು ಹೀಗೆ ಹಿಡಿದುಕೊಂಡು ಹೋಗೋದು."

"ಏಸುವನ್ನೂ ಹೀಗೇ ಅಲ್ಲವೆ ಹಿಡಿದುಕೊಂಡು ಹೋದದ್ದು?"

"ಏಸು ಮತ್ತು ವರ್ಕಿಯ ಮಗ ಅಂತೋಣಿ ಇಬ್ಬರೂ ಒಂದೇನಾ?"

"ಮತ್ತೇನು ವ್ಯತ್ಯಾಸ?"

"ನೀನು ಸುಮ್ಮನಿರು ಅಲ್ಲಿ! ದೇವರು ಮತ್ತು ಅಂತೋಣಿ ಒಂದೇಯಂತೆ; ನಿನಗೆ ಹುಚ್ಚು......ಕಾರ್ಮಿಕರು ಮಾಲಿಕರನ್ನೂ ಮೇಸ್ತ್ರಿಗಳನ್ನೂ ಕಾಣುವಾಗ......"

"ನಮಸ್ಕರಿಸಬೇಕೊ?"

"ಆ! ಇಲ್ಲದಿದ್ದರೆ ಸ್ವಾಮಿದ್ರೋಹವಾಗುತ್ತದೆ. ಅವರಿರೋದ್ರಿಂದ ಕೂಲಿ ಯಾಳುಗಳು ಗಂಜಿನೀರು ಕುಡಿಯುತ್ತಾರೆ."

ಚಹದಂಗಡಿಗಳಲ್ಲೂ, ಬೀಡಾದಂಗಡಿಗಳಲ್ಲೂ, ದೋಣಿಗಳು ಬಂದು ನಿಲ್ಲುವ ಸ್ಥಳಗಳಲ್ಲೂ, ಬಸ್-ಸ್ಟ್ಯಾಂಡುಗಳಲ್ಲೂ ಮಾರ್ಕೇಟುಗಳಲ್ಲೂ ದಿನವಹಿ ಸಂಜೆ ನಡೆ ಯುವ ಸಂತೆಗಳಲ್ಲೂ ಬಿಸಿ ವಾರ್ತೆಗಳು ಅಲೆಯಾಡಿದುವು. ಆ ತೆಳ್ಳಗಿನ ಮನುಷ್ಯ ಸರ್ವವ್ಯಾಪಿಯಾಗಿ ಕಾಣಲ್ಪಡುತ್ತಿದ್ದ. ಕೂಲಿ ಆಳುಗಳ ಕಿವಿಗಳಲ್ಲಿ ಆ ಬಿರುಗಾಳಿ ಸಿಳ್ಳು ಹಾಕಿತು. ಒಂದು ಫ್ಯಾಕ್ಟರಿಯ ಗೇಟಿನಿಂದ ಮತ್ತೊಂದು ಫ್ಯಾಕ್ಟರಿಯ ಗೇಟಿನ ಬಳಿಗೆ ಅವನು ಗಾಳಿಯಲ್ಲಿ ಹಾರಿಹೋದಂತೆ ಹೋಗುತ್ತಿದ್ದ. ಫ್ಯಾಕ್ಟರಿಗಳಲ್ಲಿ ಮಗ್ಗಗಳ ಎಡೆಗಳಲ್ಲೂ ತಯಾರಿಸಿಟ್ಟ ಹೊರಜೆಯ ರಾಶಿಗಳ ಪಕ್ಕಗಳಲ್ಲೂ ಅಸಮಾಧಾನವು ಹೊಗೆಯಾಡಿತು.

ಕುಟ್ಟಪ್ಪನ ಚಹದಂಗಡಿಯಲ್ಲೂ ರೋಷ ಪ್ರಕಟವಾಗುತ್ತಿತ್ತು. ಹಲ್ಲುಕಡಿಯುತ್ತಾ ಅವನು ಚಹ ಮಾಡುತ್ತಿದ್ದ. ಗ್ಲಾಸುಗಳನ್ನು ಡೆಸ್ಕುಗಳ ಮೇಲೆ ಇಡುವಾಗ ಎಂದೂ ಇಲ್ಲದ ಒಂದು ಹೊಸ ಕ್ರಮವಿತ್ತು. ಪ್ರತಿಯೊಂದು ಮಾತಿನಲ್ಲೂ ರೋಷ ಅಲೆಯಾಡುತ್ತಿತ್ತು.

ಸಣ್ಣಿಯ ಚಹದಂಗಡಿಯ ಸುದ್ದಿ ಮತ್ತೆ ಹೇಳುವುದೇ ಬೇಡ. ರೋಷವು ಅಲ್ಲಿ ಜ್ವಲಂತವಾಗಿ ಉರಿಯುತ್ತಿತ್ತು. ಅವನು ಗಟ್ಟಿಯಾಗಿ ಹೇಳಿದ:

"ಅದೆಲ್ಲ ಬಿಲ್ಲವರು. ಬಿಲ್ಲವರು ಹೊಡೆದದ್ದು. ಕ್ರಿಸ್ತಾನಿಗಳು ಹೊಡೆಯರು. ಕ್ರಿಸ್ತಾನಿಗಳು ಧನಿಕರಾಗೋದನ್ನು ಕಂಡರೆ ಬಿಲ್ಲವರಿಗೆ ಹೊಟ್ಟೆಕಿಚ್ಚು!"

ಬೀಡಿ ಅಂಗಡಿಯ ವಾಸು ತನ್ನ ಕೈಯಲ್ಲಿದ್ದ ಕತ್ತರಿಯನ್ನು ತಿರುಗಿಸುತ್ತಾ ಹೇಳಿದ:

"ಹಾಗಿದ್ದರೆ ಮತ್ತೇಕೆ ಪೋಲೀಸರು ಕ್ರಿಸ್ತಾನಿಗಳನ್ನು ಹಿಡಿದುಕೊಂಡು ಹೋಗೋದು?"

"ಅವರು ಕ್ರಿಸ್ತಾನಿಗಳೆಂದು ಯಾರು ಹೇಳಿದ್ದು? ಅವರು ಕೂಡಾ ಬಿಲ್ಲವರೇ ಆಗಿದ್ದಾರೆ. ಕ್ರಿಸ್ತಾನಿಗಳು ಹೊಡೆಯರು."

"ಅದು ಸರಿ. ಕ್ರಿಸ್ತಾನಿಗಳು ಹೊಡೆಯರು, ಮನೆಗೆ ಬೆಂಕಿ ಕೊಡುವರೋ?" ಎಂದು ಹಾಸ್ಯಮಾಡಿದ.

"ಮನೆಗೆ ಬೆಂಕಿಕೊಟ್ಟದ್ದೂ ಬಿಲ್ಲವರು."

"ಹಾಗಿದ್ದರೆ ನೀನು ಬಿಲ್ಲವನೆಂದಾಯಿತಲ್ಲಾ?"

ಸಣ್ಣ ಚೂರಿ ಬಿಡಿಸಿಕೊಂಡು ಹೊರಗೆ ಜಿಗಿದ. ವಾಸು ಕತ್ತರಿ ಹಿಡಿದುಕೊಂಡು ಎದ್ದ.

ಕುಟ್ಟಪ್ಪನ ಚಹದಂಗಡಿಯಲ್ಲಿ ಚಹ ಕುಡಿಯುತ್ತಿದ್ದ ಆ ತೆಳ್ಳಗಿನ ಮನುಷ್ಯ ಹೊರಗೆ ಬಂದು, ಒಬ್ಬ ಕೂಲಿಯಾಳಿನೊಡನೆ ಏನೋ ಹೇಳಿ ಅದೃಶ್ಯನಾದ. ವಾಸು ಮತ್ತು ಸಣ್ಣಯರನ್ನು ಹಿಡಿದು ದೂರ ಸರಿಸಲು ಬಂದವರೊಡನೆ, ಆ ವ್ಯಕ್ತಿ ಗಟ್ಟಿಯಾಗಿ ಕೂಗಿ ಹೇಳಿದ:

"ನೀವೆಲ್ಲಾ ದೂರ ಸರಿಯಿರಿ; ಅವರಿಬ್ಬರೂ ಮಾಲಿಕರುಗಳ ಕಾರ್ಯಸ್ಥರು. ಅವರು ತಮ್ಮೊಳಗೆ ಇರಿದುಕೊಂಡು ಸಾಯಲಿ."

ಅವರಿಬ್ಬರೂ ಚೂರಿಕತ್ತರಿಗಳನ್ನು ಪರಸ್ಪರ ಎತ್ತಿ ತೋರಿಸಿಕೊಂಡು ತಮ್ಮ ತಮ್ಮ ಸ್ಥಾನಗಳಿಗೆ ಬಂದು ಕುಳಿತರು.

ದೋಣಿಗಳು ತಂಗುವೆಡೆಯಲ್ಲಿ ಸೇರಿದ್ದ ಪ್ರಯಾಣಿಕರಿಗೆ ಒಂದು ಸಂಶಯ— ವಿಪ್ಲವವೆಂದರೇನೆಂದು. ಒಬ್ಬ ಪ್ರಯಾಣಿಕ ಹೇಳಿದ:

"ಮಾಲಿಕವರ್ಗವನ್ನು ಕೊಲ್ಲೋದೇ ವಿಪ್ಲವ."

"ಕೊಂದಮೇಲೆ ಎಲ್ಲಿ ಹೋಗುವರು?"

"ಕೊಲ್ಲುವವರಲ್ಲಿ ಅದನ್ನು ಕೇಳಬೇಕು."

ಬೇರೊಬ್ಬ ಪ್ರಯಾಣಿಕ ಹೇಳಿದ:

"ಯಾಕೆ ಕೊಲ್ಲೋದು?"

"ಮಾಲಿಕರ ಆಸ್ತಿಯನ್ನೆಲ್ಲಾ ಕಸಕೊಳ್ಳಲು."

"ಕಸುಕೊಂಡಾದ ಮೇಲೆ ಅದನ್ನು ತೆಗೆದುಕೊಂಡು ಎಲ್ಲಿಗೆ ಹೋಗೋದು?"

"ಆ !"

ಆ ತೆಳ್ಳಗಿನ ಮನುಷ್ಯ ಒಬ್ಬ ಹೊರೆಹೊರುವವನ ಕಿವಿಯಲ್ಲಿ ಏನೋ ತಿಳಿಸಿ ಅಗೋಚರನಾದ. ಆ ಕೂಲಿಯುವನು ಪ್ರಯಾಣಿಕನ ಹತ್ತಿರ ಬಂದು ಕೇಳಿದ:

"ನಿಮಗೇನು ವಿಷಯ ತಿಳಿಯಬೇಕಾಗಿದೆ?"

"ನಮಗೆ ತಿಳಿಯಬೇಕಾದದ್ದನ್ನೆಲ್ಲಾ ನೀನು ಹೇಳಿಕೊಡಲು ಸಾಧ್ಯವೇನೊ?" ಒಬ್ಬ ಪ್ರಯಾಣಿಕ ಸಿಟ್ಟಿನಿಂದ ಕೇಳಿದ.

"ಎಲ್ಲಾ ಹೇಳಿಕೊಡಲು ಸಾಧ್ಯವಿಲ್ಲ. ಆದರೂ......"

"ಹೋಗಯ್ಯ ಆಚೆ, ನಿನ್ನ ಕೆಲಸ ನೋಡು."

ಕೂಲಿಯಾಳು ಹಿಂತಿರುಗಿದ. ಬಹು ತಾತ್ಸಾರವಾಗಿ ನೋಡುತ್ತಾ ಪ್ರಯಾಣಿಕರು ಹೇಳಿದರು:

"ಅವನು ನಮಗೆ ಕಲಿಸಲು ಬಂದಿರೋದು ನೋಡು !"

ಸಂಜೆ ಕಳೆಯಿತು. ಕತ್ತಲು ವ್ಯಾಪಿಸಿತು. ಬಿಸಿಯಾದ ವಾರ್ತೆ ಪಟ್ಟಣವಿಡೀ ಹಬ್ಬಿತು. ವೇಲಾಯುಧನ ತಾಯಿ ಅನ್ನೆಯೊಡನೆ ಆ ವಿವರ ಹೇಳಿದಳು:

"ಕಿರಿಯ ಮಾಲಿಕನಿಗೆ ಕಲ್ಲು ಹೊಡೆದರಂತೆ !"

"ಯಾರಂತೆ?" ಅನ್ನೆ ಕುತೂಹಲದಿಂದ ಕೇಳಿದಳು.

"ಆ ! ಕಲ್ಲಿನಿಂದ ಹೊಡೆದು ತಲೆ ಒಡೆದಿದೆಯಂತೆ. ಮೋಟಾರು ಸೈಕಲ್ಲಿನಲ್ಲಿ ಹೋಗುತ್ತಿದ್ದಾಗ ಹೊಡೆದರು. ಅವನು ಅದರಿಂದ ಹೊರಳಿಬಿದ್ದು ಕೈಮುರಿದಿದೆಯಂತೆ."

ಸ್ವಲ್ಪ ಸಮಯ ಮೌನವಾಗಿದ್ದು ಮತ್ತೆ ಅನ್ನೆ ಕೇಳಿದಳು:

"ನನ್ನ ಕಿರಿಯ ಅಣ್ಣನಿದ್ದಾನೋ ಅಲ್ಲೆಲ್ಲಾದರೂ?"

"ಆ !"

ಅನ್ನೆ ಆಕಾಶದತ್ತ ನೋಡಿದಳು.

"ದೇವರೇ !"

ವೇಲಾಯುಧನ ತಾಯಿ ಹೇಳಿದಳು:

"ಕತ್ತಲಾಯಿತಲ್ಲಾ, ನೀನೊಬ್ಬಳೆ ಇಲ್ಲಿ ರಾತ್ರಿ ಇರಬೇಡ."

"ನಾನು ಮತ್ತೆಲ್ಲಿಗೆ ಹೋಗೋದು?"

"ನೀನು ನನ್ನ ಮನೆಗೆ ಬಾ."

"ಬೇಡ, ಬೇಡ. ನಾನಿಲ್ಲಿಯೇ ಇರುತ್ತೇನೆ."

"ಒಬ್ಬಳೆಯೊ?"

"ಹುಂ. ಕಿರಿಯಣ್ಣ ಬಂದರೆ......"

"ಹಾಗಿದ್ದರೆ ನೀನು ಒಳಗೆ ಹೋಗಿ ಬಾಗಿಲು ಹಾಕಿಕೊ."

ಚಾವಡಿಯಲ್ಲಿ ಉರಿಯುತ್ತಿದ್ದ ದೀಪವನ್ನು ತೆಗೆದುಕೊಂಡು ಅವಳು ಒಳಗೆ ಹೋದಳು. ಮಡಲಿನ ತಟ್ಟಿಯ ಬಾಗಿಲನ್ನು ಹಾಕಿಕೊಂಡಳು. ವೇಲಾಯುಧನ ತಾಯಿ ಹೋದಳು. ಅನ್ನೆ ದೀಪ ಆರಿಸಿ ತಟ್ಟಿಬಾಗಿಲು ತೆರೆದು ಹೊರಗೆ ಇಳಿದಳು. ನೆರೆಮನೆಗಳಲ್ಲೆಲ್ಲಾ ದೀಪಗಳು ಉರಿಯುವುದು ಕಾಣುತ್ತಿದ್ದುವು. ಅಂತೋಣಿಯ ಮನೆಯಲ್ಲಿ ಮಾತ್ರ ಇರುಳಿನ ಗಾಢಾಂಧಕಾರ ಕವಿದಿತ್ತು. ಎಲ್ಲೆಲ್ಲೂ ನಿಶ್ಶಬ್ದ. ಗಂಭೀರವಾದ ನಿಶ್ಶಬ್ದ.

ಅನ್ನೆ ಆಕಾಶದತ್ತ ನೋಡಿದಳು. ಅದರ ಹಿಂದೆ ಅವಳ ತಂದೆತಾಯಿಯರು ವಾಸಿಸುವ ಸ್ವರ್ಗ. ನಕ್ಷತ್ರಗಳ ಮಧ್ಯದಿಂದ ಅವರು ಅವಳನ್ನು ನೋಡುತ್ತಿರಬಹುದು. ಏಕಾಂಗಿನಿಯಾದ ಅವಳನ್ನು ಅವರು ಕೈಚಪ್ಪಾಳೆ ತಟ್ಟಿ ಕರೆಯುತ್ತಿರಬಹುದು.

ಕಿರುದಾರಿಯಿಂದ ಯಾರದೋ ಕಾಲಸಪ್ಪುಳ ಕೇಳಿಸಿತು. ಅವಳು ಆಲಿಸಿದಳು. ಯಾರೋ ಒಬ್ಬ ವ್ಯಕ್ತಿ ಮುಂದೆ ಬರುತ್ತಿದ್ದ. ಅವಳು ಧೈರ್ಯದಿಂದ ಕೇಳಿದಳು:

"ಯಾರದು?"

"ನಾನು" ಆ ತೆಳ್ಳಗಿನ ಮನುಷ್ಯ ಅವಳ ಹತ್ತಿರ ಬಂದ. ಅವನು ಕೇಳಿದ:

"ಏನಾದರೂ ಆಹಾರ ತೆಗೆದುಕೊಂಡಿದ್ದೀಯಾ?"

ಅವಳು ಉತ್ತರಿಸಲಿಲ್ಲ. ಅವನು ತಂದ ಸಾಮಾನು ತುಂಬಿದ ಕುಕ್ಕೆಯನ್ನು ಅವಳ ಮುಂದೆ ನೀಡಿದ.

"ಇದರಲ್ಲಿ ಎಲ್ಲಾ ಇದೆ. ಏನಾದರೂ ಸ್ವಲ್ಪ ತಯಾರಿಸಿ ತಿನ್ನು."

ಕುಕ್ಕೆಯನ್ನು ತೆಗೆದುಕೊಂಡು ಅವಳು ಹೇಳಿದಳು:

"ನನ್ಗೆ ಇನ್ನು ಏನೂ ಬೇಡ."

"ನನಗೆ......"

"ಏನೂ ತೆಗೆದುಕೊಳ್ಳಲಿಲ್ಲವೆ?" ಅವಳ ಪ್ರಶ್ನೆಯಲ್ಲಿ ಸ್ವಲ್ಪ ಉತ್ಸಾಹ ಕಂಡಿತು.

"ಸ್ವಲ್ಪ ಗಂಜಿಯುಂಡರೆ......"

"ಹಾಗಿದ್ದರೆ ಗಂಜಿ ತಯಾರಿಸುತ್ತೇನೆ. ಇಲ್ಲಿ ಬಂದು ಕುಳಿತುಕೊಳ್ಳಿ."

"ನನಗಷ್ಟೇ ಅಲ್ಲ."

"ಮತ್ಯಾರಿಗೆ?"

"ನಮಗಿಬ್ಬರಿಗೂ."

"ಹುಂ."

ಸ್ವಲ್ಪ ಮೌನ. ಇಬ್ಬರೂ ತಲೆತಗ್ಗಿಸಿ ನಿಂತರು. ಅವನು ಹೇಳಿದ:

"ನಾನು ಹೋಗಿಬರಲೇ?"

"ಬೇಗ ಬರುವಿರೋ?"

"ಬರುವೆನು."

ಅವನು ಹೋಗಲು ಮುಂದಾದ. ಆದರೆ ಹೋಗಲಿಲ್ಲ. ಅವಳ ಹತ್ತಿರ ನಿಂತುದಾಗಿತ್ತು ಅವನು.

"ಅನ್ನೆ !" ಅವನು ಮೆಲ್ಲಗೆ ಕರೆದ.

"ಆಂ?" ಅವಳು ಮೃದುವಾಗಿ ಹೂಂಗುಟ್ಟಿದಳು.

ದೂರದಿಂದ ಒಂದು ಚೀರಾಟ ಕೇಳಿಸಿತು. ಹಲವು ಕಂಠಗಳಿಂದ ಒಮ್ಮೆಲೇ ಹೊರಟ ಕೂಗಾಗಿತ್ತದು.

"ಏನದು?" ಅವಳು ಗಡಿಬಿಡಿಯಿಂದ ಕೇಳಿದಳು.

"ಪೋಲೀಸ್ !...... ಒಳಗೆ ಹೋಗಿ ಬಾಗಿಲು ಹಾಕಿಕೊ !"
ಅವನು ಮಿಂಚಿನಂತೆ ಅಗೋಚರನಾದ.

( ೧೯ )

ಅಂದು ಮಧ್ಯರಾತ್ರಿಯ ಕೋಳಿ ಕೂಗಲಿಲ್ಲ. ಆ ಭೀಕರ ನಿಶ್ಶಬ್ದವನ್ನು ಒಡೆಯಲು ಕೋಳಿಗಳಿಗೂ ಧೈರ್ಯ ಬರಲಿಲ್ಲ.

ಮೇಸ್ತ್ರಿಯನ್ನು, ಅವನ ಮನೆಯೊಳಗೆ ನುಗ್ಗಿ ಹೊಡೆದು ಪ್ರಜ್ಞಾಹೀನನಾಗಿಸಿದರು. ರೋಡಿನಲ್ಲಿ ಮೋಟಾರ್‌ಸೈಕಲಿನಲ್ಲಿ ಹೋಗುತ್ತಿದ್ದ ಮಾಲಿಕನನ್ನು ಕಲ್ಲಿನಿಂದ ಹೊಡೆದು ಉರುಳಿಸಿದರು; ಕೈ ಮುರಿಸಿದರು. ಮಾಲಿಕವರ್ಗದ ಬುಡ ಅಲುಗಾಡಲ್ಪಟ್ಟಿತು. ಅಧಿಕಾರಶಕ್ತಿ ತಾಂಡವನೃತ್ಯಮಾಡುತ್ತಿತ್ತು.

ಅನ್ನೆ ಮನೆಯೊಳಗೆ ಹೋಗಿ ಬಾಗಿಲನ್ನು ಎಳೆದು ಗಟ್ಟಿಯಾಗಿ ಕಟ್ಟಿದಳು. ನೆಲದಲ್ಲಿ ಚಾಪೆ ಹಾಕಿ, ಕತ್ತಲೆಯತ್ತ ಕಣ್ಣಾಡಿಸುತ್ತಾ ಅವಳು ಮಲಗಿದಳು. ಕಾರಿರುಳ ನಿಶ್ಶಬ್ದತೆಯಲ್ಲಿ ಪಟ್ಟಣದಲ್ಲಿ ಏನೇನೋ ನಡೆಯುತ್ತಿದೆಯೆಂದು ಅವಳಿಗೆ ತೋರಿತು. ಯಾವುದೇ ಸಮಯದಲ್ಲಿ ಆ ಚಿಕ್ಕ ಮನೆ ಆಕ್ರಮಿಸಲ್ಪಡುವುದೆಂದು ಅವಳು ಊಹಿಸಿದಳು.

ಏಕಾಂಗಿನಿಯಾಗಿದ್ದಾಳೆ ಅವಳು. ದಾರಿದ್ರ್ಯ ಮತ್ತು ಕಷ್ಟಕಾರ್ಪಣ್ಯಗಳ ಮಧ್ಯದಲ್ಲಾಗಿತ್ತು ಅವಳು ಹುಟ್ಟಿದ್ದು. ಆದರೆ ಅವುಗಳೊಂದನ್ನೂ ಅರಿಯದೆ ತಂದೆ ತಾಯಿಯರ ಮತ್ತು ಸಹೋದರರ ಲಾಲನೆಯಲ್ಲಿ ಅವಳು ಬೆಳೆದಿದ್ದಳು. ಶೈಶವ ಮತ್ತು ಬಾಲ್ಯಗಳು ಅವಳ ಜೀವನದ ಸುವರ್ಣದಶಕಗಳಾಗಿದ್ದುವು. ಯೌವನ ಅವಳನ್ನು ಆಲಿಂಗಿಸಿದಲ್ಲಿಂದ ಮೊದಲ್ಗೊಂಡು ಆಪತ್ತುಗಳು ಅವಳನ್ನು ದುರುಗುಟ್ಟಿ ನೋಡಲು ಪ್ರಾರಂಭಿಸಿದುವು. ಒಂದರ ನಂತರ ಒಂದರಂತೆ ಆಪತ್ತುಗಳು ಅವಳನ್ನು ಪೀಡಿಸುತ್ತಿದ್ದುವು.

ತಂದೆಗೆ ಗಂಜಿ ಮಾಡಿಕೊಡಲು ಸ್ವರ್ಗಕ್ಕೆ ಹೋಗಬೇಕೆಂದು ಹಠಹಿಡಿದ ಅವಳ ತಾಯಿಯ ಭ್ರಾಂತನ್ನು ಅವಳು ಮನದಟ್ಟು ಮಾಡಿಕೊಂಡಿದ್ದಳು. ಆದರೆ ಫ್ಯಾಕ್ಟರಿಗಳಲ್ಲಿ ಗಲಾಟೆ ಮಾಡಿ, ಮೇಸ್ತ್ರಿಯನ್ನೂ ಮಾಲಿಕನನ್ನೂ ಮರ್ದಿಸಲು ಪ್ರಯತ್ನಿಸುತ್ತಿದ್ದ ಅವಳ ಸಹೋದರರ ಬುದ್ಧಿಯನ್ನು. ಅವಳಿಗೆ ಅರ್ಥಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಅದನ್ನು ಅರ್ಥಮಾಡಿಕೊಳ್ಳಬೇಕೆಂಬ ಉದ್ದೇಶವೂ ಅವಳಿಗೆ ಇದ್ದಂತಿರಲಿಲ್ಲ. ಅವರು ಏನು ಬೇಕಾದರೂ ಮಾಡಿಕೊಳ್ಳಲಿ. ಅವರಿಗೆ ಆಪತ್ತೇನೂ ಬಾರದೆ ದಿನಾಲೂ ಮನೆಗೆ ಬರಬೇಕೆಂಬುದೇ ಅವಳ ಗ್ರಹಿಕೆಯಾಗಿತ್ತು.

ಆ ತೆಳ್ಳಗಿನ ಮನುಷ್ಯ!—ಅವಳಿಗೆ ಸ್ವಲ್ಪವೂ ಅರ್ಥಮಾಡಿಕೊಳ್ಳಲು ಸಾಧ್ಯವಾಗದ ವ್ಯಕ್ತಿಯವನು. ಅವನ ಎಲ್ಲಿಂದ ಬಂದ? ಏಕೆ ಬಂದ? ಅವನಿಗೆ ತಂದೆ ತಾಯಿಯರಿಲ್ಲವೆ? ಸಹೋದರಿಯರಿಲ್ಲವೆ? ಬುದ್ಧಿ ಭ್ರಮೆಗೊಂಡ ಅವಳ ತಾಯಿ ಒಮ್ಮೆ ಅವನನ್ನು ದುರುಗುಟ್ಟಿ ನೋಡಿಕೊಂಡು ಹೇಳಿದ್ದು ಅವಳಿಗೆ ನೆನಪಾಯಿತು—"ಕೊಲ್ಲಿಸಲು ತಿರುಗಾಡುವವ" ಎಂದು.

ಅದು ಸರಿಯೋ? ಅವನು ಕೊಲ್ಲಿಸಲು ತಿರುಗಾಡುವುದು ಸರಿಯೆ? ಅವಳ ಅಣ್ಣಂದಿರನ್ನು ಅವನು ಕೊಲ್ಲಿಸಬಹುದೊ? ಅವಳನ್ನೂ ಅವನು ಕೊಲ್ಲಿಸುವನೊ? ಹಾಗೆ ಕೊಲ್ಲಿಸುವುದರಿಂದ ಅವನಿಗೆ ಸಿಗುವುದಾವರೂ ಏನು?...... ಏನೊ! ಅವಳಿಗೊಂದೂ ಅರಿಯದು.

ಆ ತೆಳ್ಳಗಿನ ದೇಹವೂ ವಿಶಾಲವಾದ ಹಣೆಯೂ ಹೊಳೆಯುವ ಕಣ್ಣುಗಳೂ! ಆ ಹೊಳೆಯುವ ಕಣ್ಣುಗಳಲ್ಲಿ ಶೋಕಪೂರಿತವಾದ ಸ್ನೇಹದ ಕಣ್ಣೀರ ಹನಿಗಳನ್ನು ಅವಳು ಕಾಣುತ್ತಿದ್ದಳು. ಚಲಿಸುವ ಒಂದು ಇರುವೆಯನ್ನಾದರೂ ನೋಯಿಸಲು ಅವನಿಗೆ ಮನಸ್ಸು ಬಾರದೆಂದು ಅವಳಿಗೆ ಗೊತ್ತು.

ಅಂಗಳದಲ್ಲಿ ಯಾರೋ ಮೆಲ್ಲಗೆ ಕೆಮ್ಮಿದರು. ಅನ್ನೆ ಅದನ್ನು ಆಲಿಸಿದಳು. ಚಾವಡಿಯಲ್ಲಿ ಕಾಲಸಪ್ಪಳ ಕೇಳಿಸಿತು. ಅವಳು ಫಕ್ಕನೆ ಎದ್ದು ಕೇಳಿದಳು:

"ಯಾರದು?"

"ನಾನು. ಬಾಗಿಲು ತೆರೆ."

"ಕಿರಿಯಣ್ಣನೊ?"

"ಹುಂ."

ಅವಳು ಬಾಗಿಲು ತೆರೆದಳು. ಚಾವಡಿಯಲ್ಲಿ ರೋಕಿ ತಲೆಬಾಗಿ ನಿಂತಿದ್ದ. ದೀಪದ ಮಂದ ಬೆಳಕಿಗೆ ಇದು ಕಾಣಬಹುದಾಗಿತ್ತು. ಅವಳು ಕೇಳಿದಳು:

"ಅಣ್ಣ, ಯಾಕೆ ಈಗ ಇಲ್ಲಿಗೆ ಬಂದೆ? ಪೋಲೀಸರು ಹುಚ್ಚುನಾಯಿಗಳಂತೆ ತಿರುಗಾಡುತ್ತಿದ್ದಾರೆ" ಅವಳ ಕಣ್ಣುಗಳು ನೀರಿನಿಂದ ತುಂಬಿತ್ತು. ಅವಳು ಅಳುತ್ತಾ ಹೇಳಿದಳು:

"ಸಣ್ಣಣ್ಣಾ, ನೀನಿಲ್ಲಿ ನಿಲ್ಲಬೇಡ, ಹೋಗು."

"ನೀನಿಲ್ಲಿ...... ನೀನಿಲ್ಲಿ...... ಒಬ್ಬಳೆ......" ಅವನಿಗೆ ಉಸಿರುಕಟ್ಟಿದಂತಾಯಿತು.

"ನನಗೆ ದೇವರಿದ್ದಾರೆ ಕಿರಿಯಣ್ಣಾ, ನೀನು ಹೋಗು."

"ನೀನಿಂದು ಏನಾದರೂ ಆಹಾರ ತೆಗೆದುಕೊಂಡಿದ್ದೀಯಾ?"

"ನಿನಗೇನಾದರೂ ಬೇಕಾ ಅಣ್ಣಾ?"

"ಅಕ್ಕಿ ಇದೆಯೋ?"

"ಹುಂ. ಗಂಜಿ ಮಾಡಲೊ?"

"ಅಕ್ಕಿ ಎಲ್ಲಿಂದ ಬಂತು?"

"ತಂದುಕೊಟ್ಟದ್ದು."

"ಯಾರು?"

"ಅವರು...... ಆ......"

"ಗಾಳಿಯೊ?"

"ಹುಂ."

ರೋಕಿ ಮೌನವಾಗಿ ನಿಂತ. ಅನ್ನೆ ಗಟ್ಟಿ ಮನಸ್ಸು ಮಾಡಿ ಹೇಳಿದಳು:

"ಹೋಗು ಕಿರಿಯಣ್ಣಾ, ನೀನಿಲ್ಲಿ ನಿಲ್ಲಬೇಡ."

"ಪೋಲೀಸರು ಇಲ್ಲಿ ಬಂದರೊ?"

"ಇಲ್ಲ. ಬರುವರು. ಬಂದರೆ...... ಅಣ್ಣಾ, ನೀನಿಲ್ಲಿ ನಿಲ್ಲಬೇಡ, ಹೋಗು" ಅವಳು ಗೋಳೋ ಎಂದು ಅತ್ತಳು.

ಕಿರುದಾರಿಯಿಂದ ಕಾಲಸಪ್ಪಳ ಕೇಳಿಸಿತು. ಅವಳು ಗಡಿಬಿಡಿಯಿಂದ ಹೇಳಿದಳು:

"ಅವರು ಬಂದರು...... ಹೋಗು, ನನ್ನ ಕಿರಿಯಣ್ಣಾ ಹೋಗು."

ರೋಕಿ ಅಂಗಳಕ್ಕಿಳಿದು ಓಡಲು ಭಾವಿಸಿದ. ಆ ತೆಳ್ಳಗಿನ ಮನುಷ್ಯ ಓತ್ತಿಲಿನ ಬೇಲಿ ದಾಟಿ ಅಂಗಳಕ್ಕೆ ಬಂದ. ಅವನು ಕೇಳಿದ:

"ರೋಕಿಯೊ ಅದು?"

"ಹುಂ."

ಅವನು ರೋಕಿಯ ಹತ್ತಿರ ಬಂದು ಅವನ ಕೈಹಿಡಿದುಕೊಂಡು, ಅಧಿಕಾರವಾಣಿಯಿಂದ ಅನ್ನೆಗೆ ಹೇಳಿದ:

"ಒಳಗೆ ಹೋಗಿ ಬಾಗಿಲು ಹಾಕು."

"ಬಾ" ಅವನು ರೋಕಿಯನ್ನು ಎಳೆದುಕೊಂಡು ನಡೆದ. ಬೇಲಿಯ ಬಾಗಿಲು ದಾಟಿ ಕಿರುದಾರಿಗಿಳಿದರು. ಅವರು ಅಲ್ಲಿಂದ ಕೂಡಲೇ ಕಣ್ಮರೆಯಾದರು.

ಬಹಳವಾಗಿ ಆಲೋಚನೆ ಮಾಡಿ ಅವಳು ಒಳಗೆ ಹೋಗಿ ಬಾಗಿಲು ಹಾಕಿಕೊಂಡಳು. ಆಮೇಲೆ ಅವಳು ಚಾಪೆಯ ಮೇಲೆ ಮಲಗಿಕೊಂಡಳು. ಆ ತೆಳ್ಳಗಿನ ಮನುಷ್ಯನನ್ನು ಅರ್ಥಮಾಡಿಕೊಳ್ಳಲು ಶ್ರಮಿಸುವುದಾಗಿತ್ತು ಅವಳಿಗೆ.

ಎಂಥ ಮನುಷ್ಯ! ಅವನ ಪ್ರತಿಯೊಂದು ಮಾತೂ ಚಲನೆಯೂ ಅರ್ಥಗರ್ಭಿತವಾಗಿದೆ. ಸಮುದ್ದೇಶಪೂರಿತವಾಗಿದೆ. ಹೊಳೆಯುವ ಆ ಕಣ್ಣುಗಳಿಂದ ಕೆಲವೊಮ್ಮೆ ಬೆಂಕಿಯ ಕಿಡಿಗಳು ಹೊರಬೀಳುವುವು. ಕೆಲವೊಮ್ಮೆ ಕನಿಕರದ, ಸ್ನೇಹದ ಕಣ್ಣೀರಿನಿಂದ ಒದ್ದೆಯಾಗುತ್ತಿದ್ದುವು ಆ ಕಣ್ಣುಗಳು. ಹತ್ತಿರದಿಂದ ನೋಡಿದರೆ ಅವನೊಬ್ಬ ಆಡಿನ ಮರಿಯಂತೆ. ದೂರದಿಂದ ನೋಡಿದರೆ ಸಿಂಹದ ಮರಿಯಂತೆ ರೂಪಾಂತರಗೊಳ್ಳುವುದು ಕಾಣಬಹುದಿತ್ತು.

"ಕೊಲ್ಲಿಸಲು ತಿರುಗಾಡುವವನೆ ಅವನು?" ಅನ್ನೆ ತನ್ನಲ್ಲೇ ಪ್ರಶ್ನಿಸಿದಳು.

"ಆಗಿದ್ದರೆ......?"—

ಆ ಕಣ್ಣುಗಳಲ್ಲಿ ಸ್ನೇಹದ ಜಲಸ್ಫುರಣವುಂಟಾಗುವುದೇಕೆ? ತಂದೆಯ ಮರಣದ ತರುವಾಯ, ಅಣ್ಣಂದಿರು ಜೈಲಿನಲ್ಲಿರುವಾಗ, ಅವಳಿಗೂ ಅವಳ ತಾಯಿಗೂ ದಿನಾಲೂ ಖರ್ಚಿಗೆ ತಂದುಕೊಡುತ್ತಿದ್ದನೇಕೆ? ತಾಯಿಯನ್ನು ಹುಡುಕಿಕೊಂಡು ಆ ಅರ್ಧರಾತ್ರಿಯಲ್ಲಿ ಅವನು ಅವಳೊಂದಿಗೆ ಹೋದುದೇಕೆ? ಮನೆಗೆ ಬೆಂಕಿ ಹಚ್ಚಿದ್ದಾಗ ಅವನು ಒಬ್ಬಂಟಿಗನಾಗಿ ಐದಾರು ಮಂದಿಯನ್ನು ಎದುರಿಸಿದನೇಕೆ? ಆ ನಿಸ್ಸಹಾಯಕ ಸ್ಥಿತಿಯಲ್ಲೂ ಅವನೇಕೆ ಅವಳಿಗೆ ಅಕ್ಕಿ ಸಾಮಾನುಗಳನ್ನು ತಂದುಕೊಡುತ್ತಿದ್ದ?

"ಕೊಲ್ಲಿಸಲು ನಡೆಯುತ್ತಿರುವವನೇ ಅವನು?" ಅವಳು ಮತ್ತೂ ಅದೇ ಪ್ರಶ್ನೆಯನ್ನು ಕೇಳಿಕೊಂಡಳು.

ಹೃದಯಾಂತರಾಳದಲ್ಲಿ ಮಾಧುರ್ಯವುಳ್ಳ ಒಂದು ವೇದನೆ! ಅದೇಕೆಂದು ಅವಳಿಗರಿಯದು. ಅದು ವೇದನೆಯಾದರೂ ಕೋಮಲತೆಯಿಂದ ಕೂಡಿದ್ದಾಗಿತ್ತು.

ಅವಳಿಗನಿಸಿತು, ಅವನು ಮತ್ತೆ ಬರಬಹುದೆಂದು. ಅವಳು ಎದ್ದು ಬಂದು ಕದ ತೆರೆದಳು. ಅಂಗಳಕ್ಕಿಳಿದು ನಿಂತಳು.

ಕಿರುದಾರಿಯಲ್ಲಿ ನಡೆಯುವ ಸಪ್ಪಳ! ಆ ಮೃದುವಾದ ವೇದನೆ ಅವಳ ಇಡೀ ದೇಹವನ್ನು ಆವರಿಸಿತು. ಅವಳಿಗೆ ರೋಮಾಂಚನವಾಯಿತು.

"ಒಳಗೆ ಹೋಗಲಿಲ್ಲವೆ?" ಅದೊಂದು ಅಧಿಕಾರವಾಣಿಯ ಪ್ರಶ್ನೆಯಾಗಿತ್ತು.

ತೆಳ್ಳಗಿನ ಮನುಷ್ಯ ಹತ್ತಿರ ಬಂದ. ಅವನು ಅದೇ ಪ್ರಶ್ನೆಯನ್ನು ಮತ್ತೊಮ್ಮೆ ಕೇಳಿದ:

"ಒಳಗೆ ಹೋಗಲಿಲ್ಲವೇನು?"

"ಒಳಗೆ ಹೋಗಿದ್ದೆ. ಬಾಗಿಲು ಹಾಕಿಯೂ ಇದ್ದೆ" ಅವಳು ನಿಧಾನವಾಗಿ ಹೇಳಿದಳು.

"ಮತ್ತೇನಾಯ್ತು?"

"ಆಗನಿಸಿತು, ನೀವು ಬರಬಹುದೆಂದು" ಅವಳು ತಲೆಬಾಗಿದಳು.

ದೀರ್ಘವಾದ ಒಂದು ಮೌನ.

"ಅನ್ನೇ!"

"ಹುಂ."

ಮತ್ತೂ ದೀರ್ಘವಾದ ಮೌನ.

"ಅನ್ನೇ!"

"ಒಳಗೆ ಹೋಗಿ ಬಾಗಿಲು ಹಾಕು."

"ಹುಂ."

ಅವನು ಹಿತ್ತಿಲನ್ನು ದಾಟಿ ಕಿರುದಾರಿಗಿಳಿದ. ಅವನು ನಿಧಾನವಾಗಿ ನಡೆದ. ಅವಳು ಮನೆಯೊಳಗೆ ಹೋಗಿ ಬಾಗಿಲು ಹಾಕಿಕೊಂಡಳು.

## (೨೦)

ಮರ್ದನ ಮತ್ತು ಶೋಷಣೆಗಳಿಗೆ ವಿಧೇಯರಾಗಿ ಕೈಂಕರ್ಯ ಕೈಗೊಂಡಿದ್ದ ಒಂದು ಜನವಿಭಾಗ ಜಾಗ್ರತಗೊಳ್ಳುತ್ತಿದೆ, ಮುಂದೆ ಬರುತ್ತಿದೆ.

ದಾಸ್ಯಶೃಂಖಲೆಯನ್ನು ಎಳೆದು ತುಂಡರಿಸುವಾಗ ಕೈಕಾಲುಗಳಿಗೆ ಗಾಯಗಳಾಗ ಬಹುದು. ಆ ರೀತಿಯ ಗಾಯಗಳಾಗುವುದು ಅನಿವಾರ್ಯ. ಆಲೋಚಿಸುವುದಕ್ಕೂ ವಿಮರ್ಶಿಸುವುದಕ್ಕೂ ಸಮಯವಿಲ್ಲ. ಎಚ್ಚರಗೊಳ್ಳುವುದಕ್ಕೆ ಮತ್ತು ಜಾಗ್ರತ ಗೊಳ್ಳುವುದಕ್ಕೆ ಉಂಟಾದ ಪ್ರತಿಬಂಧಗಳನ್ನು ಹೊಡೆದಿಕ್ಕಿ ಮೇಲೆದ್ದುಬಂದ ಒಂದು ಜಾಗೃತಿಯಾಗಿತ್ತದು !

ಎಂದಿನಂತೆ ಅಂದು ಕೂಡಾ ಪಟ್ಟಣದ ಪರಿಸರಗಳಿಂದ ಕಾರ್ಮಿಕಶಕ್ತಿ ತೊರೆ ಗಳಾಗಿ, ನದಿಗಳಾಗಿ ಪಟ್ಟಣದ ಕಡೆಗೆ ಹರಿಯತೊಡಗಿತು. ಮೊದಮೊದಲು ನಿಶ್ಶಬ್ದ ವಾಗಿಯೂ ಕ್ರಮೇಣ ಪಿಸುಮಾತುಗಳಿಂದೊಡಗೂಡಿ ಹರಿಯತೊಡಗಿದ್ದ ಆ ತೊರೆ ಗಳು ಕೊನೆಗೆ ಶಬ್ದಾತಿರೇಕದಿಂದೊಡಗೂಡಿ ಭೋರ್ಗರೆದು ಹರಿಯತೊಡಗಿತು. ಸಹನಾ ತೀತವಾದ ಉಗ್ರ ಪ್ರತಿಜ್ಞೆಗಳು, ರೋಷಪೂರಿತವಾದ ಕೂಗುಗಳು, ಸ್ವಾತಂತ್ರ್ಯ ತೃಷ್ಣೆಯ ಘೋಷಗಳು—ಈ ರೀತಿಯಲ್ಲಿ ಹರಿದುಕೊಂಡು ಆ ಮಹಾ ಪ್ರವಾಹ ಅಸಹನೆ, ರೋಷ ಮತ್ತು ಪ್ರತಿಜ್ಞೆಗಳೊಡನೆ ಫ್ಯಾಕ್ಟರಿ ಗೇಟುಗಳ ಒಳ ಹೊಕ್ಕು ಮಗ್ಗ ಗಳ ಎಡೆಗಳಲ್ಲೆಲ್ಲಾ ಹಬ್ಬಿ ವ್ಯಾಪಿಸಿತು. ಮಾಲಿಕರು ಕೋಪೋದ್ರಿಕ್ತರಾಗಿದ್ದರು. ಸಿಬ್ಬಂದಿಗಳು ಭಯಗ್ರಸ್ಥರಾದರು.

ಅಂದು ಹಗಲಿಡೀ ಅನ್ನೆಯು ಮನಸ್ಸಿಗೆ ನೆಮ್ಮದಿಯಿಲ್ಲದೆ ಕಳೆದಳು. ಇರುಳಾದ ಮೇಲೆ ಆ ತೆಳ್ಳಗಿನ ಮನುಷ್ಯನೋ ಅವಳ ಕಿರಿಯ ಅಣ್ಣನೋ ಬರಬಹುದೆಂದೂ, ಅವರಿಂದ ವಿವರಗಳನ್ನು ತಿಳಿಯಬಹುದೆಂದೂ ತವಕದಿಂದ ಅವಳು ಕಾದಿದ್ದಳು. ವೇಲಾಯುಧನ ತಾಯಿ ಬಂದು ಅವಳೊಡನೆ ಕೇಳಿದಳು:

"ಮಗಳೇ, ನೀನು ಹೀಗೇಕೆ ಕುಳಿತಿದ್ದೀ?"

"ನಾನು ಮತ್ತೇನು ಮಾಡಬೇಕು?"

"ಅಕ್ಕಿಯಿದೆಯೊ?"

"ಇದೆ."

"ಹಾಗಿದ್ದರೆ ಗಂಜಿ ಮಾಡಿ ಊಟ ಮಾಡು."

ಅನ್ನೆ ಗಂಜಿ ತಯಾರಿಸಿ ಉಂಡಳು. ಸಂಜೆಯಾದೊಡನೆ ವೇಲಾಯುಧನ ತಾಯಿ ಮತ್ತೆ ಬಂದಳು. ಅವಳು ಹೇಳಿದಳು:

"ಮಗಳೇ, ನೀನೊಬ್ಬಳೇ ಇಲ್ಲಿ ಮಲಗಬೇಡ. ನೀನು ನನ್ನ ಮನೆಗೆ ಬಾ. ಇಲ್ಲವೇ ನಾನೇ ಇಲ್ಲಿ ಬರುವೆನು."

"ನನಗೆ ದೇವರಿದ್ದಾರೆ."

"ನಿನಗೆ ದೇವರಿದ್ದಾರೆಂದು ಕುಳಿತರೆ......"

"ಕುಳಿತರೇನು?"

"ಯಾರಾದರೂ ಒಳಗೆ ಬಂದರೆ......"

"ಬಂದರೇನು?"

"ಬಂದು ನಿನ್ನನ್ನು ಹಿಡಿದರೆ......"

"ನನ್ನನ್ನೇಕೆ ಬಂದು ಹಿಡಿಯೋದು? ನಾನೇನು ಯಾರಿಗಾದರೂ ಹೊಡೆದಿರುವೆನೊ? ಯಾರದ್ದಾದರೂ ಸ್ವತ್ತನ್ನು ಅಪಹರಿಸಿರುವೆನೊ?"

"ಪ್ರಾಯಕ್ಕೆ ಬಂದ ಹುಡುಗಿಯನ್ನು ಬಂದು ಹಿಡಿಯೋದು......"

ಅನ್ನೆಯ ಮುಖದಲ್ಲಿ ದ್ವೇಷದ ಕಿಡಿ ಕಾರಿತು. ಅವಳು ಗಟ್ಟಿ ಮನಸ್ಸಿನಿಂದ ಹೇಳಿದಳು:

"ಹಾಗೆ ಬಂದು ಹಿಡಿಯುವಾಗ ತಿಳಿಯುವುದು, ಯಾರನ್ನು ಹಿಡಿಯುತ್ತಿರುವುದೆಂದು, ಅಲ್ಲದೆ ಹಿಡಿವರೇನಾಗುತ್ತದೆಂದು."

ವೇಲಾಯುಧನ ತಾಯಿ ಮತ್ತೇನೂ ಹೇಳಲಿಲ್ಲ, ತನ್ನ ಭಗವತಿಯನ್ನು ಪ್ರಾರ್ಥಿಸಿಕೊಂಡು ಅವಳಲ್ಲಿಂದ ಹೊರಟುಹೋದಳು.

ರಾತ್ರಿಯಾಯಿತು. ಗಂಟೆ ಹತ್ತು ಕಳೆಯಿತು. ಅನ್ನೆ ಒಳಗೆ ಹೋಗಿ ಬಾಗಿಲನ್ನು ಎಳೆದು ಕಟ್ಟಿ, ಮಲಗಿದಳು. ಅವಳು ನಿದ್ರಿಸಿರಲಿಲ್ಲ.

ಅಂಗಳದಲ್ಲಿ ಯಾರೋ ನಡೆಯುವ ಸದ್ದಾಯಿತು. ಅವಳು ಕಿವಿಗೊಟ್ಟು ಕೇಳಿದಳು. ಒಂದಕ್ಕಿಂತ ಹೆಚ್ಚು ಜನರು ಅಂಗಳದಲ್ಲಿ ಇದ್ದಾರೆ ಎಂಬುದು ಅವಳಿಗರಿಯಿತು. ಅವಳು ಎದ್ದು ಬಂದು ಬಾಗಿಲ ಹತ್ತಿರ ಕಿವಿಗೊಟ್ಟು ಕುಳಿತಳು.

ಯಾರೋ ಮನೆಯ ಸುತ್ತಾ ನಡೆಯುತ್ತಿದ್ದರು. ಏನೋ ಕೇಳಬೇಕೆಂದು ಅವಳು ಭಾವಿಸಿದಳು. ಮಾತುಗಳು ಹೊರಡಲಿಲ್ಲ.

"ಏಯ್! ಒಳಗೆ ಯಾರಿದ್ದಾರೆ?" ಅದೊಂದು ಅಧಿಕಾರವಾಣಿಯಾಗಿತ್ತು. ಆ ಧ್ವನಿಯು ಅವಳಿಗೆ ಪರಿಚಯದ್ದಾಗಿರಲಿಲ್ಲ.

"ಯಾರದು?" ಅನ್ನೆ ಮೆಲ್ಲಗೆ ಕೇಳಿದಳು.

"ಬಾಗಿಲು ತೆರೆ" ಅದೊಂದು ಆಜ್ಞೆಯಾಗಿತ್ತು.

ಅನ್ನೆ ಬೆಂಕಿಪೊಟ್ಟಣ ಹಚ್ಚಿ ದೀಪ ಉರಿಸಿದಳು. ಅವಳು ಬಾಗಿಲು ತೆರೆದು, ಕೈಯಲ್ಲಿ ದೀಪ ಹಿಡಿದುಕೊಂಡು ಚಾವಡಿಗೆ ಬಂದು ನಿಂತಳು. ಅವಳಿಗೆ ಆಶ್ಚರ್ಯವಾಯಿತು! ಯಮದೂತರಂತೆ ನಾಲ್ಕು ಜನ ಪೋಲೀಸರು ಅಂಗಳದಲ್ಲಿ ನಿಂತಿದ್ದಾರೆ.

ಒಬ್ಬ ಥಕ್ಕನೆ ಚಾವಡಿಗೆ ಬಂದು ಅವಳ ಕೈಯಲ್ಲಿದ್ದ ದೀಪವನ್ನು ಇಸಕೊಂಡು ಒಳಗೆ ಹೋದ. ಒಳಗೆಲ್ಲಾ ಹುಡುಕಿ, ಹಿಂತಿರುಗಿದ. ಸಿಟ್ಟುಗೊಂಡು ಅವಳಲ್ಲಿ ಕೇಳಿದ:

"ರೋಕಿ ಎಲ್ಲಿದ್ದಾನೆ?"

"ಅವನು ಇಲ್ಲಿಲ್ಲ. ಇಲ್ಲಿಗೆ ಬರಲೂ ಇಲ್ಲ" ಅವಳು ಧೈರ್ಯದಿಂದ ಉತ್ತರ ಕೊಟ್ಟಳು.

"ಅವನು ಎಲ್ಲಿದ್ದಾನೆಂದು ನಿನ್ನನ್ನು ಕೇಳಿದ್ದು?" ಅವನ ಧ್ವನಿ ಏರಿತು.

"ನಾನು ಹೇಗೆ ತಿಳಿಯೋದು?" ಅವಳು ಅಳುಕಿಲ್ಲದೆ ಹೇಳಿದಳು.

"ನಿನಗೆ ಗೊತ್ತಿಲ್ಲವೇ?" ಅವನ ಮುಖದಲ್ಲಿ ಕ್ರೌರ್ಯ ಕಾಣಿಸಿತು.

"ನನಗೆ ಗೊತ್ತಿಲ್ಲ."

"ಸತ್ಯ ಹೇಳೋದು ಒಳ್ಳೆಯದು."

"ನಾನು ಸತ್ಯವನ್ನೇ ಹೇಳಿದ್ದು."

ಅಂಗಳದಲ್ಲಿ ನಿಂತಿದ್ದ ಪೋಲೀಸರು ಚಾವಡಿಗೆ ಬಂದರು. ಅವರಲ್ಲೊಬ್ಬ ಹೇಳಿದ:

"ಚಲೋ ಹುಡುಗಿ! ಅವಳನ್ನು ಹೆದರಿಸೋದು ಬೇಡ...... ನಿನ್ನ ಹೆಸರೇನು?"

"ಅನ್ನೆ."

"ಒಳ್ಳೆಯ ಹೆಸರು" ಅವನು ಅವಳ ಕೈಯನ್ನು ಹಿಡಿಯಲು ಮುಂದಾದ. ಅವಳು ಫಕ್ಕನೆ ಹಿಂದಕ್ಕೆ ಸರಿದಳು.

"ನಾನಿಲ್ಲಿದ್ದೇನೆ" ಕಿರುದಾರಿಯಿಂದ ಯಾರೊ ಕೂಗಿದರು.

"ಯಾರೋ ಅದು?" ಪೋಲೀಸರೆಲ್ಲಾ ಒಟ್ಟಿಗೆ ಕೇಳಿದರು.

"ನಾನು—ರೋಕಿ."

"ಹಿಡಿದುಕೊ ಅವನನ್ನು!" ಅವರು ಕಿರುದಾರಿಗೆ ಜಿಗಿದು ಓಡಿದರು.

"ಹಿಡಿಯಲು ಸಾಧ್ಯವಾದರೆ ಹಿಡಿದುಕೊಳ್ಳಿ!" ಕಿರುದಾರಿಯಲ್ಲಿ ನಿಂತಿದ್ದ ವ್ಯಕ್ತಿ ವಾಯುವೇಗದಲ್ಲಿ ಓಡಿದ.

ಪೋಲೀಸರು ಹಿಂದಿನಿಂದ ಓಡಿದರು.

"ದೇವರೇ!" ಅನ್ನೆ ಆಕಾಶದತ್ತ ಕೈಯೆತ್ತಿದಳು. ಅವಳು ಸ್ವಲ್ಪ ಹೊತ್ತು ಹಾಗೇ ನಿಂತುಬಿಟ್ಟಳು. ಇದಾಗಿ ಹೊತ್ತು ಬಹಳಷ್ಟು ಕಳೆಯಲಿಲ್ಲ.

"ಇದೇನು?...... ನನ್ನ ತಂಗೀ!" ಎಂದು ಗದ್ಗದ ಸ್ವರದಿಂದ ಕೇಳಿದ ರೋಕಿ, ಹೊಸ್ತಿಲು ದಾಟಿ ಬಂದ. ಬಂದುದು ಅವಳ ಅಣ್ಣನೆಂದು ನಂಬಲು ಅವಳಿಗೆ ಸಾಧ್ಯವಾಗಲಿಲ್ಲ. ಅವನು ಹತ್ತಿರ ಬಂದು ಮುಟ್ಟಿದಾಗ ಅವಳು ಕೇಳಿದಳು:

"ಯಾರದು?"

"ನಾನು ತಂಗಿ—ನಾನು."

"ಸಣ್ಣಣ್ಣನೋ?"

"ಹುಂ."

"ಪೋಲೀಸರು ಯಾರೂ ನಿನ್ನನ್ನು ಹಿಡಿಯಲಿಲ್ಲವೆ?"

"ಯಾವ ಪೋಲೀಸರು? ಅವರು ಇಲ್ಲಿಗೆ ಬಂದಿದ್ದರೊ? ನನ್ನನ್ನು ಹಿಡಿಯೋದಕ್ಕೆ ಬಂದಿದ್ದರೊ?"

"ಹಾಗಿದ್ದರೆ ನಿನಗೊಂದೂ ಗೊತ್ತಿಲ್ಲವೆ?"

"ನನಗೆ ಹೇಗೆ ಗೊತ್ತು, ನಾನು ಈಗ ತಾನೆ ಬರಲಿಲ್ಲವೆ?"

"ಕಿರುದಾರಿಯಿಂದ, ನಾನಿಲ್ಲಿದ್ದೇನೆಂದು ಕೂಗಿ ಹೇಳಿದ್ದು ಯಾರು?"

"ಆ !"

"ನಾನಿಲ್ಲಿದ್ದೇನೆಂದು ಕೂಗಿ ಹೇಳಿ ಓಡಿದ ಸದ್ದು ನಾನು ಕೇಳಿದೆನಲ್ಲಾ?"

"ನಿನಗೆ ಕನಸು ಕಂಡದ್ದಾಗಿರಬೇಕು."

"ಹಾಗಿದ್ದರೆ ಮತ್ತೆ ಯಾರು ಹಾಗೆ ಹೇಳಿಕೊಂಡು ಓಡಿದ್ದು?"

"ನಿನಗೆ ಸುಮ್ಮನೆ ಹಾಗೆ ಅನಿಸಿದ್ದಾಗಿರಬೇಕು."

"ನನಗೆ ಅನಿಸಿದ್ದಾದರೆ ಪೋಲೀಸರು ಹಿಂದಿನಿಂದಲೇ ಓಡಿದ್ದೇಕೆ?"

"ಪೋಲೀಸರು ಬಂದಿದ್ದರೋ ಇಲ್ಲಿಗೆ?"

"ರೋಕಿ ಎಲ್ಲಿಯೆಂದು ಕೇಳಿಕೊಂಡು ಮುಂದೆ ಬಂದು ನನ್ನನ್ನು ಹಿಡಿಯಲು ಬಂದರು. ಆಗ ಕಿರುದಾರಿಯಿಂದ ಕೂಗಿ ಹೇಳಿದ್ದು ಕೇಳಿಸಿತು."

ಅವನು ಆಲೋಚನಾಪರನಾದ. ಅವನು ಹೇಳಿದ:

"ಗಾಳಿಯಾಗಿರಬೇಕು."

"ಅದು ಸರಿ. ನನಗೂ ಹಾಗೇ ಅನ್ನಿಸುತ್ತದೆ. ಪೋಲೀಸರನ್ನು ಇಲ್ಲಿಂದ ಓಡಿಸಲು ಮಾಡಿದ ಉಪಾಯವಾಗಿರಬೇಕದು."

ಸ್ವಲ್ಪ ದೂರದಿಂದ ಯಾರೋ ನಡೆದುಬರುತ್ತಿರುವ ಸದ್ದು ಕೇಳಿಸಿತು. ಅವಳು ಗಡಿಬಿಡಿಯಿಂದ ಹೇಳಿದಳು:

"ಬರುತ್ತಾರೆ—ಪೋಲೀಸರು ಬರುತ್ತಿದ್ದಾರೆ. ಅಣ್ಣ, ನೀನು ಹೋಗು."

ಅವನು ತಲೆಯೆತ್ತಿ, ಎದೆಯುಬ್ಬಿಸಿ ನಿಂತ. ಹೇಳಿದ:

"ನಾನೆಲ್ಲಿಗೆ ಹೋಗೋದು? ಅವರು ಬಂದು ನನ್ನನ್ನು ಹಿಡಿದುಕೊಂಡು ಹೋಗಲಿ."

ತೆಳ್ಳಗಿನ ಮನುಷ್ಯ ಹಿತ್ತಿಲು ದಾಟಿ ಅಂಗಳಕ್ಕೆ ಬಂದ. ಅನ್ನೆ ನಿಟ್ಟುಸಿರುಬಿಟ್ಟು ಕೇಳಿದಳು:

"ಆಗ ದಾರಿಯಲ್ಲಿ ನಿಂತು ಕೂಗಿ ಹೇಳಿದ್ದು ನೀವಾ?"

"ಹುಂ."

"ಪೋಲೀಸರೆಲ್ಲಿ ಹೋದರು?"

"ಅವರನ್ನು ಕಾಡು ಹತ್ತಿಸಿಬಿಟ್ಟೆ" ಅವನು ರೋಕಿಯ ಕೈಹಿಡಿದು ಕೇಳಿದ:

"ಸದ್ಯದಲ್ಲಿ ಇಲ್ಲಿಗೆ ಬರುವುದು ಬೇಡವೆಂದು ನಾನು ಹೇಳಲಿಲ್ಲವೆ?"

"ನನ್ನ ಸಹೋದರಿ?......" ಅವನ ಕಂಠ ನಡುಗಿತು.

"ಬಾ. ಅವಳಿಗೇನೂ ಆಪತ್ತು ಬರದು" ಅವನು ನಡೆದ. ರೋಕಿ ಅವನನ್ನು ಅನುಸರಿಸಿದ.

ದಾರಿಗಿಳಿದು ತೆಳ್ಳಗಿನ ಮನುಷ್ಯ ಅವಳೊಡನೆ ಹೇಳಿದ:

"ಒಳಗೆ ಹೋಗಿ ಬಾಗಿಲು ಹಾಕಿಕೊ."

"ದೇವರೇ !" ಅವಳು ಆಕಾಶದತ್ತ ಕೈಗಳನ್ನು ಎತ್ತಿದಳು.

## (೨೧)

"ಕಾಲಿನ ಬುಡವಲ್ಲೂ ಅವ್ಯವಸ್ಥೆಯು ಕೋಲಾಹಲಗಳು ಮೊಳಗಿದುವು. ಮುಷ್ಕರಗಳು ವ್ಯಾಪಕವಾದುವು. ಧನಿಕರ ಮತ್ತು ಪೋಲೀಸರ ಬೆದರಿಸುವಿಕೆಗೆ ಬೆಲೆಯಿಲ್ಲವಾಯಿತು."

ಪ್ರವಾಹಕ್ಕೆ ವಿರುದ್ಧಗತಿಯ ಈಜಾಗಿತ್ತದು. ಒಂದು ಕಾಲದಲ್ಲಿ ಅಸಾಧ್ಯವೆಂದು ತೋರಿದ್ದು ಸಾಧ್ಯವೆಂದೆನಿಸಿತು. ಪ್ರವಾಹವೇ ತಿರುಗಿ ಹೊಡೆಯುವುದೋ ಎಂಬ ಸಂಶಯವುಂಟಾಯಿತು. ಪ್ರವಾಹದ ದಿಕ್ಕಿನಲ್ಲಿ ಮಾತ್ರ ಈಜಲು ಗೊತ್ತಿದ್ದವರು ಪ್ರವಾಹಕ್ಕೆದುರಾದ ಈಜುವಿಕೆಯಲ್ಲಿ ದುಃಖ ವ್ಯಕ್ತಪಡಿಸಿದರು. ಹೀಗೆ ಕಾರ್ಮಿಕರ ಸಂಘಟನಾಶಕ್ತಿ ಅನೌಪಚಾರಿಕವಾಗಿ ಅಂಗೀಕರಿಸಲ್ಪಟ್ಟಿತು.

ಕಾಮ್ರೇಡ್ ನೀಲಕಂಠನ್ ಕಾರ್ಮಿಕ ಸಂಘದ ಮುಂದಾಳುವಾದ. ಒಳ್ಳೆಯ ವಿದ್ಯಾವಂತನೂ ಉತ್ತಮ ಕುಲದಲ್ಲಿ ಹುಟ್ಟಿದವನೂ ಆದ ಅವನ ನೇತೃತ್ವದಲ್ಲಿ ರೂಪುಗೊಂಡ ಈ ಸಂಘಟನೆಯನ್ನು ತಾತ್ಸಾರವಾಗಿ ಕಂಡು ತಳ್ಳಿಬಿಡಲು ಧನಿಕರಿಗೂ ಅಧಿಕಾರಿಗಳಿಗೂ ಸಾಧ್ಯವಿಲ್ಲದಾಯಿತು. ಜೈಲಿನಲ್ಲಿದ್ದ ಕೂಲಿಯಾಳುಗಳನ್ನು ಜಾಮೀನಿನ ಮೇಲೆ ಬಿಡಿಸುವುದಕ್ಕೂ ಕೇಸು ವಾದಿಸುವುದಕ್ಕೂ ಬೇಕಾದ ಹೆಜ್ಜೆಗಳನ್ನು ಕೈಗೊಳ್ಳಲಾಗಿತ್ತು.

ಅನ್ನೆ ತನ್ನ ಅಣ್ಣಂದಿರು ಜೈಲಿನಿಂದ ಬೇಗ ಹಿಂತಿರುಗುವಂತೆ ಯಾವಾಗಲೂ ಪ್ರಾರ್ಥಿಸುತ್ತಿದ್ದಳು. ಪ್ರತಿದಿನ ರಾತ್ರಿ ಆ ತೆಳ್ಳಗಿನ ಮನುಷ್ಯ ಅವಳ ಮನೆಗೆ ಬರುತ್ತಿದ್ದ. ಅಕ್ಕಿಯನ್ನೊ ದುಡ್ಡನ್ನೊ ಕೊಟ್ಟು ಹೋಗುತ್ತಿದ್ದ. ಅವನು ಬಂದಾಗ ಏನೇನೊ ಹೇಳಬೇಕೆಂದು ಅವಳ ಮನಸ್ಸು ಕಾತುರಗೊಳ್ಳುತ್ತಿತ್ತು. ಆದರೆ ಅವಳು ಏನೂ ಹೇಳುತ್ತಿರಲಿಲ್ಲ.

ಒಂದು ದಿನ ಅವನು ಎಂದಿನಂತೆ ಬಂದು ಅಂಗಳದಲ್ಲಿ ನಿಂತು ಮೆಲ್ಲಗೆ ಕೆಮ್ಮಿದ. ಅನ್ನೆ ದೀಪ ಹಚ್ಚಿ ಬಾಗಿಲು ತೆರೆದು ಹೊರಗೆ ಬಂದಳು. ಅವನು ಒಂದು ಕುಕ್ಕೆಯನ್ನು ಚಾವಡಿಯಲ್ಲಿಟ್ಟ. ಅದರಲ್ಲಿ ಅಕ್ಕಿ ಮತ್ತು ಇತರ ಸಾಮಾನುಗಳಿದ್ದುವು. ಅವಳು ಸಂಕೋಚದಿಂದ ಕೇಳಿದಳು:

"ಎಷ್ಟು ದಿನಗಳ ವರೆಗೆ ಹೀಗೆ?"

"ಇಂದಿನದ್ವಾದರೆ ಸಾಕಲ್ಲ?"

"ಹುಂ."

"ನಾಳೆ ಅವರು ಬರುವರು."

"ಬರುವರೇ? ನನ್ನ ಅಣ್ಣಂದಿರು ಬರುವರೇ?" ಅವಳು ಸಂತೋಷಗೊಂಡು ಕೇಳಿದಳು.

"ಹೌದು, ಅವರು ಬರುವರು. ಇಬ್ಬರೂ ಬರುವರು."

ಅವಳು ಮ್ಲಾನವದನೆಯಾದಳು. ನಂತರ ಕೇಳಿದಳು:

"ಮತ್ತೆ ಅವರನ್ನು ಹಿಡಿದುಕೊಂಡು ಹೋದರೋ?"

"ಮತ್ತೆ ಹಿಡಿದುಕೊಂಡು ಹೋದರೆ, ಮತ್ತೆ ನಾನು ಬರುತ್ತೇನೆ."

"ದಿನದಿನವೂ ಇದೇ ರೀತಿ......"

"ಇದೇ ರೀತಿಯಲ್ಲಿ?"

"ಬಂದರೆ?"

"ಬಂದರೇನು?"

"ನೀನು ನನಗೇನಾದರೂ ಸಂಬಂಧಿಕನೊ?"

"ಏಕೆ, ನಾನು ಅನ್ನೆಗೆ ಏನೂ ಆಗಬೇಡವೆ?"

"ಆ!" ಅವಳು ಮುಖ ತಗ್ಗಿಸಿದಳು.

"ಅನ್ನೆ!" ಅವನು ಹತ್ತಿರ ಹೋದ.

"ಹುಂ?" ಅವಳು ಮುಖವೆತ್ತಿದಳು.

ನಕ್ಷತ್ರದ ಬೆಳಕಿನಲ್ಲಿ ಅವರ ಕಣ್ಣುಗಳು ಒಂದಾದುವು.

ಸ್ವಲ್ಪ ಹೊತ್ತು ಮೌನ!—ಚುರುಕುಗೊಂಡ ಮಾತಿನ ಮೌನವಾಗಿತ್ತು ಅದು. ಅವನು ಕೇಳಿದ:

"ನಾನು ಹೋಗಲೇ?"

"ಅಣ್ಣಂದಿರು ನಾಳೆ ಎಷ್ಟು ಹೊತ್ತಿಗೆ ಬರುವರು?"

"ನಾಳೆ ಯಾವುದೇ ಸಮಯಕ್ಕಾದರೂ ಬರಬಹುದು!"

"ಅವರೊಂದಿಗೆ ನೀವೂ ಬರುವಿರಾ?

"ನಾನೊ?"

"ಹುಂ."

"ಇಲ್ಲ."

"ಆಮೇಲೆ ಬರುವಿರಾ?"

"ಇಲ್ಲ."

ಗಂಭೀರವಾದ ಒಂದು ನಿಶ್ಶಬ್ದ. ಅದನ್ನು ಭೇದಿಸಿಕೊಂಡೋಯೆಂಬಂತೆ ಅವನು ಕೇಳಿದ:

"ಅನ್ನೆ !"

"ಹುಂ?"

"ನಾನು ಹೋಗಲೇ?"

ಉತ್ತರವಿಲ್ಲ.

ಅವನು ಹಿಂತಿರುಗಿದ. ಮನೆಯ ಮೆಟ್ಟಲುಗಳನ್ನು ದಾಟಿ ಅವನು ತಿರುಗಿ ನೋಡಿದ. ಅವಳು ಅಲ್ಲೇ ನಿಂತುಕೊಂಡು ಅವನನ್ನೇ ನೋಡುತ್ತಿದ್ದಳು. ಅವನು ಏನೋ ಹೇಳಲು ಭಾವಿಸಿದ. ಆದರೆ ಅದನ್ನು ಹೇಳಲಿಲ್ಲ. ಅವನು ಕಿರುದಾರಿಗಿಳಿದು ಕಣ್ಮರೆಯಾದ.

ಜೈಲಿನಲ್ಲಿದ್ದವರನ್ನೆಲ್ಲಾ ಜಾಮೀನಿನ ಮೇಲೆ ಬಿಟ್ಟರು. ರೋಕಿಯೂ ಕೋರ್ಟಿ ನಲ್ಲಿ ಹಾಜರಾಗಿ ಜಾಮೀನಿನ ಮೇಲೆ ಬಂದ. ಸಂಜೆಯ ಹೊತ್ತಿಗೆ ಅವರು ಮನೆಗೆ ಬಂದು ತಲುಪಿದರು.

ಅನ್ನೆ, ಅನ್ನ ಮತ್ತು ಇತರ ಅಡಿಗೆ ಪದಾರ್ಥಗಳನ್ನು ತಯಾರಿಸಿ ಅಣ್ಣಂದಿರಿ ಗಾಗಿ ಕಾಯುತ್ತಿದ್ದಳು. ಅವರನ್ನು ಕಂಡೊಡನೆ ದುಃಖ ಉಕ್ಕಿ ಬಂದು ಅವಳು ಅಳಲಾ ರಂಭಿಸಿದಳು. ರೋಕಿಯೂ ಅತ್ತ. ಅಂತೋಣಿ ನಿಶ್ಚಲವಾಗಿ ನಿಂತಿದ್ದ.

ಅವಳು ತಟ್ಟೆಗಳಲ್ಲಿ ಅನ್ನ ಬಡಿಸಿದ್ದಳು. ಅಂತೋಣಿ ಕೇಳಿದ:

"ಇದೆಲ್ಲಿಂದ?"

"ಇದಾ? ಇದು……"

"ಗಾಳಿ ತಂದುಕೊಟ್ಟದ್ದೊ?" ರೋಕಿ ಕೇಳಿದ.

"ಹುಂ."

"ಇಷ್ಟು ದಿನಗಳನ್ನು ನೀನು ಹೇಗೆ ಕಳೆದೆ?"

"ಅವರು ತಂದುಕೊಡುತ್ತಿದ್ದುದರಿಂದ ದಿನ ಕಳೆದೆ."

"ಅವನು ಎಲ್ಲಿಗೆ ಹೋದ?"

"ನಿನ್ನೆ ರಾತ್ರಿ ಅಕ್ಕಿ ಸಾಮಾನುಗಳನ್ನು ತಂದುಕೊಟ್ಟು ಹೇಳಿದ, ಅಣ್ಣಂದಿರು ನಾಳೆ ಬರುತ್ತಾರೆಂದು. ಆಮೇಲೆ ಹೋದ."

ಅಂತೋಣಿ ಮತ್ತೇನೂ ಕೇಳಲಿಲ್ಲ. ಊಟ ಮುಗಿಸಿದರು. ರೋಕಿ ಚಾವಡಿ ಯಲ್ಲಿ ಮಲಗಿದ. ಅನ್ನೆ ಒಳಗೆ ಹೋಗಿ ಬಾಗಿಲು ಹಾಕಿಕೊಂಡು ಮಲಗಿದಳು. ಅಂತೋಣಿ ಅಂಗಳದಲ್ಲಿ ಆಚೀಚೆ ನಡೆಯಲು ಪ್ರಾರಂಭಿಸಿದ.

ಮತ್ತಾಯಿ ಮತ್ತು ಸೈಮನರು ಸಂಜೆಯ ತರುವಾಯ ತಮ್ಮ ಮನೆ ತಲುಪಿ ದರು. ಅವರ ಮನೆಯ ಮಡಲಿನ ತಟ್ಟಿಯ ಬಾಗಿಲನ್ನು ಹಾಕಿ ಕಟ್ಟಿತ್ತು. ಮನೆ ಮತ್ತು ವಠಾರವನ್ನು ಗುಡಿಸಿ ಸ್ವಚ್ಛ ಮಾಡಲಾಗಿತ್ತು. ಮತ್ತಾಯಿ ಕೇಳಿದ:

"ಮನೆ ಮತ್ತು ವಠಾರವನ್ನು ಗುಡಿಸಿದ್ದು ಯಾರು?"

"ಅಣ್ಣೆಯಾಗಿರಬೇಕು; ಇಲ್ಲವಾದರೆ ವೇಲಾಯುಧನ ತಾಯಿಯಾಗಿರಬೇಕು."

ಅವನು ಮಡಲಿನ ತಟ್ಟಿಯ ಬಾಗಿಲನ್ನು ತೆರೆದ. ಅವರೊಳಗಿವೆ, ಅವರ ಮಡಿಕೆ ಕುಡಿಕೆಗಳು, ಅವರ ತಂದೆ ಮಲಗುತ್ತಿದ್ದ ಮಂಚ ಮತ್ತು ಚಾಪೆ. ಕೋಣೆಯೊಳಗಿನ ಕತ್ತಲೆಯಲ್ಲಿ ಅದೊಂದೂ ಕಾಣದಂತಾಗಿತ್ತು.

ಆ ಸಹೋದರರು ಚಾವಡಿಯಲ್ಲಿ, ತಂದೆಯ ಮೃತದೇಹವನ್ನು ಮಲಗಿಸಿಟ್ಟದ್ದ ಜಾಗದಲ್ಲಿ ಮೊಣಕಾಲೂರಿದರು. ಅವರ ಕಣ್ಣುಗಳಿಂದ ಕಣ್ಣೀರು ಧಾರೆಯಾಗಿ ಹರಿಯುತ್ತಿತ್ತು. ಅವರು ಶಿಲುಬೆಯ ಚಿತ್ರ ಮಾಡಿ ದೇವರಲ್ಲಿ ಪ್ರಾರ್ಥಿಸಿದರು; ಸ್ವರ್ಗಸ್ಥನಾದ ತಮ್ಮ ತಂದೆಗೆ ಸುಖ ಕೊಡುವಂತೆ.

ಅವರು ಅಲ್ಲಿಂದ ಎದ್ದು ಕಣ್ಣೀರು ಒರಸಿಕೊಂಡರು. ಅಣ್ಣನು ತಮ್ಮನಿಗೆ ಹೇಳಿದ:

"ನೀನು ಆಚೆಮನೆಗೆ ಹೋಗಿ ಒಂದು ಸೂಡಿಲು ಹಚ್ಚಿಕೊಂಡು ಬಾ."

"ಒಳಗೆ ದೀಪವೂ ಬೆಂಕಿಪೊಟ್ಟಣವೂ ಇದೆ" ಅಂಗಳದಲ್ಲಿ ಕತ್ತಲೆಯಲ್ಲಿ ನಿಂತಿದ್ದ ಆ ತೆಳ್ಳಗಿನ ಮನುಷ್ಯ ಹೇಳಿದ.

"ಯಾರದು?" ಅವರಿಬ್ಬರೂ ಕೇಳಿದರು.

"ನಾನು."

"ಗಾಳಿಯೊ?" ಮತ್ತಾಯಿ ಕೇಳಿದ.

"ಹುಂ."

"ಇಲ್ಲಿ ಯಾವಾಗಲೂ ಬರುತ್ತಿದ್ದೆಯಾ?"

"ಹುಂ."

"ಇಲ್ಲಿ ಯಾವಾಗಲೂ ಗುಡಿಸಿ ಸ್ವಚ್ಛ ಮಾಡುತ್ತಿದ್ದೆಯಾ?"

"ಹುಂ."

ಮತ್ತಾಯಿ ಒಳಗೆ ಹೋದ. ಗಾಳಿ ಕೂಗಿ ಹೇಳಿದ:

"ಆ ಬೆಂಚಿನ ಮೇಲೆ ಬೆಂಕಿ ಪೆಟ್ಟಿಗೆ ಮತ್ತು ದೀಪ ಇದೆ. ಸಮೀಪವೇ ಒಂದು ಕುಕ್ಕೆಯಲ್ಲಿ ಅಕ್ಕಿ, ಸಾಮಾನುಗಳೂ ಇವೆ."

ಒಳಗೆ ಬೆಂಕಿಕಡ್ಡಿ ಗೀರುವ ಸದ್ದು ಕೇಳಿಸಿತು. ಪ್ರಕಾಶ ಉಂಟಾಯಿತು. ಅವನು ದೀಪ ಹಿಡಿದುಕೊಂಡು ಹೊರಗೆ ಬಂದು ಅಂಗಳದ ಕಡೆಗೆ ನೋಡಿದ:

"ಎಲ್ಲಿ?"

ಗಾಳಿ ಕಿರುದಾರಿಯಿಂದ ಕೂಗಿ ಹೇಳಿದ:

"ಮತ್ತೆ ಬರುವೆ."

(೨೨)

ಸಮರಾಂಗಣದಲ್ಲಿ ನಿಷ್ಠುರವಾಗಿ ಮಾತನಾಡುವ ಕೆಲವರು ಏಕಾಂತತೆಯಲ್ಲಿ ಬಿಕ್ಕಿಬಿಕ್ಕಿ ಅಳುವುದುಂಟು. ಕಠಾರಿಯಿಂದ ಹೃದಯವನ್ನು ಇರಿದು, ಹರಿಯುತ್ತಿರುವ ರಕ್ತದಲ್ಲಿ ಅಭಿಷಿಕ್ತರಾಗಲು ಹಿಂಜರಿಯದವರು, ಮತ್ತೊಂದು ಹೃದಯದ ನೆಮ್ಮದಿಗಾಗಿ ತಮ್ಮನ್ನೇ ಬಲಿಯಾಗಿಸಲು ಸನ್ನದ್ಧರಾಗುವುದುಂಟು. ಎಂತಹ ವೈಪರೀತ್ಯ ಇದು?

ಸ್ನೇಹ ಮತ್ತು ದ್ವೇಷಗಳು ಒಂದು ನಾಣ್ಯದ ಎರಡು ಮುಖಗಳೆಂದು ಹೇಳುವುದುಂಟು. ಇದು ನಿಜ ಇರಬಹುದು! ಒಂದುವೇಳೆ ಸ್ನೇಹ, ದ್ವೇಷಗಳನ್ನು ವಿಭಜಿಸಲು ಸಾಧ್ಯವಾಗದಿರಬಹುದು. ಹಾಗೆಯೆ ಅವುಗಳನ್ನು ಪ್ರತ್ಯೇಕಿಸುವ ಒಂದು ಸೀಮಾರೇಖೆಯನ್ನು ಗುರುತಿಸಲು ಇದುವರೆಗೆ ಯಾರಿಂದಲೂ ಸಾಧ್ಯವಾಗದಿರಬಹುದು.

ಕೆಲವರ ಸ್ನೇಹವು ಅಂತರ್ಮುಖವಾಗಿರುವುದು. ಒಂದು ವ್ಯಕ್ತಿಯೆಂಬ ಪರಿಧಿಯಲ್ಲಿ ಸೀಮಿತಗೊಂಡು ನಿಲ್ಲುವುದಾಗಿದೆ ಅವರ ಸ್ನೇಹ. ಈ ಗುಂಪಿಗೆ ಸೇರಿದವರು ತಮ್ಮ ಸುಖಕ್ಕೂ ಸಂರಕ್ಷಣೆಗೂ ವಿರೋಧವೆಂದು ಕಾಣುವ ಎಲ್ಲವನ್ನೂ ದ್ವೇಷಿಸುವರು. ಅಲ್ಲದೆ ಅವುಗಳನ್ನು ಹತ್ತಿಕ್ಕಲು ವಂಚನೆ ಮತ್ತು ಹಿಂಸೆ ಮಾಡಲು ಸಹ ಅವರು ಸಿದ್ಧರೇ ಸರಿ.

ಬೇರೆ ಕೆಲವರಿದ್ದಾರೆ—ಸ್ನೇಹದ ಪರಿಧಿಯನ್ನು ವಿಪುಲಗೊಳಿಸಿದವರು. ಸ್ನೇಹದ ಮೌಲ್ಯವನ್ನು ತಿಳಿದವರು; ಸ್ನೇಹವನ್ನು ಇಚ್ಛಿಸುವವರು ಎಲ್ಲೆಲ್ಲಿ ಇದ್ದಾರೊ ಅಲ್ಲೆಲ್ಲಾ ಅದು ವ್ಯಾಪಿಸುವುದು. ಕಷ್ಟಪಟ್ಟು ದುಡಿಯುವವನ ಕಷ್ಟದ ಭಾರ ಕಡಿಮೆ ಮಾಡುವುದು, ನೋವಿನಿಂದ ನರಳುತ್ತಿರುವವನಿಗೆ ಸಹಾಯ ಮಾಡುವುದು—ಅದಾಗಿದೆ ಆ ಸ್ನೇಹದ ಮುಖ್ಯ ಗುರಿ. ಆದುದರಿಂದ ಕಷ್ಟ ಕೊಟ್ಟು ದುಡಿಸುವವರನ್ನೂ ನೋಯಿಸುವವರನ್ನೂ ಅವರು ದ್ವೇಷಿಸುತ್ತಾರೆ. ಆ ವಿರೋಧಿಸುವಿಕೆಯು ಕೆಲವೊಮ್ಮೆ ಕ್ರಮತಪ್ಪಿ ಮುಂದುವರಿಯಿತು ಎಂದೂ ಕಾಣಬಹುದು.

ಅಪೂರ್ವವಾಗಿ ಕಾಣುವ ಇನ್ನೊಂದು ರೀತಿಯವರಿದ್ದಾರೆ—ಒಳಿತು ಕೆಡುಕುಗಳಿಂದ ದೂರವಾಗಿ ನಿಂತು ಮನುಷ್ಯತ್ವವನ್ನು ಕಾಣುವವರು. ಮನುಷ್ಯರಾದವರಿಗೆಲ್ಲರಿಗೂ ಗುಣದೋಷಗಳು ಅಂಟಿಕೊಂಡೇ ಇರುತ್ತವೆ. ವ್ಯಕ್ತಿಯಲ್ಲೂ ಸಮುದಾಯದಲ್ಲೂ ಒಳ್ಳೆಯ ಗುಣ ಬೆಳೆಯುವಂತೆಯೂ ಕೆಡುಕು ನಾಶವಾಗುವಂತೆಯೂ ಅವರು ಶ್ರಮಿಸುತ್ತಾರೆ. ಅದನ್ನು ಉಳಿಸಿ ಬೆಳೆಸುವುದಕ್ಕಾಗಿ ಅಕ್ರಮವಾದ ದಾರಿ ಹಿಡಿಯುವುದಿಲ್ಲ, ವಂಚನೆ ಮಾಡುವುದಿಲ್ಲ. ಆದರೆ ಕೆಡುಕುಗಳ ಮೇಲಿನ ದ್ವೇಷದಿಂದ ಆತ್ಮಾರ್ಪಣೆಗೂ ಅವರು ಸನ್ನದ್ಧರಾಗಬಹುದು.

ಕೊನೆಗೆ ಹೇಳಿದ ವರ್ಗಕ್ಕೆ ಸೇರಿದವ ಅಂತೋಣಿ. ರೋಕಿ ಎರಡನೇ ವರ್ಗಕ್ಕೆ ಸೇರಿದವ. ಮೇಸ್ತ್ರಿಯ ಮನೆ ಹೊಕ್ಕು ಅವನಿಗೆ ಹೊಡೆದುದು, ಚಿಕ್ಕ ಮಾಲಿಕನಿಗೆ ಕಲ್ಲು ಹೊಡೆದು ನೋಯಿಸಿದ್ದು ಅಂತೋಣಿಗೆ ಹಿಡಿಸಲಿಲ್ಲ. ಕೂಲಿಯಾಳುಗಳ

ಮಧ್ಯದಲ್ಲಿ ಗಾಳಿಯಂತೆ ವೇಗವಾಗಿ ಆಚೀಚೆ ಅಲೆದಾಡಿ ಅವರನ್ನು ಆಕ್ರಮಣವತ್ತ ಒಯ್ಯುತ್ತಿದ್ದ ಆ ತೆಳ್ಳಗಿನ ಮನುಷ್ಯ, ಅನ್ನೆಯೊಬ್ಬಳೆ ಮನೆಯಲ್ಲಿದ್ದಾಗ ಯಾವಾಗಲೂ ಅಲ್ಲಿ ಬರುತ್ತಿದ್ದುದಾಗಲಿ, ಅಕ್ಕಿ ದುಡ್ಡು ಇತ್ಯಾದಿಗಳನ್ನು ಕೊಡುತ್ತಿದ್ದುದಾಗಲಿ ಅವನಿಗೆ ಸರಿದೋರಲಿಲ್ಲ. ಅಂಗಳದಲ್ಲಿ ಆಚೀಚೆ ನಡೆದಾಡುತ್ತಾ ಅವನು ಗೊಣಗುತ್ತಿದ್ದ:

"ಈ ಕ್ರಮ ಸರಿಯಲ್ಲ. ಹೀಗಾದರೆ......"

"ಅಣ್ಣಾ, ನೀನೇಕೆ ಹೀಗೆ ಗೊಣಗುತ್ತಿರೋದು?" ಎಂದು ಕೇಳುತ್ತಾ ರೋಕಿ ಚಾಪೆಯ ಮೇಲೆ ಎದ್ದು ಕುಳಿತ.

"ಈ ಕ್ರಮ ಸರಿಯಲ್ಲವೆಂದು ನಾನು ಹೇಳೋದು."

"ಯಾವ ಕ್ರಮ?"

"ಮನೆಯೊಳಗೆ ನುಗ್ಗಿ ಒಳಗಿದ್ದವರನ್ನು ಹೊಡೆಯುವುದು, ದಾರಿಹೋಗುವವರಿಗೆ ಕಲ್ಲು ಹೊಡೆಯುವುದು."

"ಹಾಗಿದ್ದರೆ ಬೆಂಕಿ ಕೊಡೋದು ಸರಿಯೋ? ನಮಗೆಲ್ಲಾ ಪೋಲೀಸರಿಂದ ಹೊಡೆಸೋದು ಸರಿಯಾದ ಕ್ರಮವೊ?" ರೋಕಿ ಎದ್ದು ಅಂಗಳಕ್ಕೆ ಬಂದ.

"ನೀನು ಹಾಗೆಲ್ಲಾ ಕೇಳಿದರೆ......"

"ಮತ್ತೆ ಹೇಗೆ ಕೇಳೋದು?"

"ಮನೆಗೆ ಬೆಂಕಿ ಕೊಟ್ಟದ್ದಕ್ಕೆ ಮೇಸ್ತ್ರಿಗೆ ಹೊಡೆದರೆ ಬೆಂಕಿ ನಂದಿಹೋದೀತೊ?"

"ಅವನು ಬೆಂಕಿ ಕೊಟ್ಟದ್ದನ್ನು ಕೈಕಟ್ಟಿ ನಿಂತು ನೋಡಿದರೆ ಬೆಂಕಿ ನಂದಿಹೋದೀತೋ?"

"ನೀನು ನನ್ನೊಂದಿಗೆ ವಾದಿಸಬೇಡ ರೋಕಿ."

"ಹಾಗಿದ್ದರೆ, ಅಣ್ಣಾ, ನಾನು ಏನನ್ನು ಹೇಳಬೇಕು?"

ಬಾಗಿಲು ತೆರೆದು ಅನ್ನೆ ಹೊರಗೆ ಬಂದಳು. ಅವಳು ರೋಕಿಯೊಡನೆ ಕೇಳಿದಳು:

"ನೀನು ಮೇಸ್ತ್ರಿಗೆ ಹೊಡೆದುದರಿಂದ ತಾನೆ ದೊಡ್ಡಣ್ಣನನ್ನು ಪೋಲೀಸರು ಹಿಡಿದುಕೊಂಡು ಹೋದದ್ದು?"

"ಅದೇ?...... ಅದು......" ಅದಕ್ಕೆ ಸಮಾಧಾನ ಹೇಳಲು ಅವನಿಗೆ ಸಾಧ್ಯವಾಗಲಿಲ್ಲ. ಅವನ ಮುಖ ಬಿಳುಪಾಯಿತು.

ಅಂತೋಣಿ ತಂಗಿಗೆ ಹೇಳಿದ:

"ನೀನು ಮಾತಾಡಬೇಡ. ನಾವು ನಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದೇವೆ. ನೀನು ಹೋಗಿ ಮಲಗು."

ಅವಳು ಒಳಗೆ ಹೋಗಿ ಬಾಗಿಲು ಹಾಕಿಕೊಂಡಳು. ಅಂತೋಣಿ ರೋಕಿಯೊಡನೆ ಕೇಳಿದ:

"ಕಿರಿಯ ಮಾಲಿಕನಿಗೆ ಕಲ್ಲು ಹೊಡೆದದ್ದು ಯಾರು?"

"ಅದು? ಅದು......"

"ಅದೂ ನೀನೆಯೋ? ಎಂದು ನಾನು ಕೇಳಿದ್ದು."

"ನಾನಲ್ಲ."

"ಮತ್ತ್ಯಾರು?"

"ಗಾಳಿ ಮತ್ತು ಇತರ ಕೆಲವರೂ ಇದ್ದರು."

"ಅವನು ಕೊಲ್ಲಲೂ ಕೊಲ್ಲಿಸಲೂ ತಿರುಗಾಡುವವನಿದ್ದಾನೆ."

"ಅವನಿಲ್ಲದಿರುತ್ತಿದ್ದರೆ......"

"ಇಲ್ಲದಿರುತ್ತಿದ್ದರೇನು?"

"ನಮ್ಮ ತಂಗಿಯನ್ನು ಪೋಲೀಸರು......"

"ಹೇಳು ಏನಾಯ್ತು?"

"ಅವಳನ್ನು ಕರೆದು ನೀನೆ ಕೇಳು."

"ಅನ್ನೆ, ಇಲ್ಲಿ ಬಾ."

ಅವಳು ಬಾಗಿಲು ತೆರೆದು ಹೊರಗೆ ಬಂದಳು. ಅವನು ಕೇಳಿದ:

"ಇಲ್ಲಿಗೆ ಪೋಲೀಸರು ಬಂದಿದ್ದರೆ?"

"ಹುಂ."

"ರಾತ್ರಿಯಲ್ಲೊ? ಹಗಲಲ್ಲೊ?"

"ರಾತ್ರಿಯಲ್ಲಿ."

"ಆಮೇಲೆ?"

"ಆಮೇಲೆ...... ಒಬ್ಬ ಪೋಲೀಸರವನು ನನ್ನನ್ನು ಹಿಡಿಯಲಿಕ್ಕೆ ಬಂದ."

"ಹಿಡಿದನೋ?"

"ಹಿಡಿಯಲಿಲ್ಲ. ರೋಕಿ ಎಲ್ಲಿದ್ದಾನೆಂದು ಒಬ್ಬ ನನ್ನ ಹತ್ತಿರ ಬಂದ. ಅವನು ಇಲ್ಲಿ ಇಲ್ಲವೆಂದು ಹೇಳಿದೆ. ಅವನು ನನ್ನ ಕೈಯನ್ನು ಹಿಡಿಯಲು ಮುಂದೆ ಬಂದ. ಆಗ ದಾರಿಯಿಂದ ಒಂದು ಶಬ್ದ ಕೇಳಿಸಿತು, 'ನಾನಿಲ್ಲಿದ್ದೇನೆ' ಎಂದು. ಅಷ್ಟು ಹೇಳಿ ಓಡುವ ಶಬ್ದವೂ ಕೇಳಿಸಿತು. ಪೋಲೀಸರು ಹಿಂದಿನಿಂದ ಓಡಿದರು."

"ದಾರಿಯಲ್ಲಿ ನಿಂತು ಕೂಗಿ ಹೇಳಿ ಓಡಿದ್ದು ಯಾರು, ಗಾಳಿಯೊ?"

"ಹುಂ."

"ಸಾಕು. ನೀನು ಹೋಗಿ ಮಲಗಿಕೊ."

ಅವಳು ಒಳಗೆ ಹೋಗಿ ಬಾಗಿಲು ಹಾಕಿಕೊಂಡಳು. ಅವನು ಮೊದಲಿನಂತೆ ಹೆಜ್ಜೆಹಾಕಲು ಪ್ರಾರಂಭಿಸಿದ.

ಮಧ್ಯರಾತ್ರಿಯಾಯಿತು. ಆಗಲೂ ಅವನು ಆಚೀಚೆ ಹೆಜ್ಜೆ ಹಾಕುತ್ತಲೇ ಇದ್ದ. ನೆರೆಮನೆಗಳಲ್ಲಿ ಎಲ್ಲರೂ ನಿದ್ರಿಸುತ್ತಿದ್ದರು. ರೋಕಿ ಹೊಡೆಯುತ್ತಿರುವ ಗೊರಕೆ ಮಾತ್ರ ಆ ನಡುರಾತ್ರಿಯ ನಿಶ್ಶಬ್ದವನ್ನು ಭೇದಿಸುತ್ತಿತ್ತು.

ಬಾಗಿಲು ತೆರೆದು ಅನ್ನೆ ಹೊರಗಿಳಿದು ಅಣ್ಣನ ಹತ್ತಿರ ಬಂದಳು. ಅವಳು ಕೇಳಿದಳು:

"ದೊಡ್ಡಣ್ಣನೇಕೆ ಇನ್ನೂ ಮಲಗಿಲ್ಲ?"

ಅವನು ಕೈಕಟ್ಟಿ ನಿಂತ. ಅವಳ ಮುಖವನ್ನು ನೇರವಾಗಿ ನೋಡುತ್ತ, ಕೇಳಿದ:

"ಅವನು ದಿನಾಲು ಇಲ್ಲಿ ಬರುತ್ತಿದ್ದನೊ?"

"ಯಾರು ಗಾಳಿಯೆ?"

"ಹುಂ."

"ನಿನ್ನೆ ರಾತ್ರಿ ಇಲ್ಲಿ ಬಂದು ಒಂದು ಕುಕ್ಕೆಯಲ್ಲಿ ಅಕ್ಕಿ ಮತ್ತು ಇತರ ಸಾಮಾನುಗಳನ್ನು ತಂದುಕೊಟ್ಟು ಹೋದರು. ಆಮೇಲೆ ಬರಲಿಲ್ಲ."

"ಅವನು ನಿನ್ನಲ್ಲಿ ಏನಾದರೂ ಮಾತನಾಡೋದಿತ್ತೊ?"

"ಕೆಲವೊಮ್ಮೆ ನಾನೇನಾದರೂ ಕೇಳಿದರೆ ಮಾತಾಡುತ್ತಿದ್ದರು. ಇಲ್ಲವಾದರೆ, ತಾವು ತಂದ ಅಕ್ಕಿಯನ್ನೂ ದುಡ್ಡನ್ನೂ ಕೊಟ್ಟು ಹೋಗುತ್ತಿದ್ದರು."

ಅಂತೋಣಿ ಆಮೇಲೆ ಏನೂ, ಕೇಳಲಿಲ್ಲ. ಅವಳು ಕೇಳಿದಳು:

"ಅಣ್ಣಾ, ಅವರ ವಿಷಯ ಏಕೆ ಕೇಳುತ್ತಿದ್ದಿ? ಅವರು......"

"ಸುಮ್ಮನೆ ಕೇಳಿದೆನಷ್ಟೆ. ನೀನು ಹೋಗಿ ಮಲಗಿಕೊ."

"ದೊಡ್ಡಣ್ಣ, ನೀನು ಮಲಗುವುದಿಲ್ಲವೆ?"

"ನಾನು ಮಲಗುವೆ. ನೀನು ಹೋಗಿ ಮಲಗಿಕೊ."

ಅವಳು ಹೋಗಿ ಮಲಗಿದಳು. ಅವನು ಇನ್ನೂ ಹೆಜ್ಜೆಹಾಕಲು ಪ್ರಾರಂಭಿಸಿದ.

## (೨೩)

ಸಮರಾಂಗಣ ಶಾಂತವಾಯಿತು. ಹೆಚ್ಚು ಉಲ್ಬಣವೂ ದೀರ್ಘವೂ ಆದ ಹೋರಾಟಕ್ಕೆ ತಯಾರಿಯಾಗಿತ್ತು ಆ ಶಾಂತತೆ.

ಕಾರ್ಮಿಕರ ಸಂಘಟನೆಯು, ಬಲವಾದ ಉಕ್ಕಿನ ಒಂದು ಕೋಟೆಯಾಗಿ ಬೆಳೆಯ ತೊಡಗಿತು. ಶತ್ರುಗಳ ಕೇಂದ್ರಗಳಾದ ಫ್ಯಾಕ್ಟರಿಗಳಲ್ಲೇ ಆಕ್ರಮಣಕ್ಕೆ ಬೇಕಾದ ತಯಾರಿ ನಡೆಯುತ್ತಿದ್ದುವು. ಕೂಲಿವರ್ಗದವರಿಗೆ ವಿರೋಧವಾದ ಪ್ರತಿಯೊಂದು ಮಾತನ್ನೂ, ಪ್ರತಿಯೊಂದು ದೃಶ್ಯವನ್ನೂ ಪ್ರತಿಯೊಂದು ಚಲನೆಯನ್ನೂ ಬಹಳ ಎಚ್ಚರದಿಂದ ಗಮನಿಸಿ, ಗಣನೆಗೆ ತೆಗೆದುಕೊಳ್ಳಲಾಗುತ್ತಿತ್ತು. ಮಾಲಿಕರು ಮತ್ತು ಅಧಿಕಾರಿಗಳು ಆಕ್ರಮಣದ ಹಿಡಿತದಿಂದ ಆತ್ಮರಕ್ಷಣಾ ಸ್ಥಾನಗಳಿಗೆ ಹಿಂದಿರುಗಲು ಯತ್ನಿಸಲಾರಂಭಿಸಿದರು.

ಕಾರ್ಮಿಕ ವರ್ಗದ ಆಕ್ರಮಣೋದ್ದೇಶಗಳಲ್ಲಿ ಆಮೂಲಾಗ್ರವಾದ ಬದಲಾವಣೆಯುಂಟಾಯಿತು. ಸಂಬಳ ಕಡಿಮೆ ಮಾಡದಿರುವುದು, ಮಾಲಿಕರ ಇಷ್ಟದಂತೆ ಕೂಲಿಯವರನ್ನು ಕೆಲಸದಿಂದ ವಜಾ ಮಾಡದಿರುವುದು, ಹೆಣ್ಣು ಕೂಲಿಯಾಳುಗಳ ಮಾನ ಹಾನಿ ಮಾಡದಿರುವುದು, ಮುಂತಾದುವು ಕಾರ್ಮಿಕರ ಹೋರಾಟದ ಉದ್ದೇಶಗಳು. ಆ ಉದ್ದೇಶಗಳು ಈಗ ಬದಲಾದವು. ಸಂಬಳ ಹೆಚ್ಚಿಸುವುದು, ಉದ್ಯೋಗ ಸೌಕರ್ಯಗಳನ್ನು ಹೆಚ್ಚಿಸುವುದು, ಉದ್ಯೋಗ ಸ್ಥಿರತೆ, ಕೆಲಸದವರೊಂದಿಗೆ ಮಾನವೀಯ ವ್ಯವಹಾರಗಳು ಮೊದಲಾದ ಹೊಸ ಕೇಳಿಕೆಗಳು ಬಂದುವು. ಆ ಕೇಳಿಕೆಗಳನ್ನೆಲ್ಲಾ ಅತಿಕ್ರಮಿಸುವ ಒಂದು ಗುರುತರವಾದ ಉದ್ದೇಶವೂ ಇತ್ತು. ಉಚ್ಚ ನೀಚ, ಭಾವನೆ ಇಲ್ಲದೆ ಮರ್ದನ ಮತ್ತು ಶೋಷಣೆಯಿಲ್ಲದೆ, ಮಮತ್ವದಲ್ಲೂ ಸಮೃದ್ಧಿಯಲ್ಲೂ ದೃಢವಾದ ಒಂದು ಸಾಮೂಹಿಕ ವ್ಯವಸ್ಥೆಯನ್ನು ರೂಪಿಸುವುದಾಗಿತ್ತು ಆ ಘನ ಉದ್ದೇಶ. ಸಂಬಳ ಹೆಚ್ಚಿಸಲು ಮತ್ತು ಉದ್ಯೋಗಾವಕಾಶಗಳಿಗೆ ಬೇಕಾಗಿ ತೊಡಗಬೇಕಾದ ಸಮರವು ಅಂತಿಮ ಹೋರಾಟ ನಡೆಸುವುದಕ್ಕಿರುವ ಸಿದ್ಧತೆಯ ವರೆಗೆ ಮುಟ್ಟಿತು.

ಅಂತೋಣಿ, ಮತ್ತಾಯಿ, ಪದ್ಮನಾಭನ್, ಅಚ್ಯುತನ್, ಜೋಸೆಫರು ಇತರ ಕೂಲಿಯಾಳುಗಳ ಮುಂದಾಳುಗಳಾದರು. ಅವರು ಕಾರ್ಮಿಕ ಸಂಘಟನಾಶಕ್ತಿಯ ಸಜೀವ ಕಾರ್ಯಪ್ರವರ್ತಕರಾದರು.

ಮೆರವಣಿಗೆಗಳು, ಗುಪ್ತಾಲೋಚನಾ ಸಭೆಗಳು, ಸಭೆಗಳು—ಭಾಷಣಗಳು! ಭಾಷಣಗಳು!! ಭಾಷಣಗಳು!!! ಸೇವಾವೃತ್ತಿ ಮತ್ತು ದುರಿತಗಳ ಆಳದಿಂದ ಮಂತ್ರಶಕ್ತಿಯಿಂದಲೋ ಎಂಬಂತೆ ಕಾರ್ಮಿಕ ವರ್ಗ ಮೇಲೇರುತ್ತಿದೆ. ಕತ್ತಲೆಯಿಂದ ಬೆಳಕಿನೆಡೆಗೆ ಒಂದು ಪ್ರವಾಹ! ಶೂನ್ಯದೆಡೆಯಿಂದ ಸಮೃದ್ಧಿಯತ್ತ ಒಂದು ಯಾತ್ರೆ!! ಶತಮಾನಗಳ ಲೋಕಚರಿತ್ರೆಯಲ್ಲಿ ಅತಿ ಪ್ರಧಾನವಾದ ಹೊಸ ಒಂದು ಅಧ್ಯಾಯ ಬರೆಯಲ್ಪಡುವುದು. ಆಲಪ್ಪಿಯ ಕಾರ್ಮಿಕರು ಆ ಹೊಸ ಚಾರಿತ್ರಿಕ ನಾಟಕದಲ್ಲಿ ಕೇವಲ ನಟರು ಮಾತ್ರ.

ಗಾಳಿಯೆಂದು ಕರೆಯಲ್ಪಡುವ ಆ ತೆಳ್ಳಗಿನ ಮನುಷ್ಯನ ಉಚ್ಚಧ್ವನಿಯು ಚಹದಂಗಡಿಯಿಂದ ಹಿಡಿದು ಗುಪ್ತಾಲೋಚನಾ ಸಭೆಯ ವರೆಗೆ ಎಲ್ಲೆಡೆಗಳಲ್ಲಿಯೂ ಮೊಳಗುತ್ತಿತ್ತು. ಪ್ರತಿಯೊಬ್ಬ ಕೂಲಿಯವನ ಬಾಯಿಯಲ್ಲೂ ಆ ಗಾಳಿಯ ಮಾತುಗಳೇ ಪ್ರತಿಧ್ವನಿಸುತ್ತಿದ್ದುವು:

"ನಮಗೆ ನಷ್ಟವಾಗುವಂತಹದ್ದೇನೂ ಇಲ್ಲ. ಆದರೆ ಸಿಗಲಿರುವುದೊ?—ಒಂದು ಲೋಕವಿಡೀ."

ಒಂದು ಕಂಠದಿಂದ ಹೊರಡುವ ಧ್ವನಿ ಮಾತ್ರ—ಅಂತೋಣಿಯ ಮಾತು ಮಾತ್ರ—ಆ ಗಾಳಿಯ ಮಾತಿನಿಂದ ಭಿನ್ನವಾಗಿತ್ತು. ಅವನ ಮಾತುಗಳು ಅನ್ಯರ ಮಾತಿನ ಪ್ರತಿಧ್ವನಿಯಲ್ಲ, ಅವನದ್ದೇ ಆಗಿದ್ದುವು. ಒತ್ತಿ ಹರಿಯುವ ಶೋಕಛಾಯೆ

ಬೆರೆತ ಆ ಮಾತುಗಳು ಹೃದಯದ್ರಾವಕವಾಗಿದ್ದುವು. ಹೃದಯದ ಆಳದಿಂದ ಎದ್ದು ಬರುವ ಅವನದ್ದೇ ಆದ ಧಾಟಿಯಲ್ಲಿ ಕೂಲಿಯವರ ದುಡಿತಗಳನ್ನು ವರ್ಣೋಜ್ವಲವಾಗಿ ಚಿತ್ರೀಕರಿಸಿ. ಸಮುದ್ರದಂತೆ ವ್ಯಾಪಿಸಿದ ಕಾರ್ಮಿಕವರ್ಗದ ಸಭಿಕರಲ್ಲಿ ಅವನು ಹೇಳುತ್ತಿದ್ದ:

"ನಾವೆಲ್ಲಾ ಮನುಷ್ಯರೊ? ಹೌದೊ? ಎಂದು ನಾನು ಕೇಳೋದು. ಆಗಿದ್ದರೆ......" ಹೇಳಲು ಶುರುಮಾಡಿದ. ಮಾತನ್ನು ಸಂಪೂರ್ಣಗೊಳಿಸಲಿಲ್ಲ. ಆಮೇಲೆ ಹೇಳಿದ:

"ಸ್ವಲ್ಪ ಸ್ವಲ್ಪವೇ ಸಾಯೋದಕ್ಕಿಂತ, ಎಲ್ಲರೂ ಒಟ್ಟಾಗಿ ಸಾಯೋದು ಒಳ್ಳೆಯದು."

ಸಭೆಯ ಒಂದು ಭಾಗದಲ್ಲಿ ಕುಳಿತಿದ್ದ ರೋಕಿ ಗೊಣಗಿದ:

"ಸಾಯೋದೇಕೆ? ಅದಕ್ಕಿಂತ ಒಳ್ಳೆಯದು ಕೊಲ್ಲೋದು."

ಗಾಳಿಯ ಮಾತಿನ ಪ್ರತಿಧ್ವನಿಯಾಗಿತ್ತದು.

ಅಂತೋಣಿಯ ಮನೆಯು ಗುಪ್ತ ಸಭೆಯ ಕೇಂದ್ರವಾಗಿತ್ತು. ಇರುಳಿನಲ್ಲಿ ಮಧ್ಯರಾತ್ರಿ ಕಳೆಯುವ ತನಕ ಆ ಮಡಲಿನ ತಟ್ಟಿಯ ಮನೆಯಲ್ಲಿ ದೀಪ ಉರಿಯುತ್ತಿತ್ತು. ಜನರ ಬಿರುಸಾದ ಮಾತುಗಳು ಕೇಳಿಬರುತ್ತಿದ್ದುವು. ಮತ್ತಾಯಿ, ಸೈಮನ್, ಪದ್ಮನಾಭನ್, ಅಚ್ಚುತನ್, ಶಂಕು, ಜೋಸೆಫ್. ಅಂತೋಣಿ ಮತ್ತು ರೋಕಿ ಇವರೆಲ್ಲಾ ಗುಪ್ತಾಲೋಚನಾ ಸಭೆಯ ಸದಸ್ಯರು. ಆ ತೆಳ್ಳಗಿನ ಮನುಷ್ಯನ ಮಾತುಗಳು ಗಟ್ಟಿಯಾಗಿ ಅಲ್ಲಿಂದ ಕೇಳಿಬರುತ್ತಿದ್ದುವು.

ಅವರಿಗೆ ಓಲೆಬೆಲ್ಲದ ಕಾಫಿ ಮಾಡಿ ಕೊಡುವುದು, ಬೀಡಿ ಮತ್ತು ವೀಳ್ಯದೆಲೆ ತಿನ್ನಲು ಕೊಡುವುದು, ದೀಪದಲ್ಲಿ ಎಣ್ಣೆ ಆರಿದಾಗ ಅದಕ್ಕೆ ಚಿಮಿಣಿ ಎಣ್ಣೆ ತುಂಬಿಸುವುದು—ಇವೆಲ್ಲ ಅನ್ನೆಗಿದ್ದ ಕೆಲಸಗಳಾಗಿದ್ದುವು.

ಆ ಗುಪ್ತಾಲೋಚನಾ ಸಭೆಗಳಿಗೆ ಬೇರೆ ಎರಡು ಮೂರು ಜನರೂ ಬರುವುದಕ್ಕೆ ತೊಡಗಿದರು. ಅವರನ್ನು ಅನ್ನೆ ಅರಿಯಳು. ಅವಳು ಅದಕ್ಕೆ ಮೊದಲು ಅವರನ್ನು ನೋಡಿರಲಿಲ್ಲ. ಹಳೆಯ ವಸ್ತ್ರಗಳನ್ನು ಅವರು ಧರಿಸಿದ್ದರೂ ಅವರು ಕೂಲಿಯಾಳುಗಳಲ್ಲವೆಂದು ನೋಡಿದಾಗಲೇ ಗೊತ್ತಾಗುತ್ತಿತ್ತು. ಆ ಸಮೂಹದಲ್ಲಿ ಒಳ್ಳೆಯ ಮುಖಲಕ್ಷಣಗಳಿಂದ ಕೂಡಿದ ಒಬ್ಬ ಯುವಕನು ಆ ರಹಸ್ಯ ಸಭೆಯಲ್ಲಿ ಮಾತಾಡಲು ತೊಡಗಿದ. ಪರಿಷ್ಕೃತವೂ ವ್ಯಕ್ತವೂ ದೃಢವೂ ಆದ ಭಾಷೆಯಲ್ಲಿ ಅವನು ವಿಷಯಗಳನ್ನು ವ್ಯಕ್ತಪಡಿಸುತ್ತಿದ್ದ, ಕಾರ್ಮಿಕರ ಅಂತಿಮ ಗುರಿಯೇನೆಂದು. ಕಾರ್ಲ್ ಮಾರ್ಕ್ಸ್‌ನನ್ನು ಕುರಿತು, ಲೆನಿನ್ನನನ್ನು ಕುರಿತು, ರಷ್ಯನ್ ವಿಪ್ಲವವನ್ನು ಕುರಿತು ಅವನು ಸುದೀರ್ಘವಾಗಿ ಮಾತಾಡುತ್ತಿದ್ದ.

ಹೇಗ ಲೆನಿನ್ ರಷ್ಯದಲ್ಲಿ ಒಂದು ವಿಪ್ಲವ ಸೃಷ್ಟಿಸಿದ್ದು? ಪ್ರಭುತ್ವಕ್ಕೆದುರಾದ ಅಂತಿಮ ವಿಪ್ಲವಕ್ಕೆ ಕೂಲಿಯಾಳುಗಳು ಹೇಗೆ ಶಕ್ತಿಯುತರಾಗಬೇಕಾದ್ದು? ಹೆಚ್ಚು

ಸಂಬಳ ಪಡೆಯಲು ಮತ್ತು ಉದ್ಯೋಗಾವಕಾಶಕ್ಕೆ ಬೇಕಾದ ಸಮರವನ್ನು ಸಂಘಟಿಸಿ ಹೇಗೆ ಸಾಮೂಹಿಕ-ರಾಷ್ಟ್ರೀಯ ವಿಪ್ಲವವಾಗಿ ಬದಲಾಯಿಸುವುದು? ಸುಲಕ್ಷಣ ನಾದ ಆ ಮನುಷ್ಯ ಅದೆಲ್ಲವನ್ನೂ ವಿವರಿಸಿ ಹೇಳುತ್ತಿದ್ದ. ಅವನ ಪ್ರತಿಯೊಂದು ನೋಟವೂ ಮಾತೂ ಚಲನೆಯೂ ವಿಪ್ಲವದ ಬೆಂಕಿಯ ಜ್ವಾಲೆಯನ್ನು ಸುರಿಸುತ್ತಿತ್ತು. ಅವನು ಹೇಳಿದ:

"ಕೊಲ್ಲಬೇಕಾದೀತು: ರಕ್ತ ಚೆಲ್ಲಬೇಕಾದೀತು; ರಕ್ತದ ಹೊಳೆಯಲ್ಲಿ ಮುಳುಗಿ ಈಜಬೇಕಾಗಿ ಬಂದೀತು—ಸಮತ್ವ ಮತ್ತು ಸಹೋದರತ್ವದ ಸಲುವಾಗಿ; ಸ್ನೇಹದ ಸಲುವಾಗಿ."

"ಅದು ಹೇಗೆ?" ಅಂತೋಣಿ ತನಗರಿವಿಲ್ಲದೇ ಫಕ್ಕನೆ ಕೇಳಿಬಿಟ್ಟ. ತಡೆದರೆ ನಿಲ್ಲದ ರೀತಿಯ ಮಾತುಗಳು ಹೊರಟುವು:

"ಕೊಲ್ಲುವುದರಿಂದ ಸ್ನೇಹ ಸಂಪಾದಿಸುವುದು ಹೇಗೆ? ಕೊಂದರೆ ಹೇಗೆಂದು ಬೇಕಲ್ಲಾ. ಸಮತ್ವವುಂಟಾಗೋದು?"

ರೋಕಿ ನಡುವೆ ಬಾಯಿಹಾಕಿ ಮಾತಾಡಿದ:

"ಹೇಗೆಂದೊ? ಹೇಗೆಂದರೆ ಅದು ಹಾಗೆ...... ಎಂದರೆ ಸ್ನೇಹದೃಷ್ಟಿಯಿಂದ ಕಾಣದವರನ್ನು ಕೊಲ್ಲಬೇಕೆಂದು ಹೇಳೋದು."

"ಕೊಂದು, ಆಮೇಲೆ?"

"ಕೊಂದು ನಾವು ಅಧಿಕಾರ ತೆಗೆದುಕೊಳ್ಳಬೇಕು."

"ಕೊಲ್ಲದೆಯೂ ರಕ್ತದ ಹೊಳೆಯಲ್ಲಿ ಈಜದೆಯೂ ಏನಾದರೂ ಮಾಡಲು ಸಾಧ್ಯವೋ ಎಂದು ನಾನು ಕೇಳೋದು?"

ಪದ್ಮನಾಭನ್ ಅದಕ್ಕೆ ಉತ್ತರಿಸಿದ:

"ಸಾಧ್ಯವಿಲ್ಲ. ಏನೇ ಆದರೂ ಸಾಧ್ಯವಿಲ್ಲ."

ರೋಕಿ ಕ್ಷಮಾಹೀನನಾಗಿ ಹೇಳಿದ

"ಹೆಡೆಯೆತ್ತಿ ಕಡಿಯಲು ಬರುತ್ತಿರುವ ಹಾವಿಗೆ ಚುಂಬಿಸಬೇಕೆಂದು ಅಣ್ಣ ಹೇಳೋದು."

ಅಂತೋಣಿ ಆಮೇಲೆ ಏನೂ ಮಾತಾಡಲಿಲ್ಲ.

## (೨೪)

ಅನ್ನೆ ಸಂಪೂರ್ಣ ಸಂತೃಪ್ತೆ. ಅವಳ ಅಣ್ಣಂದಿರು ಜೈಲಿನಲ್ಲಿಯೂ ಇಲ್ಲ, ದೂರವೆಲ್ಲಿಯೂ ಇಲ್ಲ. ಅವರು ದಿನಾಲೂ ಮನೆಗೆ ಬರುತ್ತಿದ್ದರು. ಮನೆವಾರ್ತೆಗೆ

ಅಗತ್ಯವಿರುವುದನ್ನೆಲ್ಲಾ ಅವರು ನಿರ್ವಹಿಸುತ್ತಿದ್ದರು. ಅವರು ಮನೆಯಲ್ಲೇ ರಾತ್ರಿ ಮಲಗಿ ನಿದ್ರಿಸುತ್ತಿದ್ದರು—ಅದುವೇ ಅವಳಿಗೆ ಸಮಾಧಾನ. ಮನೆಯಲ್ಲಿ ನಿರ್ಭಯ ವಾಗಿ ಜೀವಿಸಬಹುದಾಗಿತ್ತು, ಅದು ಅವಳಿಗೆ ಎಲ್ಲದಕ್ಕಿಂತಲೂ ಸಮಾಧಾನ.

ಅವಳು ಪ್ರತಿದಿನ ಕನ್ಯಾ ಮರಿಯಳ ಮುಂದೆ ಕುಳಿತು ಪ್ರಾರ್ಥಿಸುತ್ತಿದ್ದಳು, ತನ್ನ ತಂದೆತಾಯಿಯರ ಆತ್ಮಗಳಿಗೆ ಶಾಶ್ವತ ಶಾಂತಿ ದೊರಕಬೇಕೆಂದು. ತನ್ನ ಅಣ್ಣಂದಿರು ಇನ್ನು ಆಪತ್ತಿಗೊಳಗಾಗಬಾರದೆಂದು ಅವಳು ದೇವರಲ್ಲಿ ಯಾಚಿಸುತ್ತಿದ್ದಳು.

ಅಂತೋಣಿ ಮತ್ತು ರೋಕಿಯರು ಏನು ಕೆಲಸ ಮಾಡುತ್ತಾರೆಂದು ಅವಳು ಗಮನಿಸುತ್ತಿರಲಿಲ್ಲ. ಅದನ್ನೆಲ್ಲಾ ತಿಳಿಯುವ ಕುತೂಹಲವೂ ಅವಳಿಗಿಲ್ಲ. ಅವರಿಗೆ ಅವಳಲ್ಲಿ ಮಮತೆ ಇದೆ, ಅವಳಿಗೆ ಅವರಲ್ಲಿಯೂ ಇದೆ. ಈ ಪರಸ್ಪರ ವಾತ್ಸಲ್ಯವೇ ಅವಳಿಗೆ ಬೇಕಾದುದು. ಹಿಂದೆ ನಡೆದ ಅನಿಷ್ಟಗಳನ್ನು ನೆನದುಕೊಂಡು ಅವಳು ಪ್ರಾರ್ಥಿಸುತ್ತಿದ್ದಳು, ಇನ್ನೇನೂ ಮತ್ತೆ ಬಾರದಂತೆ.

"ಸದ್ಗುಣಭರಿತೆಯಾದ ಮರಿಯಮ್ಮಾ, ನನ್ನ ಅಣ್ಣಂದಿರಿಗೆ ಆಪತ್ತು ಬರಿಸ ಬೇಡ ತಾಯಿ !"

ರಾತ್ರಿ ಗುಪ್ತಾಲೋಚನಾ ಸಭೆ ಕಳೆದ ಮೇಲೆ ತನ್ನ ಅಣ್ಣಂದಿರಿಗೆ ಊಟ ಕೊಟ್ಟಾದ ಮೇಲೆ ಅವಳೂ ಊಟ ಮಾಡುತ್ತಿದ್ದಳು. ಅವರಿಬ್ಬರೂ ಚಾವಡಿಯಲ್ಲಿ ಚಾಪೆ ಹಾಕಿ ಮಲಗುತ್ತಿದ್ದರು. ಅವಳು ಒಳಗೆ ಕೋಣೆಯಲ್ಲಿ ಮಲಗುತ್ತಿದ್ದಳು. ಕೆಲವೊಮ್ಮೆ ಅವಳು ರಹಸ್ಯ ಸಭೆಯ ಮಾತುಕತೆಗಳನ್ನು ತಟ್ಟಿಯ ಮರೆಯಲ್ಲಿ ನಿಂತು ಕೇಳುತ್ತಿದ್ದಳು. ಅಲ್ಲಿ ನಡೆಯುವ ಮಾತುಕತೆಗಳೊಂದೂ ಅವಳಿಗೆ ಅರ್ಥವಾಗುತ್ತಿರ ಲಿಲ್ಲ. ಅವಳಿಗೂ, ತಾಯಿಗೂ ಹಣ, ಅಕ್ಕಿ, ಸಾಮಾನುಗಳನ್ನು ತಂದುಕೊಟ್ಟಿದ್ದ, ತಾನು ಒಬ್ಬಂಟಿಗಳಾಗಿದ್ದಾಗ ತನ್ನನ್ನು ರಕ್ಷಿಸಿದ್ದ, ಪೋಲೀಸರ ಆಕ್ರಮಣದಿಂದ ತನ್ನ ಮರ್ಯಾದೆಯನ್ನು ಉಪಾಯದಿಂದ ರಕ್ಷಿಸಿದ, ಆ ತೆಳ್ಳಗಿನ ಮನುಷ್ಯನ ಭಾಷಣವನ್ನು ಶ್ರದ್ಧಾಪೂರ್ವಕ ಕೇಳುತ್ತಿದ್ದಳು. ನಿಶ್ಚಲವಾಗಿ ಕುಳಿತುಕೊಂಡು, ಅವನ ಬಾಯಿಯಿಂದ ನಿರರ್ಗಳವಾಗಿ ಹೊರಡುತ್ತಿದ್ದ ಮಾತುಗಳನ್ನು ಅರ್ಥಮಾಡಿಕೊಳ್ಳಲು ಶ್ರಮಿಸುತ್ತಿದ್ದಳು. ಅವಳಿಗೊಂದೂ ತಿಳಿಯುತ್ತಿರಲಿಲ್ಲ. ಅವನು ಅನ್ಯಭಾಷೆಯಲ್ಲಿ ಮಾತಾಡುವಂತೆ ಅವಳಿಗೆ ತೋರುತ್ತಿತ್ತು. ಆದರೂ ಅವಳು ಹಾಗೇ ನೋಡುತ್ತಾ ನಿಲ್ಲುತ್ತಿದ್ದಳು. ಆ ಮಾತುಗಳನ್ನು ಕೇಳುವುದು ಅವಳಿಗೆ ಸಂತೋಷದಾಯಕವಾಗಿತ್ತು.

ಒಂದು ದಿನ ರಾತ್ರಿ ಅವಳು ಒಳಗೆ ಅಡುಗೆಕೋಣೆಯಲ್ಲಿ ಕಾಫಿ ಮಾಡುತ್ತಿದ್ದಳು. ಹೊರಗೆ ಸುಂದರವಾದ ಮುಖದ ಆ ವಿಪ್ಲವಕಾರಿ ಯುವಕನು ಮಾತಾಡುತ್ತಿದ್ದ. ಕೊನೆಗೆ ಅವನು ತನ್ನ ಪಲ್ಲವಿಯನ್ನು ಪುನರಾವರ್ತಿಸಿದ:

"ಕೊಲ್ಲಬೇಕಾದೀತು; ರಕ್ತ ಚೆಲ್ಲಬೇಕಾದೀತು, ರಕ್ತದ ಹೊಳೆಯಲ್ಲಿ ಮುಳುಗಿ ಈಜಬೇಕಾದೀತು."

ಅನ್ನೆ ಫಕ್ಕನೆ ನಡುಗಿಬಿಟ್ಟಳು. ಅವಳು ಆ ಮಾತು ಕೇಳುತ್ತಿರುವುದು ಅದೇ

ಮೊದಲು. ಅವಳು ಬಾಗಿಲಿನ ಸಮೀಪ ಬಂದು, ಆ ವಿಪ್ಲವಕಾರಿ ಯುವಕನ ಮುಖ ವನ್ನು ನೋಡಿದಳು. ಅವನ ಕಣ್ಣುಗಳು ಬೆಂಕಿಯ ಜ್ವಾಲೆಯನ್ನು ಹೊರಸೂಸು ತ್ತಿದ್ದುವು. ಅವಳು ಆ ತೆಳ್ಳಗಿನ ಮನುಷ್ಯನ ಕಡೆಗೆ ನೋಡಿದಳು. ಅವನು ಕಣ್ಣುಗಳನ್ನು ಮುಚ್ಚಿ ಚಿಂತಾಮಗ್ನನಾಗಿ ಕುಳಿತಿದ್ದ. ಆ ಮೇಲೆ ಅವಳು, ಹಲ್ಲುಮಸೆಯುತ್ತ ಕಣ್ಣು ಬಿಟ್ಟು ನೋಡುತ್ತಿದ್ದ ರೋಕಿಯನ್ನು ಕಂಡಳು. ಅವಳಿಗೆ ಭಯವಾಯಿತು. ಎಲ್ಲರ ಮುಖದಲ್ಲಿಯೂ ಕ್ರೌರ್ಯ ಅಲೆಯಾಡುತ್ತಿತ್ತು. ಅಂತೋಣಿ ಮಾತ್ರ ತಲೆತಗ್ಗಿಸಿ, ಬೆರಳಿನಿಂದ ನೆಲದ ಮೇಲೆ ಏನೇನೋ ಗೀಚುತ್ತಿದ್ದ.

ಸ್ವಲ್ಪ ಸಮಯದ ವರೆಗೆ ಸಭೆಯು ನಿಶ್ಶಬ್ದವಾಗಿತ್ತು. ಫಕ್ಕನೆ ಅಂತೋಣಿ ತಲೆಯೆತ್ತಿ ಕೇಳಿದ:

"ಕೊಲ್ಲಬೇಕಾದೀತೋ?"

ಪದ್ಮನಾಭನ್ ಉತ್ತರಿಸಿದ:

"ಕೊಲ್ಲಬೇಕಾಗಿ ಬಂದರೆ ಕೊಲ್ಲಬೇಕಾದೀತು."

"ಅದು ಹೇಗೆ ಕೊಲ್ಲಬೇಕಾಗಿ ಬರೋದು?"

"ಹೇಗೆಂದೊ? ಕೊಲ್ಲದೆ ಗತ್ಯಂತರವಿಲ್ಲವೆನಿಸಿದಾಗ ಒಂದಾಗಿ ಕೊಲ್ಲಲೇಬೇಕು."

"ಕೊಲ್ಲುವುದಕ್ಕೆ ಮುಟ್ಟುವಷ್ಟು ಅನಿವಾರ್ಯ ಸ್ಥಿತಿ ಉಂಟಾಗೋದು ಹೇಗೆಂದು ನಾನು ಕೇಳೋದು?"

ರೋಕಿ ಕ್ಷಮಾಹೀನನಾಗಿ ಮೈಕುಡುಗಿ ಎದ್ದ. ಅವನು ಅಂತೋಣಿಯ ಕಡೆಗೆ ಬೆರಳು ತೋರಿಸಿ ಘರ್ಜಿಸಿದ:

"ಹೀಗೆ ಕೇಳುವವರನ್ನು ಮೊದಲು ಕೊಲ್ಲಬೇಕು."

ಸಭೆಯು ಸ್ತಂಭೀಭೂತವಾಯಿತು. ತಟ್ಟಿಯ ಬಾಗಿಲಲ್ಲಿ ಮರೆಯಾಗಿ ನಿಂತಿದ್ದ ಅನ್ನೆ ಮುಂದೆ ನೆಗೆದು ಬಂದಳು. ಸಿಟ್ಟಿನಿಂದ ನಡುಗಿಕೊಂಡು ಅವಳು ರೋಕಿಯೊಡನೆ ಕೇಳಿದಳು:

"ಯಾರನ್ನು?—ಯಾರನ್ನು ಕೊಲ್ಲಬೇಕಾದ್ದು?...... ಯಾರನ್ನು ಸಣ್ಣಣ್ಣ ಕೊಲ್ಲಬೇಕಾದ್ದು? ಹೇಳು."

ರೋಕಿ ತಲೆತಗ್ಗಿಸಿದ. ಅಂತೋಣಿ ಎದ್ದು ಅನ್ನೆಯ ಹತ್ತಿರ ಹೋದ. ಅವನು ಬಹಳ ಸಮಾಧಾನಚಿತ್ತದಿಂದ ಹೇಳಿದ:

"ನೀನು ಒಳಗೆ ಹೋಗು ತಂಗಿ. ಅವನು ಸುಮ್ಮನೆ ಹೇಳುತ್ತಿದ್ದಾನೆ."

ಅವಳ ಕಣ್ಣುಗಳು ನೀರಿನಿಂದ ತುಂಬಿದುವು. ಗದ್ಗದ ಕಂಠದಿಂದ ಅವಳು ಕೇಳಿದಳು:

"ಕೊಲ್ಲೋದಕ್ಕೊ?...... ಕೊಲ್ಲಲೂ ಕೊಲ್ಲಿಸಲೂ ಇದಕ್ಕಾಗಿಯೇ ನೀವು ದಿನಾಲೂ ಇಲ್ಲಿ ಸೇರೋದು?"

ಅಂತೋಣಿ ಅವಳಿಗೆ ಆಜ್ಞಾಪಿಸಿದ:

"ನೀನೇಕೆ ಹೊರಗೆ ಬಂದುದು? ನಿನ್ನನ್ನು ಯಾರಾದರೂ ಕರೆದರೋ?...... ಹೋಗು, ಒಳಗೆ ಹೋಗು."

ಅವಳು ಒಳಗೆ ಹೋದಳು. ಸಭೆಯು ನಿಶ್ಚಲವೂ ನಿಶ್ಶಬ್ದವೂ ಆಗಿತ್ತು. ರೋಕಿ ಚಾವಡಿಗಿಳಿದು ತಲೆಗೆ ಕೈಯಿಟ್ಟು ಕುಳಿತ.

ತೆಳ್ಳಗಿನ ಮನುಷ್ಯ ಮೆಲ್ಲಗೆ ಎದ್ದ. ಸಾವಕಾಶವಾಗಿ ಅವನು ಹೇಳಿದ:

"ನಾವು ಹೋಗೋಣ. ಇನ್ನು ಮೇಲೆ ಇಲ್ಲಿ ಸಭೆ ಸೇರೋದು ಬೇಡ."

ಅವನು ಹೊರಟು ನಡೆದ. ಎಲ್ಲರೂ ಅವನನ್ನು ಅನುಸರಿಸಿದರು. ಅಂತೋಣಿ ಅಂಗಳಕ್ಕಿಳಿದು ಕೈಕಟ್ಟಿ ನಡೆಯಲು ಪ್ರಾರಂಭಿಸಿದ. ಮಧ್ಯರಾತ್ರಿಯಾಯಿತು. ರೋಕಿ ಚಾವಡಿಯಲ್ಲಿ ಮಲಗಿಕೊಂಡಿದ್ದ. ಅಂತೋಣಿ ಅಂಗಳದಲ್ಲಿ ನಡೆಯುತ್ತಲೇ ಇದ್ದ. ಅನ್ನೆ ದೀಪ ಹಿಡಿದುಕೊಂಡು ಅಂಗಳಕ್ಕೆ ಬಂದಳು. ಮೆಲ್ಲನೆ ಅಂತೋಣಿಯ ಹತ್ತಿರ ಬಂದು ಅವನನ್ನು ಕೂಗಿದಳು:

"ದೊಡ್ಡಣ್ಣ !"

"ಹುಂ."

"ಊಟ ಮಾಡುವುದಿಲ್ಲವೋ?"

"ನಿನಗೆ ಊಟ ಆಯಿತೊ?"

"ಇಲ್ಲ."

"ಅವನನ್ನು ಕರೆದು ಊಟ ಕೊಟ್ಟು, ನೀನೂ ಊಟ ಮಾಡು."

"ನಿನಗೆ?"

"ನನಗೆ ಹಸಿವಿಲ್ಲ."

"ಅದೇನು ಹಸಿವಿಲ್ಲದ್ದು?"

"ಅದೊಂದನ್ನೂ ನೀನು ಕೇಳಬೇಡ. ಅವನನ್ನು ಎಬ್ಬಿಸಿ ಊಟ ಕೊಡು, ನೀನೂ ಊಟ ಮಾಡು."

"ದೊಡ್ಡಣ್ಣ, ಆಗ ನಾನು ಹೇಳಿದ್ದಕ್ಕೆ ಕೋಪವೋ ನಿನಗೆ?"

ಅವಳ ಕೊರಳು ಬಿಗಿಯಿತು. ಅವಳು ಅಳುತ್ತಾ ಹೇಳಿದಳು:

"ಅದರ ಬಗ್ಗೆ ಸಿಟ್ಟುಯೆಂದಾದರೆ, ನಾನು ಅವರ ಕಾಲು ಹಿಡಿದು ಕೇಳಿಕೊಳ್ಳುವೆನು, ಕ್ಷಮಿಸಬೇಕೆಂದು."

ಅವನು ಅವಳ ಬೆನ್ನಮೇಲೆ ಕೈಯಾಡಿಸಿ ಸಮಾಧಾನಪಡಿಸಿ ಹೇಳಿದ:

"ನೀನು ಸಿಟ್ಟುಬರುವ ನುಡಿಗಳೇನೂ ಹೇಳಲಿಲ್ಲ ತಂಗಿ, ಹೇಳಬೇಕಾದ್ದನ್ನೇ ಹೇಳಿದ್ದು."

"ಸಿಟ್ಟಿನ ಮಾತು ಹೇಳಿದ್ದು, ನಾನು" ಎಂದುಕೊಂಡು ರೋಕಿ ಅಂಗಳಕ್ಕಿಳಿದ. ಅಣ್ಣನ ಮುಂದೆ ಮೊಣಕಾಲೂರಿ, ಗದ್ಗದ ಸ್ವರದಿಂದ ಅವನು ಹೇಳಿದ:

"ನನ್ನ ಅಣ್ಣನನ್ನು ಕೊಲ್ಲಬೇಕೆಂದು ಹೇಳಿದ್ದು ನಾನು. ಸಿಟ್ಟು ಬರುವ ಮಾತು ಹೇಳಿದ್ದು ನಾನು...... ಅಣ್ಣಾ ಕ್ಷಮಿಸು !"

"ಏಳು !—ಏಳು ತಮ್ಮಾ, ಏಳು !" ಅವನ ಕಣ್ಣುಗಳು ಕಣ್ಣೀರಿನಿಂದ ತುಂಬಿದುವು.

"ದೇವರೇ" ಅನ್ನೆ ಆಕಾಶದೆಡೆಗೆ ನೋಡಿದಳು.

## (೨೫)

ಕ್ರಿ.ಶ. ೧೯೩೮ರ ಸೆಪ್ಟೆಂಬರ್ ತಿಂಗಳು. ಎರಡನೇ ವಿಶ್ವಯುದ್ಧದ ಕಾರ್ಮೋಡಗಳು ಅಂತರಿಕ್ಷವನ್ನು ಆವರಿಸಿದ್ದುವು. ದೇಶೀಯ ಸ್ವಾತಂತ್ರ್ಯ ಹೋರಾಟದ ಬೆಂಕಿಯ ಅಗ್ನಿಷ್ಠಿಕೆಯಲ್ಲಿ ಭಾರತ ಕುದಿದು ಮಗುಚಿ ಸೂಸುತ್ತಿತ್ತು. ದೇಶದ ಬೇರೆಬೇರೆ ಭಾಗಗಳಲ್ಲಿ ಸಾಧಾರಣವಾಗಿ ಪ್ರಾರಂಭವಾದ ಸ್ವತಂತ್ರ ಸರಕಾರ ನಿರ್ಮಾಣದ ಪ್ರಕ್ಷೋಭಣವು ತಿರುವಾಂಕೂರಿನಲ್ಲಿ ಅಪ್ರತಿರೋಧ್ಯವಾದ ಬಿರುಗಾಳಿಯಾಗಿ ಮಾರ್ಪಟ್ಟಿತು. ಆ ಬಿರುಗಾಳಿಯ ಅತಿದೊಡ್ಡ ಕೇಂದ್ರ ಆಲಪ್ಪಿ ಪಟ್ಟಣವಾಗಿತ್ತು. ಅಲ್ಲಿಯ ಹೋರಾಟದ ಮುಂದಾಳುತ್ವವನ್ನು ಕಾರ್ಮಿಕರ ವರ್ಗ ವಹಿಸಿದ್ದಿತು.

ಅಂದು ತಿರುವಾಂಕೂರು ಮಹಾರಾಜರ ಹುಟ್ಟುಹಬ್ಬವಾಗಿತ್ತು. ಅದು, ತಿರುವಾಂಕೂರಿನ ಅತಿ ದೊಡ್ಡ ದೇಶೀಯೋತ್ಸವವೂ ಮಂಗಳ ದಿನವೂ ಆಗಿತ್ತು. ಗುಡಿಸಲು, ಅರಮನೆ, ವಿದ್ಯಾಲಯ, ದೇವಸ್ಥಾನ, ತೇರುಬೀದಿ ಇತ್ಯಾದಿ ಎಲ್ಲೆಡೆಗಳಲ್ಲಿಯೂ "ರಾಜಾಧಿರಾಜರು ಚಿರಾಯುವಾಗಲಿ. ಸಚ್ಚಿದಾನಂದನಿಗೆ ಜಯವಾಗಲಿ" ಎಂಬ ಪ್ರಾರ್ಥನಾಗಾನ ಕೇಳಿಬರುವ ದಿನವಾಗಿತ್ತಂದು. ಆದರೆ ಈ ಸಲ ಆ ಪುಣ್ಯ ದಿನವು ದೇಶೀಯೋತ್ಸವವಾಗಿರಲಿಲ್ಲ. ಅಂದು ಯಾರೂ "ರಾಜರಾಜಾಧಿಪ..." ಹಾಡಲಿಲ್ಲ. ಜನರು ಆ ದಿನವನ್ನು ರಾಷ್ಟ್ರೀಯ ಪ್ರತಿಷೇಧ ದಿನವಾಗಿ, ದೇಶೀಯ ದುಃಖದ ದಿನವಾಗಿ ಆಚರಿಸಿದರು.

ರಾಜಪ್ರತಿನಿಧಿಯಾದ ದಿವಾನ್‌ಜಿಯ ಆಳ್ವಿಕೆಯನ್ನು ವಿರೋಧಿಸಿ ಮುಷ್ಕರ ಹೂಡುವುದೆಂದು ಕಾರ್ಮಿಕರು ಪ್ರಕಟಿಸಿದರು. ಫ್ಯಾಕ್ಟರಿಗಳ ಹೊಗೆನಳಿಗೆಗಳಲ್ಲಿ ಅಂದು ಹೊಗೆ ಹೊರಡುವುದು ಕಾಣಲಿಲ್ಲ. ಪಟ್ಟಣದ ಪರಿಸರಗಳಿಂದ ಪಟ್ಟಣಕ್ಕೆ ಧ್ವನಿಪೂರ್ಣವಾಗಿ ಹೊಕ್ಕ ಜನಪ್ರವಾಹ, ಕಾರ್ಮಿಕಶಕ್ತಿಗಳು ಸಂಹಾರಶಕ್ತಿಯನ್ನು ಪ್ರತಿನಿಧೀಕರಿಸಿದುವು. ತೇರುಬೀದಿಗಳಲ್ಲಿ ಕೂಲಿ ವರ್ಗದವರು ರಾಜರ ಮತ್ತು ಅವರ ಆಳ್ವಿಕೆಯ ವಿರುದ್ಧವಾಗಿ ಕೈಮುಷ್ಟಿ ಹಿಡಿದು ಘೋಷಣೆಗಳನ್ನು ಕೂಗಿದರು.

ಸ್ವಾತಂತ್ರ್ಯದ ಉಗ್ರಗಾಮಿತ್ವವನ್ನು ತಡೆಯಲು, ಅದನ್ನು ಹೊಡೆದಿಕ್ಕಿ ನಾಶ

ಮಾಡಲು ಪ್ರಭುತ್ವದ ಕಡೆಯಿಂದ ವಿರೋಧಿ ಮರ್ದನ ಪಡೆಗಳನ್ನು ಪಟ್ಟಣದಲ್ಲಿ ಕೇಂದ್ರೀಕರಿಸಿದ್ದರು. ಸೈನಿಕ ವ್ಯಾನುಗಳು ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಿದ್ದುವು. ಲಾಠಿ ಹಿಡಿದು ಪೋಲೀಸರು ಮುಖ್ಯಮಾರ್ಗಗಳ ಬದಿಗಳಲ್ಲಿ ಗಸ್ತು ನಡೆಸುತ್ತಿದ್ದರು. ಅವರ ಲಾಠಿಗಳನ್ನೂ ಕೋವಿಗಳನ್ನೂ ಧಿಕ್ಕರಿಸಿಕೊಂಡು ಪಂಥಾಹ್ವಾನದೊಂದಿಗೆ ಕಾರ್ಮಿಕ ವರ್ಗದವರು ಕೈಗಳನ್ನು ಮುಷ್ಟಿ ಹಿಡಿದು ಎತ್ತಿ ಘೋಷಣೆಗಳನ್ನು ಕೂಗಿದರು.

ಆ ತೆಳ್ಳಗಿನ ಮನುಷ್ಯ ಮಿಂಚಿನಂತೆ ಸರ್ವವ್ಯಾಪಿಯಾಗಿದ್ದ. ಒಮ್ಮೆ ಮಿನುಗು ವುದು ಮತ್ತೆ ಇರುಳಿನ ಗವಿಯಲ್ಲಿ ಮರೆಯಾಗುವುದು, ಮತ್ತೊಮ್ಮೆ ಕಾಣಿಸುವುದು, ಮರೆಯಾಗುವುದು— ಈ ರೀತಿಯಲ್ಲಿ ಅವನು ಗೋಚರನಾಗಿಯೂ ಅಗೋಚರ ನಾಗಿಯೂ ಬಿರುಗಾಳಿಯನ್ನು ಊದಿಊದಿ ಹಬ್ಬಿಸುತ್ತಿದ್ದ. ಬಂಧುಗಳನ್ನೂ ಶತ್ರು ಗಳನ್ನೂ ಆಶ್ಚರ್ಯಕ್ಕೊಳಪಡಿಸುವ ಒಂದು ಮಾರಕಶಕ್ತಿಯಾದ.

ಅನ್ನೆ ಏಕಾಕಿನಿಯಾಗಿ ಚಾವಡಿಯಲ್ಲಿ ಕಾದುಕುಳಿತಿದ್ದಳು. ಮೂರು ದಿನಗ ಗಳಾದುವು ಅವಳ ಅಣ್ಣಂದಿರು ಮನೆಗೆ ಬಾರದೆ. ಮೂರು ದಿನಗಳಾದುವು ಅವಳು ನಿದ್ರಾಹಾರವನ್ನು ಬಿಟ್ಟು. ರಾತ್ರಿಯಿಡೀ ಅವಳು ದೀಪ ಹಚ್ಚಿಟ್ಟುಕೊಂಡು ಕಾದು ಕುಳಿತಿದ್ದಳು. ಆಹಾರ ತಯಾರಿಸಲು ಬೇಕಾದ ಸಾಮಾನುಗಳೆಲ್ಲಾ ಅಲ್ಲಿ ಇದ್ದುವು, ಆದರೆ ಅವಳಿಗೆ ಏನು ತಯಾರಿಸಬೇಕೆಂದು ತೋಚುತ್ತಿರಲಿಲ್ಲ. ತಿನ್ನಬೇಕೆಂದೂ ತೋರುತ್ತಿರಲಿಲ್ಲ. ಅಣ್ಣಂದಿರಿಲ್ಲದೆ ಅವಳಿಗೇನೂ ಬೇಕಿಲ್ಲ.

ವೇಲಾಯುಧನ ತಾಯಿಯೂ ನೆರೆಹೊರೆಯ ಇತರ ಹೆಂಗರಸೂ ಏನೇನೋ ಹೇಳುವುದನ್ನು ಅವಳು ಕೇಳಿದ್ದಳು. ಆಳ್ವಿಕೆಯ ಬಗ್ಗೆ ಅವಳಿಗೇನೂ ಅರಿಯದುದರಿಂದ ಜನತಾ ಸರಕಾರವೆಂದರೇನೆಂದು ಅವಳಿಗರಿಯದು. ಅವುಗಳನ್ನೆಲ್ಲಾ ತಿಳಿದುಕೊಳ್ಳ ಬೇಕೆಂಬ ಕುತೂಹಲವೂ ಅವಳಿಗಿರಲಿಲ್ಲ. ಅವಳಿಗಿರುವುದು ಒಂದೇ ವಿಚಾರ—ತನ್ನ ಅಣ್ಣಂದಿರು ದಿನಾಲೂ ಮನೆಗೆ ಬರಬೇಕೆಂದು; ಅವರಿಗೇನೂ ಆಪತ್ತು ಒದಗಬಾರದೆಂದು.

ಈ ಮೂರು ದಿನಗಳಲ್ಲಿಯೂ ಅವಳು ದೀಪ ಹಚ್ಚಿಟ್ಟು ಅಣ್ಣಂದಿರಿಗಾಗಿ ಕಾದು ಕುಳಿತಿದ್ದಾಗ ಆ ತೆಳ್ಳಗಿನ ಮನುಷ್ಯ ಬೇಲಿಯ ಹೊರಗಿನಿಂದ ತಲೆಯೆತ್ತಿ ನೋಡುವು ದನ್ನು ಅವಳು ಕಾಣುತ್ತಿದ್ದಳು. ಹಾಗೆ ನೋಡುವಾಗ ಅವಳು ಏಳುತ್ತಿದ್ದಳು. ಆದರೆ ಅವನು ಫಕ್ಕನೆ ಮರೆಯಾಗುತ್ತಿದ್ದ. ಒಂದಿನ ರಾತ್ರಿ ಅವನು ಎಂದಿನಂತೆ ತಲೆಯೆತ್ತಿ ನೋಡಿದಾಗ ಅವಳು ಕೂಗಿ ಕೇಳಿದಳು:

"ನನ್ನ ಅಣ್ಣಂದಿರು ಎಲ್ಲಿ?"

"ಬರುವರು" ಅಷ್ಟು ಮಾತ್ರ ಹೇಳಿ ಅವನು ಅಗೋಚರನಾದ.

ಬೆಳಗಾಗುತ್ತಲೇ ಅಂತೋಣಿ ಹಿತ್ತಿಲ ಬೇಲಿಯ ಪಡಿಬಾಗಿಲನ್ನು ದಾಟಿ ಬಂದ. ಅವಳು ಥಟ್ಟನೆ ಎದ್ದು ಕೇಳಿದಳು:

"ಕಣ್ಣು ನೋಯಲಿಕ್ಕೆ ತೊಡಗಿತಲ್ಲಾ ನಿಮ್ಮ ದಾರಿ ನೋಡಿನೋಡಿ. ಸಣ್ಣಣ್ಣ ನೆಲ್ಲಿ?"

"ಅವನು ಬರಲಿಲ್ಲವೆ?"

"ಇಲ್ಲ."

"ಹೋಗಿ ಮನೆಯಲ್ಲಿರೆಂದು, ನಾನು ಅವನನ್ನು ಕಳಿಸಿದ್ದೆನಲ್ಲಾ?"

"ಹಾಗಿದ್ದರೆ, ಮತ್ತೇಕೆ ಬರಲಿಲ್ಲ?"

ಅಂತೋಣಿ ಚಿಂತಾಮಗ್ನನಾದ. ಆಗ ಅವಳು ಕೇಳಿದಳು:

"ದೊಡ್ಡಣ್ಣ, ನೀನೇನು ಆಲೋಚಿಸುತ್ತಿರುವುದು?"

"ಆಲೋಚಿಸೋದಾ?...... ಆಲೋಚಿಸೋದು......"

"ನೀನೇಕೆ ಇದುವರೆಗೆ ಬರಲಿಲ್ಲ?"

"ಬರದಿದ್ದುದು?...... ಬರದಿದ್ದುದು......"

"ನೀನೇಕೆ ಯಾವುದನ್ನೂ ಸಂಪೂರ್ಣವಾಗಿ ಹೇಳುವುದಿಲ್ಲ?"

"ಹೇಳುವುದಿಲ್ಲ?...... ಹೇಳದ್ದು......" ಅವನು ಹಿಂತಿರುಗಿ ಹೋಗಲು ಉದ್ದೇಶಿಸಿ, ಅವಳೊಡನೆ ಹೇಳಿದ:

"ನಾನು ಹೋಗಿಬರುತ್ತೇನೆ."

"ಈ ಮುಂಜಾನೆಯಲ್ಲಿ ನೀನು ಪುನಃ ಎಲ್ಲಿಗೆ ಹೋಗೋದು?"

"ಹೋಗೋದೊ?...... ಹೋಗೋದು...... ನಾನು ಹೋಗಿಬರುತ್ತೇನೆ". ಅವನು ಕನಸಿನಲ್ಲೋ ಎಂಬಂತೆ ಕಿರುದಾರಿಗಿಳಿದು ನಡೆದ.

ಅನ್ನೆ ದೀರ್ಘವಾಗಿ ಉಸಿರುಬಿಟ್ಟಳು. ಕಿರುದಾರಿಯಲ್ಲಿ ಅಂತೋಣಿಯ ಸ್ವರ ಕೇಳಿ, ಅವಳು ಆಲಿಸಿದಳು.

"ಯಾರದು?"

"ನಾನು."

"ರೋಕಿಯೊ? ನೀನು ಎಲ್ಲಿದ್ದೆ?"

"ನಾನೊ?...... ನಾನು......"

"ನಿನ್ನಲ್ಲಿ ನಾನು ಹೇಳಲಿಲ್ಲವೆ, ಆ ಕೂಟ ನಿನಗೆ ಒಡಿಸದೆಂದು?"

"ಒಡಿಸದೇನು?"

"ಕೊಲೆ ಮಾಡೋದು ನಮಗೆ ಒಡಿಸದ ಕೆಲಸ. ಅವನು ಕೊಲ್ಲಲೂ ಕೊಲ್ಲಿಸಲೂ ತಿರುಗಾಡುವವನಾಗಿದ್ದಾನೆ. ಆ ಕೂಟ ನಮಗೆ ಒಡಿಸದು."

"ನನ್ನ ಕೆಲಸವನ್ನು ನಾನು ನೋಡಿಕೊಳ್ಳುತ್ತೇನೆ" ರೋಕಿ ವೃಥಾ ಸ್ವರದಲ್ಲಿ ಹೇಳಿದ.

ಅನ್ನೆ ಕಿರುದಾರಿಗೆ ಓಡಿಬಂದಳು. ಅವಳು ಕೇಳಿದಳು:

"ಸಣ್ಣಣ್ಣ ಏನು ಹೇಳಿದ್ದು?"

ಅಂತೋಣಿ ಅವಳಿಗೆ ಆಜ್ಞಾಪಿಸಿದ:

"ನೀನು ಹೋಗು. ನೀನು ಮನೆಗೆ ಹೋಗು."

ಅವನು ತಲೆತಗ್ಗಿಸಿ ನಡೆದ. ರೋಕಿ ತಲೆಯೆತ್ತಿ ಎದುರುಭಾಗಕ್ಕೆ ನಡೆದ. ಅವಳು ದೀರ್ಘವಾಗಿ ಉಸಿರುಬಿಟ್ಟಳು. ಅವಳು ಮನೆಗೆ ಹೋದಳು.

ಅವಳು ಅಂಗಳದಲ್ಲಿ ನಿಂತು ನೋಡುತ್ತಿದ್ದಳು. ರೋಕಿಯು ಅಣ್ಣನೊಡನೆ ಧಿಕ್ಕಾರವಾಗಿ ಮಾತಾಡುವುದನ್ನು ಅವಳು ಕೆಲವು ದಿನಗಳಿಂದ ಕೇಳುತ್ತಿದ್ದಳು. ಆ ತೆಳ್ಳಗಿನ ಮನುಷ್ಯನಿಂದ ಅವನನ್ನು ದೂರ ಮಾಡಲು ಅಂತೋಣಿ ಪ್ರಯತ್ನಿಸುತ್ತಿದ್ದಾನೆಂದು ಅವಳಿಗೆ ಗೊತ್ತಾಯಿತು. ಆದರೆ ಅವನು ಕೊಲ್ಲಲು ಮತ್ತು ಕೊಲ್ಲಿಸಲು ತಿರುಗಾಡುವುದೆಂದು ಅಣ್ಣ ಹೇಳುವುದು ಅವಳಿಗೆ ಹಿತವಾಗಲಿಲ್ಲ. ಅವನು ಅನ್ಯರಿಗೆ ಸಹಾಯ ಮಾಡಲು ಮತ್ತು ಕಷ್ಟದಲ್ಲಿರುವವರನ್ನು ರಕ್ಷಿಸಲು ತಿರುಗಾಡುವವನೆಂದು ಅವಳಿಗೆ ಮನದಟ್ಟಾಗಿತ್ತು.

"ಬಂದರೋ?"

ಅವಳು ತಿರುಗಿ ನೋಡಿದಳು. ಆ ತೆಳ್ಳಗಿನ ಮನುಷ್ಯ ಕಿರುದಾರಿಯಲ್ಲಿ ನಿಂತುಕೊಂಡು ಕೇಳಿದ. ಅವಳು ಉತ್ತರಿಸಿದಳು:

"ಬಂದರು. ಆದರೆ......"

"ಮತ್ತೇನಾಯ್ತು?" ಅವನು ಅಂಗಳಕ್ಕೆ ಬಂದ.

"ಆಮೇಲೆ ಹೊರಟುಹೋದರು."

ಅವನು ಮೌನವಾಗಿ ನಿಂತ. ಅವಳು ಹೇಳಿದಳು:

"ಎಲ್ಲರೂ ಹೇಳುತ್ತಾರೆ, ನೀವು ಕೊಲ್ಲಲೂ ಕೊಲ್ಲಿಸಲೂ ಓಡಾಡುವಿರೇದು."

"ಯಾರು? ನಾನೊ?"

"ಹುಂ."

"ಅದು ಸರಿಯೆಂದು ನಿನಗೆ ಅನ್ನಿಸಿದೆಯೆ?" ಅವನು ಮತ್ತೂ ಸ್ವಲ್ಪ ಹತ್ತಿರ ನಿಂತ.

"ಇಲ್ಲ."

"ಅದು ಸತ್ಯ. ಕೊಲ್ಲಲೂ ಕೊಲ್ಲಿಸಲೂ ನನಗೇನೂ ಅಳುಕಿಲ್ಲ" ಮಾರಕವಾದ ಒಂದು ಶಬ್ದವಾಗಿತ್ತದು.

ಅವಳು ನಡುಗಿಬಿಟ್ಟಳು. ಆದರೆ ಧೈರ್ಯದಿಂದ ಹೇಳಿದಳು:

"ಅದು ಸುಳ್ಳು."

"ಹಾಗಾದರೆ......"

ಅವನು ಉದ್ವೇಗಭರಿತನಾಗಿ ಹೇಳಿದ:

"ಕೊಲ್ಲಲು ಮತ್ತು ಕೊಲ್ಲಿಸಲು ಮಾತ್ರವಲ್ಲ, ಪ್ರೀತಿಸಲೂ ನನಗೆ ಬರುತ್ತದೆ" ಅವನು ಅವಳ ಮುಂದೆ ಕೈನೀಡಿದ.

ಅವಳು ಅವನ ಕೈಹಿಡಿದಳು. ಅವಳ ಕೈಗಳು ನಡುಗುತ್ತಿದ್ದುವು.

## (೨೬)

ಸಂಜೆಯಾಯಿತು. ಅಂದು ಸಮುದ್ರ ಎಂದಿಗಿಂತಲೂ ಉಗ್ರವಾಗಿಯೇ ಘರ್ಜಿಸುತ್ತಿತ್ತು. ಎಲ್ಲಾ ದಾರಿಗಳೂ ಸಮುದ್ರದ ದಡಕ್ಕೆ ಹೋಗುವ ದಾರಿಗಳಾದುವು. ಕಾರ್ಮಿಕರ ಸಮರಶಕ್ತಿ ಪ್ರವಹಿಸುತ್ತಿದೆ. ಸಮುದ್ರ ದಂಡೆಯಲ್ಲಿ ಮಾನವ ಮಹಾಸಮುದ್ರವೊಂದು ರೂಪುಗೊಂಡಿತು—ಬಹಳ ವಿಶಾಲವೂ ಆಳವೂ ಆದ ಮಾನವ ಮಹಾಸಮುದ್ರ !

ಅನ್ನೆ ಅಂಗಳದಲ್ಲಿ ನಿಂತಿದ್ದಳು. ಏನೇನೋ ನಡೆಯಲಿದೆಯೆಂದು ಅವಳಿಗರಿತಿದೆ. ಸಂಭವಿಸಲಿರುವುದರಲ್ಲಿ ತನ್ನ ಅಣ್ಣಂದಿರೂ ಸೇರಿದ್ದಾರೆಯೆಂಬುದು ಅವಳಿಗೆ ಗೊತ್ತು. ಆ ತೆಳ್ಳಗಿನ ಮನುಷ್ಯ !—ಅವಳಿಗೆ ತಿಳಿಯದ್ದು ಅದೊಂದು ಮಾತ್ರ.

ವೇಲಾಯುಧನ ತಾಯಿ ಕಿರುದಾರಿಯಲ್ಲಿ ನಿಂತು ಅವಳೊಡನೆ ಕೇಳಿದಳು:

"ಮಗಳೇ, ನೀನು ಬರುತ್ತೀಯಾ, ಸಮುದ್ರತೀರಕ್ಕೆ?"

"ಹುಂ. ಇದೊ ಬಂದೆ" ಅವಳು ಅತಿ ಬೇಗನೆ ಬಾಗಿಲನ್ನು ಎಳೆದು ಕಟ್ಟಿ, ಕಿರುದಾರಿಗಿಳಿದು ಓಡಿದಳು.

ಅವರಿಬ್ಬರೂ ಅವಸರವಸರವಾಗಿ ನಡೆದರು. ವೇಲಾಯುಧನ ತಾಯಿ ಹೇಳಿದಳು:

"ಹುಚ್ಚುನಾಯಿಗಳಂತೆ ಸೈನಿಕರು ಓಡಾಡುತ್ತಿದ್ದಾರೆ."

"ಏಕೆ ಅವರು ಹೀಗೆ ಓಡಾಡೋದು?"

"ಏನಾದರೂ ಗಲಾಟೆಯುಂಟಾದೀತೆಂದು."

"ಯಾರು ಗಲಾಟೆ ಉಂಟುಮಾಡೋರು?"

"ಈ ಕೆಲಸಗಾರರು."

"ಏಕೆ?"

"ನಾವು ರಾಜ್ಯ ಆಳಬೇಕೆಂದು, ನಾವು ಹೇಳೋದು."

"ಅದಕ್ಕೆ ಅವರು ಒಪ್ಪುತ್ತಾರೊ?"

"ಒಪ್ಪದಿರುವುದರಿಂದಲೇ ಗಲಾಟೆಯಾಗೋದು."

ಸಂಜೆಯ ಗಾಳಿ ಬೀಸತೊಡಗಿತು. ರಸ್ತೆಗಳ ಪಕ್ಕದಲ್ಲಿ ಅವರು ನಡೆಯುತ್ತಿದ್ದರು. ಜೋಡುಮಾರ್ಗದ ಪಕ್ಕದಲ್ಲಿ ನಿಂತಿದ್ದ ಪೋಲೀಸರ ಒಂದು ಗುಂಪಿನಿಂದ ಒಬ್ಬ ಅನ್ನೆಯೊಡನೆ ಕೇಳಿದ:

"ನೀನು ರೋಕಿಯ ಸಹೋದರಿಯೊ?"

ಅವಳು ಏನೂ ಹೇಳಲಿಲ್ಲ. ಅವಳು ಒಮ್ಮೆ ಅವನತ್ತ ನೋಡಿದಳು. ಅವಳು ನಡುಗಿಬಿಟ್ಟಳು. ಮೊದಲೊಮ್ಮೆ ಅವಳನ್ನು ಹಿಡಿಯಲು ಪ್ರಯತ್ನ ಮಾಡಿದವನಾಗಿದ್ದನವನು. ಅವನೊಡನೆ ಮತ್ತೊಬ್ಬ ಪೋಲೀಸ್ ಕೇಳಿದ:

"ಪರಿಚಯವಿದೆಯೊ?"

"ಹುಂ."

"ಹೇಗಿದೆ?"

"ಪರವಾಯಿಲ್ಲ."

ಅವಳ ಕೈಹಿಡಿದುಕೊಂಡು ವೇಲಾಯುಧನ ತಾಯಿ ಅತಿವೇಗವಾಗಿ ನಡೆದಳು. ಪೋಲೀಸರವನು ಕೂಗಿ ಹೇಳಿದ:

"ಹೋಗು, ಹೋಗು. ಸಿಕ್ಕೀತು."

ವೇಲಾಯುಧನ ತಾಯಿ ಕೇಳಿದಳು:

"ಮಗಳೇ, ನಿನಗೆ ಅವನು ಗೊತ್ತೊ?"

"ಹುಂ. ಅವನು ಒಂದು ದಿನ ರಾತ್ರಿ ಬೇರೆ ಮೂವರು ಪೋಲೀಸರೊಂದಿಗೆ ಬಂದಿದ್ದ. ಆಗ ಅವನು ನನ್ನನ್ನು ಹಿಡಿಯಲು ಪ್ರಯತ್ನ ಮಾಡಿದ್ದ."

"ಹಿಡಿದನೊ?"

"ಇಲ್ಲ. ಗಾಳಿ ಬಂದು ನನ್ನನ್ನು ಅವನಿಂದ ರಕ್ಷಿಸಿದ್ದ."

"ಆ ಗಾಳಿಯೇ ಇಷ್ಟೆಲ್ಲಾ ಗಲಾಟೆ, ಪುಂಡಾಟಿಕೆಗಳನ್ನು ಮಾಡಿಸೋದು. ನನ್ನ ಮಗನನ್ನು ಕೊಲ್ಲಿಸಿದ್ದೂ ಅವನೇ."

"ಆ !"

ಒಂದು ಭಯಂಕರ ಧ್ವನಿ—ದೂರದಿಂದ, ಕಡಲು ದಡವನ್ನು ಆಕ್ರಮಿಸುವಂತೆ !

ಘರ್ಜನೆಗಳು ! ಸಿಂಹ, ಹುಲಿ, ಆನೆ ಮೊದಲಾದ ಪ್ರಾಣಿಗಳೆಲ್ಲಾ ಒಂದಾಗಿ ಆಕ್ರಮಿಸುವಂತೆ !

ರೋದನಗಳು !—ಮರಣರೋದನಗಳಂತೆ !

ಏನೇನೋ ಸಿಡಿದು ಹಾರುತ್ತಿವೆ; ಮುರಿದು ಬೀಳುತ್ತಿವೆ !

ಆರ್ತನಾದಗಳು ! ಆರ್ತನಾದಗಳು ! !

ವೇಲಾಯುಧನ ತಾಯಿ ಅನ್ನೆಯ ಕೈಹಿಡಿದುಕೊಂಡು ಕಿರುದಾರಿಗೆ ಹೋದಳು. ಅನ್ನೆ ಭ್ರಾಂತುಹಿಡಿದವಳಂತೆ ಗೊಣಗಿದಳು:

"ನನ್ನ ಅಣ್ಣಂದಿರು !...... ಕೊಂದರೊ?...... ಕೊಂದರೊ?" ಅವಳು ಮುದುಕಿಯ ಕೈಯಿಂದ ಬಿಡಿಸಿಕೊಂಡು ಓಡಲು ಶ್ರಮಿಸಿದಳು.

ಕೈಯನ್ನು ಬಲವಾಗಿ ಹಿಡಿದುಕೊಂಡು ವೇಲಾಯುಧನ ತಾಯಿ ಕೇಳಿಕೊಂಡಳು:

"ಹೋಗದಿರು ಮಗಳೇ, ಹೋಗದಿರು !"

ಹಿಂದಿನಿಂದ ಯಾರೋ ಓಡಿಬರುವ ಧ್ವನಿ. ವೇಲಾಯುಧನ ತಾಯಿ ಅವಳನ್ನು ದಾರಿಯ ಪಕ್ಕಕ್ಕೆ ಸರಿಸಿ ನಿಲ್ಲಿಸಿದಳು.

ಪ್ರಾಣಭಯದಿಂದಲೋ ಎಂಬಂತೆ ಹತ್ತಿಪ್ಪತ್ತು ಜನರು ಓಡಿಬರುತ್ತಿದ್ದರು. ಒಬ್ಬನು ದಾರಿಯಲ್ಲಿ ಬಿದ್ದುಬಿಟ್ಟ. ಉಳಿದವರು ಅವನನ್ನು ಎತ್ತಿಕೊಂಡು ಓಡಿದರು.

"ರಕ್ತ !—ರಕ್ತ ಹರಿಯುವುದು ನೋಡಿದೆಯೊ?" ಅನ್ನೆ ಕೇಳಿದಳು.

"ಮಾತಾಡಬೇಡ. ಬಾ......" ಅವರು ಅತಿ ವೇಗವಾಗಿ ನಡೆದರು.

ಅಲ್ಲಿ ಹರಿಯುವ ತೊರೆಗೆ ಮರದಿಂದ ನಿರ್ಮಿಸಿದ ಸೇತುವೆ. ಅದನ್ನು ದಾಟಿ ಹೋದರು.

"ಠೇ, ಠೇ, ಠೇ......" ಅಂತರಿಕ್ಷದಿಂದ ಪ್ರತಿಧ್ವನಿ ಕೇಳುತ್ತಿತ್ತು.

"ಸೈನಿಕರು ಗುಂಡು ಹಾರಿಸುತ್ತಿದ್ದಾರೆ" ವೇಲಾಯುಧನ ತಾಯಿ ಹೇಳಿದಳು.

"ಕೊಲ್ಲುತ್ತಾರೆ; ಕೊಲ್ಲುತ್ತಾರೆ"—ಅನ್ನೆ ಗಟ್ಟಿಯಾಗಿ ಹೇಳಿದಳು.

"ಬಾ" ವೇಲಾಯುಧನ ತಾಯಿ ಅವಳ ಕೈಯನ್ನು ಹಿಡಿದೆಳೆದುಕೊಂಡು ಓಡಿದಳು.

ಆಗಲೂ ಬಂದೂಕು ಶಬ್ದ ಆಕಾಶದಲ್ಲಿ ಪ್ರತಿಧ್ವನಿಸುತ್ತಿದ್ದುವು.

× × ×

ಮಧ್ಯರಾತ್ರಿಯಾಯಿತು. ಪಟ್ಟಣವು ಭೀಕರವಾದ ನಿಶ್ಶಬ್ದದಿಂದ ಮಲಗಿದೆ. ಸೈನಿಕರ ಗಾಡಿಗಳ ಓಡಾಟದ ಧ್ವನಿಗಳು, ಹಾರನ್ನುಗಳು ಮಾತ್ರ ಆ ನಿಶ್ಶಬ್ದವನ್ನು ಭೇದಿಸುತ್ತಿದ್ದುವು.

ಅನ್ನೆ ಒಬ್ಬಳೇ ಅಂಗಳದಲ್ಲಿ ನಿಂತಿದ್ದಳು. ಯಾರೋ ಕಿರುದಾರಿಯಲ್ಲಿ ಬರುತ್ತಿದ್ದರು. ಅವಳು ಆಲಿಸಿದಳು. ಅವಳು ಕೇಳಿದಳು:

"ಯಾರದು?"

"ನಾನು." ರೋಕಿ ಅಂಗಳಕ್ಕೆ ಬಂದ.

"ದೊಡ್ಡಣ್ಣನೆಲ್ಲಿ?"

"ಆ!"

"ದೊಡ್ಡಣ್ಣನನ್ನು ನೋಡಲಿಲ್ಲವೆ?"

"ಇಲ್ಲ." ಅವನು ಸೊಂಟದಿಂದ ಒಂದು ಬೆಂಕಿಪೊಟ್ಟಣವನ್ನು ತೆಗೆದು, ಮಾತು ಮುಂದುವರಿಸಿದ:

"ಎರಡು ಮೂರು ಬೆಂಕಿಕಡ್ಡಿ ತೆಗೆದುಕೊಂಡು ಬಾ."

"ಈಗ ಏಕೆ ಬೆಂಕಿಕಡ್ಡಿ?"

"ಬೀಡಿ ಹಚ್ಚಲು."

"ಅಣ್ಣಾ, ನಿನಗೆ ಊಟ ಬೇಡವೊ?"

"ಬೆಂಕಿಕಡ್ಡಿ ತೆಗೆದುಕೊಂಡು ಬಾ" ಅದೊಂದು ಆಜ್ಞೆಯಾಗಿತ್ತು.

ಅನ್ನೆ ಒಳಗೆ ಹೋಗಿ ಬೆಂಕಿಕಡ್ಡಿ ತಂದು ಕೊಟ್ಟಳು. ಅವನು ಅದನ್ನು ತೆಗೆದುಕೊಂಡು ಕಿರುದಾರಿಯತ್ತ ನಡೆದ. ಅವಳು ಕೂಗಿದಳು:

"ಇನ್ನು ಎಲ್ಲಿಗೆ ಹೋಗೋದು?"

ಉತ್ತರವಿಲ್ಲ. ಅವನು ಕತ್ತಲಲ್ಲಿ ಮಾಯವಾದ. ಅವಳು ಚಾವಡಿಗೆ ಹೋಗಿ ಕುಳಿತಳು. ಮತ್ತೂ ಕಿರುದಾರಿಯಲ್ಲಿ ಯಾರೋ ಬರುತ್ತಿರುವಂತೆ ಕೇಳಿಸಿತು. ಅವಳು ಎದ್ದು ಅಂಗಳಕ್ಕೆ ಬಂದಳು. ಆಗ ಅಂತೋಣಿಯು ಅಂಗಳಕ್ಕೆ ಬಂದ. ಅವಳು ಕೇಳಿದಳು:

"ದೊಡ್ಡಣ್ಣನೋ?"

"ಹುಂ. ನೀನೇಕೆ ಅಂಗಳದಲ್ಲಿ ಬಂದು ನಿಂತಿರೋದು?"

"ನಿನ್ನನ್ನು ಕಾಣದ್ದರಿಂದ."

"ರೋಕಿ ಬಂದನೊ?"

"ಬಂದು ಬೆಂಕಿಕಡ್ಡಿ ತೆಗೆದುಕೊಂಡು ಈಗಷ್ಟೆ ಹೋದ."

"ಅವನಿಗೆ ಈಗೇಕಂತೆ ಬೆಂಕಿಕಡ್ಡಿ?"

"ಬೀಡಿ ಹಚ್ಚಲೆಂದು ಹೇಳಿದ."

"ಅವನು ಬೀಡಿ ಸೇದುವುದನ್ನು ನಿಲ್ಲಿಸಿದ್ದಾನಲ್ಲಾ?" ಅಂತೋಣಿ ಆಲೋಚನಾ ಪರನಾದ. ಅವನು ಕೇಳಿದ:

"ಗಾಳಿ ಇಲ್ಲಿಗೆ ಬಂದನೊ?"

"ಇಲ್ಲ."

ಸ್ವಲ್ಪ ದೂರದಿಂದ ಒಂದು ಪ್ರಕಾಶ! ಬಹು ಬೇಗನೆ ಆ ಪ್ರಕಾಶ ವರ್ಧಿಸಿತು. ಕೊನೆಗೆ ಬೆಂಕಿ ಧಗಧಗನೆ ಪ್ರಜ್ವಲಿಸಿ ಉರಿಯುವುದು ಕಂಡಿತು.

"ಮೋಸ ಮಾಡಿಬಿಟ್ಟ!" ಅಂತೋಣಿ ಎದೆಗೆ ಹೊಡೆದುಕೊಂಡ.

ತವಕಗೊಂಡು ಅವಳು ಕೇಳಿದಳು:

"ಏನು? ಏನಣ್ಣಾ?"

"ಅವನು—ಅವನು ಕಂಪೆನಿಗೆ ಬೆಂಕಿ ಹಚ್ಚಿದ.

ಕರೆ, ಕೂಗು, ಆಕ್ರಂದ, ಗಲಾಟೆಗಳ ಧ್ವನಿಗಳು ಕೇಳತೊಡಗಿದವು. ಆಗ ಸೈನಿಕರ ವ್ಯಾನುಗಳ ಓಡಾಟದ ಧ್ವನಿಗಳು ಮತ್ತು ಹಾರ್ನುಗಳು ಕೇಳಿದವು.

ಕಿರುದಾರಿಯಲ್ಲಿ ಯಾರೋ ಓಡುವ ಶಬ್ದ! ಒಟ್ಟಿಗೆ ಯಾರೋ ಘರ್ಜಿಸುವ ಧ್ವನಿ! ಅಲ್ಲಿಂದಲೇ ಒಂದು ಆಕ್ರಂದ!

"ಸಣ್ಣಣ್ಣನ ಸ್ವರ—ಸಣ್ಣಣ್ಣ ಕೂಗಿದ್ದು" ಅವಳು ಕಿರುದಾರಿಯ ಹತ್ತಿರ ಓಡಿದಳು. ಅಂತೋಣಿ ಅವಳನ್ನು ತಡೆದ. ಅವನು ಅವಳನ್ನು ಹಿಡಿದುಕೊಂಡು ಹೋಗಿ ಕೋಣೆಯೊಳಗೆ ಹಾಕಿದ. ಮಡಲಿನ ತಟ್ಟಿಬಾಗಿಲನ್ನು ಗಟ್ಟಿಯಾಗಿ ಕಟ್ಟಿದ. ಅವನು ಕಿರುದಾರಿಯತ್ತ ಓಡಿಹೋಗುವ ಶಬ್ದ ಅವಳಿಗೆ ಕೇಳಿತು.

ಘರ್ಜನೆಗಳು, ಆರ್ತಸ್ವರಗಳು! ಅವು ವ್ಯಾಪಿಸಿಕೊಂಡೇ ಹೋಗುತ್ತಿದ್ದುವು. ಕೊನೆಗೆ ಎಲ್ಲವೂ ಶಾಂತವಾಯಿತು. ನಿಶ್ಶಬ್ದತೆ ವ್ಯಾಪಿಸಿತು. ಅವಳು ಬಾಗಿಲಿನ ಹತ್ತಿರ

ಒಂದು ಕಿವಿಗೊಟ್ಟು ನಿಂತಿದ್ದಳು. ಅಂಗಳದಲ್ಲಿ ನಡೆಯುವ ಕಾಲ ಸಪ್ಪಳ. ಅವಳು ಮೆಲ್ಲಗೆ ಕೇಳಿದಳು:

"ದೊಡ್ಡಣ್ಣನೊ?"

"ಹುಂ ಽ ಽ ಽ" ಸಿಟ್ಟಿನ ಒಂದು ಹೂಂಕಾರವಾಗಿತ್ತು!

ಯಾರೋ ಚಾವಡಿಗೆ ಹತ್ತಿದರು. ಕಟ್ಟಿದ ಬಾಗಿಲ ಹಗ್ಗವನ್ನು ಬಿಚ್ಚುತ್ತಿದ್ದರು. ಅವಳು ಬೆಂಕಿಕಡ್ಡಿ ಹಚ್ಚಿ ದೀಪ ಹಚ್ಚಿದಳು.

ಬಾಗಿಲು ತೆರೆಯಲ್ಪಟ್ಟಿತು. ಬಂದ ವ್ಯಕ್ತಿಯ ಕಾಕಿ ವಸ್ತ್ರವನ್ನು ಕಂಡು ಅವಳು ಹಿಂದಕ್ಕೆ ಸರಿದಳು. ಕಬ್ಬಿಣದಂತೆ ಗಟ್ಟಿಯಾದ ಒಂದು ಕೈ ಅವಳ ತೋಳಿನ ಮೇಲೆ ಬಿತ್ತು.

"ಅಯ್ಯೋ!" ಅವಳು ಕಿರುಚಿದಳು.

ಫಕ್ಕನೆ ಯಾರೋ ಕೋಣೆಯೊಳಗೆ ಓಡಿಬಂದರು. ಗಟ್ಟಿಯಾದ ಒಂದು ಘರ್ಜನೆ ಮತ್ತು ಒಂದು ಏಟು!

ಕಾಕಿ ವಸ್ತ್ರಧಾರಿಯು ಹಿಂದಕ್ಕೆ ತಿರುಗಿದ. ಆ ತೆಳ್ಳಗಿನ ಮನುಷ್ಯನ ಕೈ ಒಂದು ಕಠಾರಿಯೊಂದಿಗೆ ಮೇಲೆ ಹೋಯಿತು. ಕಾಕಿ ವಸ್ತ್ರಧಾರಿಯು ಕಠಾರಿಯ ಕೈಗೆ ಒಂದೇಟು ಬಿಗಿದ. ಕಠಾರಿಯು ಕೈಯಿಂದ ಕೆಳಗೆ ಬಿತ್ತು. ಅವನು ಮಿಂಚಿನ ವೇಗದಲ್ಲಿ ತೆಳ್ಳಗಿನ ಮನುಷ್ಯನನ್ನು ಹಿಡಿದುಕೊಂಡ. ಆ ಕಬ್ಬಿಣದಂತಹ ಕೈಯ ಹಿಡಿತಕ್ಕೆ ಅವನು ಸಿಕ್ಕಿಬಿದ್ದ.

ಕಾಕಿ ಉಡುಪುಧಾರಿಯು ಆ ತೆಳ್ಳಗಿನ ಮನುಷ್ಯನನ್ನು ಬಾಗಿಲಿಗೆ ಕಟ್ಟುವ ಹಗ್ಗವನ್ನು ತೆಗೆದುಕೊಂಡು ಕಂಬಕ್ಕೆ ಕಟ್ಟಿಹಾಕಿದ.

ದೀಪ ಆರಿತು. ಅನ್ನೆ ಹೊರಳಾಡಿದಳು. ತೆಳ್ಳಗಿನ ಮನುಷ್ಯ ಬಲವಾಗಿ ಘರ್ಜಿಸಿದ.

"ದೇವರೇ!" ಅವಳು ಅತೀವ ದೀನ ಸ್ವರದಿಂದ ಕೂಗಿದಳು.

ಒಂದು ಘರ್ಜನೆ! ಸಾಹಸಪೂರ್ಣವಾದ ಒಂದು ಹೊರಳಾಟ. ಬಿದಿರಿನ ಕಂಬ ಪಟಪಟನೆ ಒಡೆಯಿತು. ಅದು ಜಜ್ಜಿ ಮುರಿಯಿತು.

ಮನೆಯ ಮಾಡು ಮುರಿದುಬಿತ್ತು.

ಮತ್ತೊಮ್ಮೆ ಬಲವಾದ ಒಂದು ಘರ್ಜನೆ.

"ದೇವರೇ!"

---